THE
KARNATAKA GRANTHAMALA
SERIES No. 98.

---

# ನಡೆವಳಿ.

---

ಕಿಂಡರ್‌ಗಾರ್ಟನ್ ಕಥೆಗಳು, ಜರ್ಮನ್ ಸಾಮ್ರಾಜ್ಯ, ಉನ್ಮತ್ತೆ, ಉತ್ತಮ,
ಪ್ರಫುಲ್ಲೆ, ಸಾಗರಪ್ರಪಂಚ, ಶೋಧನಕ್ರಮ, ಪರೀಕ್ಷೆಗಳಲ್ಲಿ
ಉತ್ತರಬರೆಯುವ ವಿಧಾನ, ಟಿಪ್ಪಣಿಗಳ ಪುಸ್ತಕ, ಮಕ್ಕಳ
ಪುಸ್ತಕಗಳು ಮೊದಲಾದುವನ್ನು ರಚಿಸಿರುವ

ಜೆ. ಕೃಷ್ಣಶಾಸ್ತ್ರಿ,
ಅಸಿಸ್ಟೆಂಟ್ ಮಾಸ್ಟರ್ ನಾರ್ಮಲ್‌ಸ್ಕೂಲ್, ಹಾಸನ
ಇವರಂದ ವಿರಚಿಸಲ್ಪಟ್ಟುದು.



MYSORE:
PRINTED AT THE G. T. A. PRESS
1921

GOVERNMENT TRAINING COLLEGE, MYSORE

*Dated 27th June, 1916.*

Mr. J. Krishna Sastry, author of this little book was kind enough to read to me the several essays in the course of preparation and I must state that I have derived considerable enjoyment and information. He is a well known Kannada writer of great scholarship and clear thinking and I feel confident that the book will eminently serve the purpose for which it is intended.

In compiling these essays the author has kept in view a most important principle *viz.*, gradual development, and this feature ought to recommend its use both to the young and the old alike. The book not only treats of moral subjects, but touches on some of the fundamental studies like Hygiene, Physiology and Economics and the instruction is conveyed in a simple homely Kannada with plenty of apt and familiar illustrations.

So far as I can judge the great merit of the book is that it supplies a long-felt want in our schools. It is a suitable book which the pupil and the teacher alike can use either in the composition class or in the teaching of moral lessons, or as a reference book. I recognise with considerable pleasure that in all scientific informations which he has introduced in the book, he is at once correct and up-to-date and without assuming the airs of an abstract theorist, the author treats even philosophical topics in quite an understandable way.

I wish the author produces more popular works on scientific subjects and hope that he will be given due encouragement which he richly deserves.

(Signed) C. R. NARAYANA RAO,

*Offg. Principal.*

DEDICATED WITH KIND PERMISSION

TO

RAJASEVADHURINA SIR, M. KANTHARAJA URS, B.A., K.C.S.I., C.I.E.,

DEWAN OF MYSORE,

AS A TOKEN OF RESPECTFUL GRATITUDE,

BY

THE AUTHOR.

# ಪ್ರಸ್ತಾವನೆ.

---

ಪ್ರಪಂಚದ ಸುಸ್ಥಿತಿಗೂ ಆಮುಷ್ಮಿಕ ಸುಖಕ್ಕೂ ನೀತಿಯೇ ಮೂಲಾಧಾರವಾದುದು. ಎಂತಹ ವಿದ್ಯಾವಂತನಾದರೂ ಎಂತಹ ಸತ್ಕುಲಪ್ರಸೂತನಾದರೂ ಮನುಷ್ಯನು ನೀತಿಪರನಾಗದಿದ್ದರೆ ಅಂತಹವನು ಲೋಕೋಪಕಾರಿಯಾಗದಿರುವುದು ಮಾತ್ರವಲ್ಲದೆ ಲೋಕಕಂಟಕನೇ ಆಗುವನೆಂಬುದಕ್ಕೆ ರಾಮಾಯಣ ಮಹಾಭಾರತಗಳಲ್ಲೂ ಪ್ರಪಂಚದ ಇತರ ಚರಿತ್ರೆಗಳಲ್ಲೂ ಎಷ್ಟೋ ನಿದರ್ಶನಗಳುಂಟು. ನೀತಿಯನ್ನು ನಡತೆ, ನಡೆವಳಿ, ಧರ್ಮ, ನ್ಯಾಯ, ಮೊದಲಾದ ಹಲವು ಬಗೆಗಳಲ್ಲಿ ಗೌರವಿಸುತ್ತ ಜನಗಳು ಆರಾಧಿಸುವರು.

ನಮ್ಮ ಭವಿಷ್ಯಜ್ಜನಾಂಗವಾದ ವಿದ್ಯಾರ್ಥಿಮಂಡಲಿಯು ಒಳ್ಳೆಯ ನಡತೆಯನ್ನಾಚರಿಸುತ್ತ ಸತ್ಪ್ರಜೆಗಳಾಗಲೆಂಬ ಉದ್ದೇಶದಿಂದ ನಮ್ಮ ದೇಶದ ಪಾಠಶಾಲೆಗಳಲ್ಲೆಲ್ಲಾ ನೀತಿಬೋಧೆಯು ಈಗ್ಗೆ ಸುಮಾರು ೧೪ ವರ್ಷಗಳಿಂದ ನಡೆಯಿಸಲ್ಪಡುತ್ತಲಿದೆಯಷ್ಟೆ. ಅನೇಕ ವರ್ಷಗಳ ಕಾಲ ಮೈಸೂರು ಟ್ರೈನಿಂಗ್ ಕಾಲೇಜಿನಲ್ಲಿ ನೀತಿಪಾಠವನ್ನೂ ವಾಕ್ಯರಚನೆಯನ್ನೂ ಬೋಧಿಸುತ್ತ ಪಡೆದ ನನ್ನ ಅನುಭವದ ಜತೆಗೆ ಪ್ರಸಿದ್ಧವಾದ ಇಂಗ್ಲಿಷ್ ಪುಸ್ತಕಗಳಿಂದ ಪಡೆದ ತಿಳುವಳಿಕೆಯನ್ನೂ ಸೇರಿಸಿಕೊಂಡು ಈ ಪುಸ್ತಕವು ಬರೆಯಲ್ಪಟ್ಟದೆ. ನೀತಿಶಾಸ್ತ್ರವೆಂಬುದೊಂದಪಾರಸಾಗರವೇ ಸರಿ. ಅದನ್ನೆಲ್ಲಾ ಒಂದು ಸಣ್ಣ ಪುಸ್ತಕದಲ್ಲಿ ನಿರೂಪಿಸಲೆಳಸುವುದೂ ಹಾಸ್ಯಾಸ್ಪದವೇ. ಆದರೂ ದಿಗ್ದರ್ಶನಕ್ಕಾಗಿ ಮನುಷ್ಯರ ನಿತ್ಯಗಟ್ಟೆಯ ನಡೆವಳಿಕೆಗಳು ಮೊದಲುಗೊಂಡು ಆ ಜೀವಿತಕಾಲವೂ ಆಚರಿಸಬೇಕಾದವುಗಳ ಮುಖ್ಯಾಂಶಗಳನ್ನುಮಾತ್ರ ಈ ಪುಸ್ತಕದಲ್ಲಿ ತಕ್ಕಮಟ್ಟಿಗೆ ತಿಳಿಯಿಸಿದೆ.

ಅಖಿಲಜನಗಳ ಸದಾಚರಣೆಗೂ, ನಿಖಿಲಪಾಠಶಾಲೆಗಳ ನೀತಿಬೋಧೆಗೂ, ಲೋವರ್ ಮತ್ತು ಅಪ್ಪರ್‌ಸೆಕೆಂಡರಿಯ ವಿದ್ಯಾರ್ಥಿಗಳ ವಾಕ್ಯರಚನೆಗೂ ಟ್ರೈನಿಂಗ್‌ನಲ್ಲಿರುವ ಮತ್ತು ಇತರ ಸಮಸ್ತ ಉಪಾಧ್ಯಾಯರುಗಳ

ಶಾಲಾಸಂವಿಧಾನ (School discipty) ಕ್ಕೂ ಹೀಗೆ ಸಕಲ ಸ್ತ್ರೀಪುರುಷ ವಾಚಕವರ್ಗಕ್ಕೂ ಅನುಕೂಲವಾಗಬೇಕೆಂಬ ಹಾರಯಿಕೆಯಿಂದ ಈ ಪುಸ್ತಕವು ಬರೆಯಲ್ಪಟ್ಟದೆ.

ಈ ಪುಸ್ತಕವನ್ನು ಬರೆಯುವಾಗ ಹಲವುಬಗೆಯ ಸಲಹೆಗಳನ್ನೂ ಬುದ್ಧಿವಾದಗಳನ್ನೂ ಪ್ರತ್ಯಕ್ಷವಾಗಿಯೂ ಗ್ರಂಥರೂಪವಾಗಿಯೂ ದಯೆಪಾಲಿಸಿ ಉಪಕರಿಸಿದ ಮಹನೀಯರನ್ನು ಭಕ್ತಿ ಕೃತಜ್ಞತೆಗಳಿಂದ ವಂದಿಸುತ್ತೇನೆ. ನನ್ನ ಇತರ ಕೆಲವು ಗ್ರಂಥಗಳಂತೆ ಇದನ್ನೂ ಕರ್ಣಾಟಕಗ್ರಂಥಮಾಲೆಗೆ ಪೋಣಿಸಿ ಭಾಷಾಮಾತೆಯನ್ನು ಸೇವಿಸುತ್ತಲೂ ತನ್ನೂಲಕ ನನ್ನನ್ನು ಪ್ರೋತ್ಸಾಹಗೊಳಿಸುತ್ತಲೂ ನೀತಿಯವತಾರವೋ ಎಂಬಂತಿದ್ದ ಕೀರ್ತಿಶೇಷರಾದ ಮ|| ರಾ|| ಬಾಪು ಸುಬ್ಬರಾವ್ ಬಿ. ಎ. ಯವರ ಆತ್ಮಕ್ಕೆ ಅಖಂಡಾನಂದವನ್ನು ಅನುಗ್ರಹಿಸಬೇಕೆಂದು ಅನಂತಮಹಿಮನೂ ಅನಂತನೂ ಆದ ಜಗದೀಶ್ವರನನ್ನು ಅನವರತವೂ ಪ್ರಾರ್ಥಿಸುತ್ತಿದ್ದೇನೆ. ಮ|| ರಾ|| ಸುಬ್ಬರಾಯರು ಕೈಗೊಂಡಿದ್ದ ಇಂತಹ ಕೆಲಸಗಳನ್ನು ಸಾಧ್ಯವಾದಮಟ್ಟಿಗೂ ಕೈಗೂಡಿಸುತ್ತ ಸುಪುತ್ರರೆಂದೆನಿಸಿಕೊಂಡಿರುವ ಮತ್ತು ಈ ಪುಸ್ತಕದ ಮುದ್ರಣಕಾರ್ಯವನ್ನು ಪೂರ್ಣಗೊಳಿಸುವುದರಲ್ಲಿ ನನಗೋಸ್ಕರ ಹೆಚ್ಚುಶ್ರಮವನ್ನು ವಹಿಸಿದ ವೆಟರಿನೆರಿ ಡಾಕ್ಟರ್ ಮ|| ರಾ|| ಬಾಪು ರಘುನಾಥರಾಯರವರಿಗೆ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಜಿ. ಕೃಷ್ಣಶಾಸ್ತ್ರಿ.

ತಾ|| 5—12—21
ಹಾಸನ

1 ನೇ ಅಸಿಸ್ಟೆಂಟ್‌ಮಾಸ್ಟರ್,
ನಾರ್ಮಲ್‌ಸ್ಕೂಲ್, ಹಾಸನ.

॥ ಶ್ರೀ ॥

# ನಡೆವಳಿ.



## ಪೀಠಿಕೆ.



ಮನುಷ್ಯರು ಸಂಘದಲ್ಲಿ ಜೀವಿಸತಕ್ಕ ಪ್ರಾಣಿಗಳು. ಲೋಕದಲ್ಲಿ ಗುಂಪುಗುಂಪಾಗಿ ಬಾಳುವ ಪ್ರಾಣಿಗಳೆಲ್ಲಾ ಸಾಮಾನ್ಯವಾಗಿ ಒಕ್ಕಟ್ಟಾಗಿ ಕೆಲಸಮಾಡುತ್ತ, ತಮ್ಮ ಗುಂಪಿನಲ್ಲಿರುವ ಪ್ರತಿಯೊಂದು ವ್ಯಕ್ತಿಗೂ ಒಳ್ಳೆಯದಾಗತಕ್ಕ ಏರ್ಪಾಡುಗಳನ್ನು ಮಾಡಿಕೊಂಡಿರುತ್ತವೆ. ಇವುಗಳ ಪ್ರತಿಯೊಂದು ಗುಂಪಿಗೂ ಒಂದೊಂದು ಅಧಿಪತಿಯುಂಟು. ಉಳಿದವುಗಳೆಲ್ಲಾ ಅದರ ಅನುಜ್ಞೆಯಂತೆ ನಡೆವುವು. ಈ ಪ್ರಾಣಿಗಳಲ್ಲಿ ಪರಸ್ಪರಸಹಾಯ, ದೊಡ್ಡವರು ಚಿಕ್ಕವರು ಎಂಬ ತಾರತಮ್ಯ, ಸ್ನೇಹ, ಕರುಣ, ಸರ್ವದಾಕೆಲಸ ಮಾಡುತ್ತಿರುವ ಸ್ವಭಾವ—ಇಂತಹ ನಡೆವಳಿಕೆಗಳು ಬಲುಮಟ್ಟಿಗೂ ಬೇರೂರಿರುತ್ತವೆ. ಇರುವೆ, ಜೇನುಹುಳು, ಆನೆ—ಇಂತಹ ಕೆಲವು ಪ್ರಾಣಿಗಳು ಮೇಲೆ ಕಂಡ ಅಂಶಗಳಿಗೆ ಒಳ್ಳೆಯ ಉದಾಹರಣೆಗಳಾಗಿವೆ. ಈ ಪ್ರಾಣಿಗಳಿಗೆ ಚಟುವಟಿಕೆಯೂ, ಬುದ್ಧಿವಿಕಾಸವೂ ಇತರ ಪ್ರಾಣಿಗಳಿಗಿಂತ ಸ್ವಲ್ಪಮಟ್ಟಿಗೆ ಹೆಚ್ಚಾಗಿಯೇ ಇರುವುವು.

ಹೀಗೆ ತಿರ್ಯಗ್ಜಂತುಗಳು ಕೂಡ ಸಂಘದಲ್ಲಿ ಜೀವಿಸುವುದಕ್ಕೆ ಅರ್ಹವಾದ ಸುಗುಣಗಳನ್ನು ಪಡೆದಿರುವಲ್ಲಿ ಸರ್ವೋತ್ತಮವಾದ ಬುದ್ಧಿಶಕ್ತಿಯುಳ್ಳ

ವನೆಂದು ಹೆಸರುಗೊಂಡು ಸಂಘಜೀವಿಯಾಗಿರುವ ಮನುಷ್ಯನು ಇತರ ಮನುಷ್ಯರ ಸಂಗಡ ಎಷ್ಟುಮಟ್ಟಿನ ತಿಳವಳಿಕೆಯಿಂದ ನಡೆದುಕೊಳ್ಳಬೇಕೆಂಬುದನ್ನು ಹೇಳಬೇಕಾದುದೇ ಇಲ್ಲ.

ಜನಗಳು ಮನಸ್ಸಿಟ್ಟು ಪರಸ್ಪರವಾಗಿ ಆಚರಿಸುವ ಕ್ರಮವಿಶೇಷವನ್ನು ನಡೆವಳಿಕೆ, ನಡೆವಳಿ ಅಥವಾ ನಡತೆಯೆನ್ನುವರು. ನಡತೆಗೆ ಸಂಬಂಧಪಟ್ಟ ವಿಷಯಗಳನ್ನು ನೀತಿಶಾಸ್ತ್ರವು ವಿವರಿಸುವುದು.

ನಡತೆಯ ಕಟ್ಟಿನಿಂದಲೇ ಲೋಕದಲ್ಲಿ ಸಮಸ್ತವ್ಯಾಪಾರಗಳೂ ನಡೆಯುತ್ತಿರುವುದು. ನಡತೆಯೊಂದಿಲ್ಲದಿದ್ದಲ್ಲಿ ಒಬ್ಬರನ್ನಾತನ್ನು ಮತ್ತೊಬ್ಬರು ಕೇಳದೆ ಎಲ್ಲವೂ ಅನಾಯಕವಾಗಿ ಹೋಗುತ್ತಿದ್ದಿತು. ಒಳ್ಳೆಯವರು, ಕೆಟ್ಟವರು; ದೊಡ್ಡವರು, ಚಿಕ್ಕವರು; ಸ್ವಾಮಿಗಳು, ಭೃತ್ಯರು; ಧನಿಕರು, ಬಡವರು; ವಿದ್ವಾಂಸರು, ದಡ್ಡರು; ರಾಜಪ್ರಜೆ—ಎಂಬ ಯಾವಭೇದವೂ ಇಲ್ಲದೆ ಎಲ್ಲವೂ ಅವ್ಯವಸ್ಥೆಯಲ್ಲಿರಬೇಕಾಗಿದ್ದಿತು. ಆದರೆ ಲೋಕವು ಹಾಗೆ ನಾಶವಾಗಕೂಡದೆಂಬ ಸಂಕಲ್ಪದಿಂದಲೇ ಜಗದೀಶ್ವರನು ನೀತಿಮಾರ್ಗವನ್ನು ತೋರಿಸಿರುವನು. ನೀತಿಗೆ ಪಕ್ಷಪಾತವಿಲ್ಲ. ಇದು ಸೂರ್ಯನಂತೆ ಸರ್ವತ್ರ ಸಮದೃಷ್ಟಿಯುಳ್ಳುದು. ಆದುದರಿಂದಲೇ ಪ್ರಪಂಚದ ಎಲ್ಲಾ ಮತದವರೂ ಏಕವಾಕ್ಯತೆಯಿಂದ ಜಯಘೋಷಮಾಡುತ್ತ ನೀತಿಯನ್ನು ಗೌರವಿಸುತ್ತಿರುವರು. ಸುಳ್ಳು ಹೇಳಕೂಡದು, ಕಳವು ಮಾಡಬಾರದು, ಗುರುಹಿರಿಯರಿಗೆ ವಿಧೇಯರಾಗಿರಬೇಕು, ಬಡವರನ್ನು ಕನಿಕರದಿಂದ ಕಾಣಬೇಕು, ಪರಸ್ಪರ ಮರ್ಯಾದೆಯಿಂದ ನಡೆದುಕೊಳ್ಳಬೇಕು, ಎಂಬಂತಹ ನೀತಿರತ್ನಗಳನ್ನು ಯಾವ ಮತದವರಾದರೂ ತಿರಸ್ಕರಿಸುವರೆ? ಹೀಗೆನ್ನುವಲ್ಲಿ ನೀತಿಯು ಲೋಕಪೂಜ್ಯವೆಂದಾಯಿತಲ್ಲವೆ? ನೀತಿಯವಿಚಾರದಲ್ಲಿ ಪ್ರತಿಯೊಬ್ಬರೂ ತಕ್ಕಮಟ್ಟಿಗಾದರೂ ತಿಳವಳಿಕೆಯನ್ನು ಪಡೆದು ಅದರಂತೆ ನಡೆದುಕೊಳ್ಳುತಬಂದರೆ ಯಾರಿಗೂ ಯಾವ ಕಷ್ಟನಿಷ್ಠುರಗಳೂ

ಇಲ್ಲದೆ ಲೋಕವೆಲ್ಲಾ ರಾಮರಾಜ್ಯವಾಗಿ ಪರಿಣಮಿಸುವುದು. ಕೊಡು ವುದು ತೆಗೆದುಕೊಳ್ಳುವುದು ಅಂದರೆ ಪರಸ್ಪರವಾಗಿ ಗುಣವನ್ನು ಕೊಟ್ಟು ಗುಣವನ್ನು ಪಡೆಯುವುದು ಎಂಬುದರಲ್ಲಿ ನೀತಿಯ ಅರ್ಥವೆಲ್ಲಾ ಅಡಕ ವಾಗಿದೆ. ಯಾರೂ ಇನ್ನೊಬ್ಬರ ಹಂಗಿಲ್ಲದೆ ಬಾಳುವುದಕ್ಕಾಗುವುದಿಲ್ಲ. ಪ್ರತಿಯೊಬ್ಬರೂ ಅನ್ನ, ಬಟ್ಟೆ, ವಿದ್ಯೆ, ಬುದ್ಧಿ, ಇಂತಹ ಯಾವ ಅಂಶದಲ್ಲಿ ಯಾದರೂ, ಇತರರ ಹಂಗಿಗೆ ಒಳಪಡದೆ ಬಾಳುವುದಕ್ಕೆ ಆಗುವುದೇ ಇಲ್ಲ.

ನಡತೆಯು ಬರೀ ತಿಳಿವಳಿಕೆಗಿಂತ ಮುಖ್ಯವಾದುದು. ಲೋಕದಲ್ಲಿ ಉಪಕಾರಾಚರಣೆಗಳು ನಡತೆಯಿಂದಲ್ಲದೆ ಬರೀ ತಿಳಿವಳಿಕೆಯಿಂದಲ್ಲ. ಒಂದುವೇಳೆ ಒಬ್ಬ ಮನುಷ್ಯನು ವಿದ್ಯಾಬುದ್ಧಿಗಳಲ್ಲಿ ಎಷ್ಟೇ ಹಿಂದಾಗಿದ್ದರೂ, ಒಳ್ಳೆಯ ನಡತೆಯುಳ್ಳವನಾಗಿದ್ದರೆ ಅವನಿಂದ ಇತರರಿಗೆ ಏನೂ ತೊಂದರೆ ಯಾಗದಿರುವುದು ಮಾತ್ರವಲ್ಲದೆ ಉತ್ತಮವಾದ ಸಹಾಯವೂ ಆಗುವುದು. ನಮ್ಮ ದೇಶದ ರೈತರನ್ನು ಈ ವಿಷಯದಲ್ಲಿ ಉದಾಹರಿಸಬಹುದು. ತಿಳಿವ ಳಿಕೆಯನ್ನು ಮಾತ್ರ ಪಡೆದು ನಡತೆಯ ಹಾದಿಯನ್ನೇ ಅರಿಯದ ಮನುಷ್ಯ ನಿಂದಲಾದರೋ ಯಾರಿಗೂ ಏನೂ ಸಹಾಯವಾಗದೆ ಎಲ್ಲವೂ ಸ್ವಾರ್ಥದಲ್ಲಿ ಯೇ ಮುಗಿವುದು. ಇಷ್ಟೇ ಅಲ್ಲ ತಿಳಿವಳಿಕೆಯು ಕೆಟ್ಟ ನಡತೆಯೊಡನೆ ಬೆರೆತರೆ ಇತರರಿಗೆ ಬಹಳ ಅನರ್ಥಗಳನ್ನುಂಟುಮಾಡುತ್ತ ಲೋಕಕಂಟಕ ವಾಗುವುದು. ಹೇಗೆಂದರೆ—ಕೇವಲ ವಿದ್ಯಾವಂತರೂ, ಕುಶಾಗ್ರಬುದ್ಧಿಗಳೂ ಆದವರನೇಕರು ಕೇವಲ ಹೀನವಾದ ದುಷ್ಕೃತ್ಯಗಳನ್ನು ಮಾಡಿ ತಾವೂ ಕೆಡುತ್ತಲೂ ಸಾಂಕ್ರಾಮಿಕ ಜಾಡ್ಯಗಳಂತೆ ಇತರರನ್ನೂ ಕೆಡಿಸುತ್ತಲೂ ಇರುವರು. ದುರ್ಮಾರ್ಗದಲ್ಲಿ ಪ್ರವರ್ತಿಸಿದ ತಿಳಿವಳಿಕೆಯಿಂದ ಉಂಟಾಗತಕ್ಕ ಅನರ್ಥಗಳು ಸಾಧಾರಣವಾದುವುಗಳಲ್ಲ.

ಮನುಷ್ಯನು ಹೇಗಿರುವನೆಂಬುದು ಅವನ ರೂಪು, ಸಂಪತ್ತು, ಅಧಿ ಕಾರ, ಯೌವನ, ಪದವಿ—ಇಂತಹವುಗಳಿಂದ ನಿರ್ಧರಿಸಲ್ಪಡತಕ್ಕದಲ್ಲ

ವೆಂತಲೂ ಅವನ ನಡತೆಯಿಂದ ಮಾತ್ರ ನಿಶ್ಚಯಿಸಲ್ಪಡತಕ್ಕುದೆಂದೂ ದೊಡ್ಡವರು ಹೇಳುವರು.

ಪುಸ್ತಕದಲ್ಲಿ ಓದಿ ತಿಳಿದುಕೊಳ್ಳುವ ಮಾತ್ರದಿಂದ ನಡತೆಯು ಬರ ತಕ್ಕುದಲ್ಲವೆಂತಲೂ ಆಚರಿಸಿ ಆಚರಿಸಿ ಅಭ್ಯಾಸ ಮಾಡಲ್ಪಡತಕ್ಕುದೆಂತಲೂ ಪ್ರಾಜ್ಞರು ಹೇಳುವರು. ಇದು ನಿಜ. ಹಾಗೆ ಕಲಿತುಕೊಳ್ಳುವುದಕ್ಕೆ ಬಾಲ್ಯದಿಂದಲೂ ಪ್ರಾರಂಭಿಸಬೇಕು. ಆದರೆ ಬಾಲ್ಯದಲ್ಲಿ ಸ್ವಬುದ್ಧಿ ಸಾಲ ದುದರಿಂದ ತಾಯ್ತಂದೆಗಳೂ, ಉಪಾಧ್ಯಾಯರೂ, ಈ ನೀತಿಶಿಕ್ಷಣವನ್ನು ನಡೆಯಿಸಬೇಕು. ಹೀಗೆ ಶೈಶವದಲ್ಲಿ ಕಲಿಯತೊಡಗಿದ ಒಳ್ಳೆಯ ನಡತೆ ಯನ್ನು, ಒಳ್ಳೆಯ ಪುಸ್ತಕಗಳನ್ನೋದುವುದು, ಅನುಭವ—ಇವೇ ಮುಂತಾ ದುವುಗಳಿಂದ ಹೆಚ್ಚಿಸಿಕೊಳ್ಳಬಹುದು.

ಒಳ್ಳೆಯ ನಡತೆಗಳಿಗೆ ಮಿತಿಯಿಲ್ಲ. ಅವು ಇಂತಿಂತಹವೇ ಸರಿ, ಇಷ್ಟೇಸರಿ, ಎಂದು ನಿರ್ಧರಿಸಿ ಹೇಳಹೋಗುವವನು ಆಕಾಶದಲ್ಲಿರುವ ನಕ್ಷತ್ರ ಗಳನ್ನೆಲ್ಲಾ ಎಣಿಸಿಬಿಡುವೆನೆಂದು ಹೇಳುವ ಮರುಳನಂತೆ, ಅಪಹಾಸಕ್ಕೆ ಗುರಿ ಯಾಗುವನು.

ಹೀಗೆ ಅಪಾರಮಹಿಮೆಯುಳ್ಳ ನಡತೆಯ ವಿಷಯವನ್ನೆಲ್ಲಾ ಇಂತ ಹುದೊಂದು ಸಣ್ಣ ಪುಸ್ತಕದಲ್ಲಿಯೇ ಸಂಪೂರ್ಣವಾಗಿ ತಿಳಿಯಪಡಿಸುವುದು ಅಸಾಧ್ಯ. ಆದುದರಿಂದ ವಾಚಕರಿಗೆ ಮಾರ್ಗದರ್ಶಕಗಳಾಗಿರುವಂತೆ ಪ್ರಸಿದ್ಧ ವಾದ ಕೆಲವು ಅಂಶಗಳನ್ನು ಮಾತ್ರ ಆರಿಸಿಕೊಂಡು ಪ್ರತಿಯೊಂದು ವಿಷಯದಲ್ಲೂ ಒಂದೊಂದು ಪ್ರಬಂಧವನ್ನು ಬರೆದು ತಕ್ಕಮಟ್ಟಿಗೆ ವಿವರಿಸ ಲಾಗುವುದು



## 1. ಮರ್ಯಾದೆ.

ಮರ್ಯಾದೆಯೆಂದರೆ ಸಂಸ್ಕೃತದಲ್ಲಿ ಎಲ್ಲೆ ಎಂದು ಅರ್ಥ. ಇದನ್ನು ಆತ್ಮ ಸಂಯಮನವೆಂದೂ ಹೇಳಬಹುದು. ನಾವು ಒಳ್ಳೆಯ ಸ್ವಭಾವವುಳ್ಳವರಾಗಿರುವುದು, ಇತರರನ್ನು ಗೌರವ, ದಯೆ, ದಾಕ್ಷಿಣ್ಯ, ಸಂತೋಷಚಿತ್ತಗಳಿಂದ ಕಾಣುವುದು—ಇವೇ ಮೊದಲಾದ ಎಷ್ಟೋ ಅಂಶಗಳು ಇದರಲ್ಲಿ ಸೇರಿವೆ. ಮರ್ಯಾದೆಯಿಲ್ಲದ ಮನುಷ್ಯನು ರೆಕ್ಕೆಗಳಿಲ್ಲದ ಹಕ್ಕಿಯಂತೆಯೂ, ಒಳ್ಳೆಯ ಬಣ್ಣವಾಗಲಿ ಸುಗಂಧವಾಗಲಿ ಇಲ್ಲದ ಪುಷ್ಪದಂತೆಯೂ ಆಗುವುದರಿಂದ ಜನಗಳ ನಡುವೆ ಸರಿಯಾಗಿ ಬಾಳಲಾರನು. ನಾವು ಹೇಗೆ ನಡೆದುಕೊಂಡರೆ ಸತ್ಪುರುಷರಿಗೆ ನಮ್ಮಲ್ಲಿ ಗೌರವ, ಪ್ರೀತಿ, ವಿಶ್ವಾಸ, ಸಂತೋಷ ಮೊದಲಾದ ಸದಭಿಪ್ರಾಯಗಳು ಹುಟ್ಟುವುವೋ ಅಂತಹ ನಡೆವಳಿಕೆಗಳನ್ನು ಮರ್ಯಾದೆಯೆನ್ನಬಹುದು. ಇತರರಿಗೆ ಅವರವರ ಯೋಗ್ಯತೆ ಘನತೆಗಳಿಗನುಸಾರವಾಗಿ, ಆಯಾ ಕಾಲದಲ್ಲಿ, ನಮ್ಮಿಂದ ಆಗಬಹುದಾದಷ್ಟನ್ನು ಸೌಜನ್ಯದಿಂದ ಮಾಡುವುದೂ ನಿಜವಾದ ಮರ್ಯಾದೆಯೇ. ಧೀರರೂ, ಶೂರರೂ, ಘನವಂತರೂ ಆದವರು ಸರ್ವದಾ ಮರ್ಯಾದೆಯುಳ್ಳವರಾಗಿರುತ್ತಾರೆ. ಇಂತಹವರಲ್ಲಿ ಡ್ಯೂಕ್ ಆಫ್ ವೆಲಿಂಗ್ಟನ್, ಜಾರ್ಜ್ ವಾಷಿಂಗ್ಟನ್ ಮೊದಲಾದ ಪಾಶ್ಚಾತ್ಯರೂ ನಮ್ಮ ದೇಶದ ರಾಜಪುತ್ರರುಗಳೂ ಸುಪ್ರಸಿದ್ಧರಾಗಿದಾರೆ. ಒಬ್ಬನು ಎಷ್ಟೇ ಆರ್ದ್ರ ಹೃದಯನೂ ಪರೋಪಕಾರಿಯೂ ಆಗಿದ್ದರೂ, ಹೊರಗಿನ ನಡೆವಳಿಕೆಯಲ್ಲಿ ಮರ್ಯಾದೆಯಿಲ್ಲದ ಒರಟನಾದರೆ ದೊಡ್ಡಮನುಷ್ಯನೆನಿಸಿಕೊಳ್ಳಲಾರನು.

'ನಾವು ಮಾಡತಕ್ಕ ಕೆಲಸವನ್ನು ಚೆನ್ನಾಗಿ ಮಾಡಿದರಾಯಿತು. ಮರ್ಯಾದೆ ಮೊದಲಾದ ಜಂಬಗಳನ್ನಿಟ್ಟುಕೊಂಡು ಬಣ ಉಪಚಾರಗಳನ್ನು ಹೇಳುವುದರಿಂದ ಪ್ರಯೋಜನವೇನು?' ಎಂದು ಕೆಲವರು ಆಕ್ಷೇಪಿಸಿಯಾರು. ಬರೀ ಬಣಉಪಚಾರಗಳನ್ನು ಹೇಳುತ್ತ ಕಾರ್ಯದಲ್ಲಿ ಕಳ್ಳನಾಗಿರುವುದು

ಎಷ್ಟು ಕೆಟ್ಟುದೋ, ಉಪಕಾರಗಳನ್ನು ಮಾಡಿದಮಾತ್ರದಿಂದಲೇ ಮರ್ಯಾದೆಯನ್ನು ಬಿಟ್ಟುಬಿಡಬೇಕೆಂಬುದೂ ಅಷ್ಟೇ ಕೆಟ್ಟುದು.

ಇತರರಿಗೆ ಮೇಲನ್ನುಂಟುಮಾಡುವುದರಲ್ಲಿ ಮನೋವಾಕ್ಕರ್ಮಗಳೆಂಬ ಮೂರರ ಒಳ್ಳೆಯತನವೂ ಪರಸ್ಪರವಾಗಿ ಹೆಣೆದುಕೊಂಡೇ ಇದೆ ಆದುದರಿಂದ ಮಾಡುವ ಸತ್ಕಾರ್ಯದ ಜತೆಗೆ ಆಡುವ ಸದ್ವಾಕ್ಯವೂ ಆವಶ್ಯಕ. ಇವೆರಡೂ ಮನಸ್ಸಿನ ಸ್ಥಿತಿಯನ್ನು ಚೆನ್ನಾಗಿ ವ್ಯಕ್ತಪಡಿಸುವುವು. ಯಾವ ಅಭಿಪ್ರಾಯದಿಂದ ಇತರರು ತಮಗೆ ಒಳ್ಳೆಯತನವನ್ನು ತೋರಿಸುರುವರು ಎಂಬುದನ್ನು, ತಿಳಿಯಬೇಕಾದರೆ ಉಪಕಾರಮಾಡಿದವರ ನಡೆನುಡಿಗಳನ್ನು ಪರಿಶೀಲಿಸಿ ನೋಡುವರು. ಅಂದರೆ ಮನೋಭಾವಗಳನ್ನು ತೋರ್ಪಡಿಸುವುದರಲ್ಲಿ ಕಾರ್ಯದಜತೆಗೆ, ವಾಕ್ಕಿನ ಮಹಿಮೆಯೂ ಮುಖ್ಯವಾದುದೆಂದಾಯಿತು.

ಮಾತಿಗೆ ತೂಕವು ಹೆಚ್ಚು. ಲೋಕದಲ್ಲಿ ಅನಂತವಾದ ಕೆಲಸಗಳು ನಡೆಯುತ್ತಲಿರುವುದು ಮಾತಿನ ಗೌರವದಿಂದಲೇ. ಒರಟುತನದಿಂದ ದುಡುಕಿ ಕಠಿನವಾಗಿ ಮಾತಾಡದೆ ಮೃದುವಾಗಿ ವಿನಯಪೂರ್ವಕವಾಗಿ ಆಡುತ್ತಲೂ ಇದರಸಂಗಡಲೇ ಒಳ್ಳೆಯಕೆಲಸಗಳನ್ನು ಮಾಡುತ್ತಲೂ ಬಂದರೆ ಆ ಕೆಲಸಗಳು ಮತ್ತಷ್ಟು ಚೆನ್ನಾಗಿ ನಡೆದು ಹೆಚ್ಚು ಫಲಗಳನ್ನು ಕೊಡುವುವು. ಒರಟುಮಾತು ಇತರರಮನಸ್ಸನ್ನು ನೋಯಿಸುವುದು. ಆದುದರಿಂದ ಮಾಡುವಕೆಲಸ ಆಡುವ ಮಾತು ಇವೆರಡೂ ಸರಿಯಾಗಿರಬೇಕೆಂದಾಯಿತು. ಹಾಗೆ ನಮ್ಮ ನಡೆನುಡಿಗಳೆರಡೂ ಒಳ್ಳೆಯವಾಗಿದ್ದರೆ ಸಾಕು. ಇದರಿಂದ ಇತರರಿಗೇನೋ ಆಗಬೇಕಾದಷ್ಟು ಪ್ರಯೋಜನವು ಆಗಿಯೇ ಆಗುವುದು. ಆಗ ನಾವು ಏನೇನೂ ಪ್ರಯತ್ನಪಡದಿದ್ದರೂ, ಇತರರು ನಮ್ಮನ್ನು ಒಳ್ಳೆಯವರೆಂದು ಹೇಳುವರು.

## (i) ಮನೆಯವರ ವಿಷಯದಲ್ಲಿ ಮರ್ಯಾದೆ.

ಹೊರಗಿನವರ ವಿಷಯದಲ್ಲಿ ಮಾತ್ರ ಮರ್ಯಾದೆಯಿಂದ ಇರಬೇಕೆಂದು ತಿಳಿಯಕೂಡದು. ನಾವು ಮನೆಯವರೆಲ್ಲರಲ್ಲೂ ಮೇಲಾದ ಮರ್ಯಾದೆಯಿಂದ ನಡೆಯಬೇಕು ಕೆಲವರು ತಾವು ಮನೆ ಯಲ್ಲಿ ಹೇಗಿದ್ದರೂ ಬಾಧಕವಿಲ್ಲವೆಂದು ಭಾವಿಸಿ ಬಲು ಒರಟುತನದಿಂದ ಹರಟುತ್ತಲೂ ದುಡುಕು ಕೆಲಸಗಳನ್ನು ಮಾಡುತ್ತಲೂ ಇರುವರು. ಇದು ಬಲು ತಪ್ಪು ತಿಳಿವಳಿಕೆ. ತಮಗಿಂತ ದೊಡ್ಡವರಾದವರು ಹೇಗೆ ನಡೆಯುವರೋ ತಾವೂ ಹಾಗೆಯೇ ನಡೆಯಬೇಕೆಂದು ಎಲ್ಲರೂ ಇಷ್ಟಪಡುವರಷ್ಟೆ. ತಥಾಪಿ ಇಂತಹ ಸ್ವಭಾವವು ಮಕ್ಕಳಲ್ಲಿ ತುಂಬ ಪ್ರಬಲವಾಗಿರುತ್ತದೆ. ಆದುದರಿಂದ ನಾವು ದುಡುಕುವುದು ಮೊದಲಾದ ಕೆಟ್ಟ ಚಾಳಿಗಳಿಂದ ಕೂಡಿ ಮರ್ಯಾದೆಯಿಲ್ಲದೆ ಕೆಟ್ಟ ನಡತೆಯಲ್ಲಿ ಪ್ರವರ್ತಿಸಿದರೆ ನಮ್ಮ ಮನೆಯಲ್ಲಿರುವ ಸಣ್ಣ ಪುಟ್ಟ ಮಕ್ಕಳೆಲ್ಲಾ ನಮ್ಮಂತೆಯೇ ನಡೆಯುವವರಾದುದರಿಂದ ನಾವು ಅವರನ್ನು ಕೆಡಿಸಿದಂತಾಗುವುದು. ಆದುದರಿಂದ ಹೊರಗಿನರವ ಸಂಗಡ ಮಾತ್ರವೇ ಮರ್ಯಾದೆಯಿಂದ ನಡೆಯಬೇಕಾದುದು ಮುಖ್ಯವೆಂದು ಎಣಿಸಬಾರದು. ಇತರರನ್ನು ಸಂತೋಷಪಡಿಸಿ, ನಾವೂ ಸುಖಪಡುವುದು ಹೇಗೆ ಎಂಬುದನ್ನು ಕಲಿಯುವುದಕ್ಕೆ, ಮನೆಗಿಂತಲೂ ಮೇಲಾದ ಸ್ಥಳವು ಮತ್ತಾವುದೂ ಇಲ್ಲ. ಮನೆಯಲ್ಲಿ ನಾವು ಮಾಡುವ ಸಣ್ಣ ಪುಟ್ಟ ಕೆಲಸಗಳಲ್ಲಿ ಎಷ್ಟೋಮಟ್ಟಿಗೆ ವಿನಯ, ಗೌರವ, ದಯೆ ಮೊದಲಾದುವನ್ನು ಆಯಾ ಸಂದರ್ಭಾನುಸಾರವಾಗಿ ತೋರಿಸಬಹುದು.

ಮನೆಯಲ್ಲಿ ಹಿರಿಯರೂ ಸಮಾನರೂ ಮತ್ತು ಕಿರಿಯರೂ ಇರುವರಷ್ಟೆ. ಈ ಮೂರು ವಿಧವಾದ ಜನಗಳಲ್ಲಿಯೂ ಒಂದೇ ಬಗೆಯಾಗಿ ಪ್ರವರ್ತಿಸುವುದಕ್ಕಾಗುವುದಿಲ್ಲ ಆಯಾ ಜನಗಳೊಡನೆ ಉಚಿತವರಿತು ನಡೆಯಬೇಕಾಗುವುದು. ತಾಯ್ತಂದೆಗಳಿಗೂ ಇತರ ವೃದ್ಧರಿಗೂ ಕೈಲಾದಮಟ್ಟಿಗೂ

ಸಹಾಯ ಮಾಡಬೇಕು. ಹೆಣ್ಣುಮಕ್ಕಳು ತಾಯಿಗೆ ಎಷ್ಟೋ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿಕೊಡಬಹುದು. ಹೀಗೆಯೇ ಮಗನು ತಂದೆಗೂ ಸಹಾಯ ಮಾಡಬಹುದು. ದೊಡ್ಡದೊಡ್ಡ ಕೆಲಸಗಳನ್ನು ಮಾಡುವುದರಲ್ಲಿ ಮಾತ್ರ ಮರ್ಯಾದೆಯಿಂದ ನಡೆಯಬೇಕೆಂಬುದು ಅಷ್ಟು ಉಚಿತವಾದುದಲ್ಲ. ಸಣ್ಣ ಪುಟ್ಟ ಕೆಲಸಗಳಲ್ಲೂ ಮರ್ಯಾದೆಯನ್ನು ತೋರಿಸುವುದೇನೂ ಅಷ್ಟು ಕಷ್ಟತರವೂ ಅಲ್ಲ. ದೊಡ್ಡವರು ಹೇಳಿದವಸ್ತುಗಳನ್ನು ತಂದುಕೊಡುವುದು, ಅವರು ಮರೆತುದನ್ನು ಜ್ಞಾಪಿಸುವುದು, ಮನೆಗೆ ಯಾರಾದರೂ ಬಂದುದನ್ನು ತಿಳಿಸುವುದು, ಬಂದವರನ್ನು ಮರ್ಯಾದೆಯಿಂದ ಆದರಿಸುವುದು, ಇಂತಹ ಎಷ್ಟೋಬಗೆಯ ಕೆಲಸಗಳನ್ನು ಸಣ್ಣವರುಕೂಡ ಆಚರಿಸಬಹುದಾಗಿದೆ. ಇತರರ ಸಂಗಡ ತಾಯ್ತಂದೆಗಳ ವಿಷಯವಾದ ಮಾತುಗಳನ್ನು ಆಡುವುದರಲ್ಲಿ "ತಾಯಿಯವರು" "ತಂದೆಯವರು" ಎಂದು ಹೇಳಬೇಕೇ ಹೊರತು, ಸಣ್ಣಮಾತುಗಳನ್ನುಪಯೋಗಿಸಬಾರದು. ಮತ್ತು ಏಕವಚನಪ್ರಯೋಗವೂ ಅನುಚಿತ ಸ್ತ್ರೀಯರು ತಮಗಿಂತ ದೊಡ್ಡವರಾಗಿಗಲಿ ಅಥವಾ ಚಿಕ್ಕವರೇ ಆಗಿರಲಿ ಯಾವ ಸಂದರ್ಭದಲ್ಲೂ ಅವರನ್ನು "ಏನೆ" "ಬಾರೆ" ಎಂದೂ, ಪುರುಷರಲ್ಲಿ ಯಾರನ್ನಾದರೂ "ಏನೋ" "ಬಾರೋ" ಎಂದೂ ಕರೆಯಬಾರದು. ಮತ್ತು ಪುರುಷರಲ್ಲಿ ಚಿಕ್ಕವರನ್ನೂ ಕೂಡ "ಏನಯ್ಯಾ" ಎಂದು ಮರ್ಯಾದೆಯಿಂದ ಸಂಬೋಧಿಸಬೇಕೇ ಹೊರತು ಎಷ್ಟೇ ಸಲಿಗೆಯಿದ್ದರೂ ಸಣ್ಣಮಾತುಗಳಿಂದ ಕರೆಯಬಾರದು. ಅಣ್ಣ ತಂಮ್ಮಂದಿರನ್ನೂ ಅಕ್ಕ ತಂಗಿಯರನ್ನೂ ಪ್ರೀತಿಯಿಂದ ಕಾಣಬೇಕು.

ಇತರರ ಸಂಗಡಮಾತ್ರವಲ್ಲದೆ ನಾವು ಒಬ್ಬೊಂಟಿಗರಾಗಿರುವಾಗಲೂ ಎಚ್ಚರಿಕೆಯಿಂದ ಆಚರಿಸಬೇಕಾದ ಎಷ್ಟೋ ಸಂಗತಿಗಳುಂಟು. ಮನೆಯ ಬಾಗಿಲುಗಳನ್ನು ಬಲವಾಗಿ ಹಾಕುತ್ತಲೂ, ಸಿಕ್ಕಿದ ವಸ್ತುಗಳನ್ನು ಮೇಲಿನಿಂದ ಎತ್ತಿಕುಕ್ಕುತ್ತಲೂ ಗದ್ದಲಮಾಡಬಾರದು. ಚಾಪೆ, ಕುರ್ಚಿ, ಬೆಂಚು

ಮೊದಲಾದ ವಸ್ತುಗಳೂ ಕೊಳೆಯಾಗದಂತೆ ನೋಡಿಕೊಳ್ಳುತ್ತಿರ ಬೇಕು. ನಮ್ಮ ಮನೆಯೊಳಕ್ಕೇ ಆಗಲಿ ಅಥವಾ ಇತರರ ಮನೆಯೊಳಕ್ಕೇ ಆಗಲಿ ಜೋಡು ಎಕ್ಕಡ ಮೊದಲಾದ ಪಾದರಕ್ಷೆಗಳನ್ನು ಮೆಟ್ಟಿಕೊಂಡೇ ಮನೆಯೊಳಕ್ಕೆ ನುಗ್ಗಬಾರದು. ಒಂದುವೇಳೆ ಪಾದರಕ್ಷೆಯನ್ನು ಕಾಲಿಗೆ ಹಾಕಿಕೊಂಡು ಇದ್ದಾಗ ಥಟ್ಟನೆ ಅವನ್ನು ಬಿಚ್ಚಿ ತೆಗೆಯುವುದು ಅಸಾಧ್ಯವಾಗಿ ಹಾಗೆಯೇ ಒಳಕ್ಕೆ ಹೋಗಬೇಕಾಗಿ ಬಂದರೂ ನಡುಮನೆ, ಅಡಿಗೆಯಮನೆ, ದೇವರಮನೆ, ಊಟದಮನೆ ಇಂತಹ ಸ್ಥಳಗಳಿಗೆ ಪ್ರವೇಶಿಸುವುದು ನಮ್ಮ ಹಿಂದುಗಳಲ್ಲಿ ಸುತರಾಂ ನಿಷಿದ್ಧ. ಇಂತಹ ಪರಿಶುದ್ಧವಾದ ಸ್ಥಳಗಳಿಗೆ ಹೋಗಬೇಕಾದರೆ ಕೈಕಾಲುಗಳನ್ನು ತೊಳೆದುಕೊಂಡು ಕೇವಲ ಶುಚಿಯಾಗಿರಬೇಕಾದುದು ಅತ್ಯಂತಾವಶ್ಯಕ.

## (ii) ಪಾಠಶಾಲೆಯಲ್ಲಿ ನಡೆಯಬೇಕಾದ ನಡತೆ.

ಮಕ್ಕಳು ಕೆಲವು ವರುಷ ಮನೆಯಲ್ಲಿಯೇ ಬೆಳೆದನಂತರ ಓದುವುದಕ್ಕೋಸ್ಕರ ಪಾಠಶಾಲೆಗೆ ಹೋಗುವರಷ್ಟೆ. ಹೊರಗಿನವರ ಸಂಗಡ ಬಳಕೆಯನ್ನು ಸಂಪಾದಿಸಿಕೊಳ್ಳಬೇಕಾದರೆ ಪಾಠಶಾಲೆಯೇ ಮೊದಲನೆಯ ಸ್ಥಳವಾಯಿತು ಆದುದರಿಂದ ಅಲ್ಲಿ ಯಾವ ರೀತಿಯಾಗಿ ನಡೆಯಬೇಕೆಂಬುದನ್ನು ತಿಳಿದಿರಬೇಕಾದುದು ಅತ್ಯಾವಶ್ಯಕ. ಕೊಳಕುಬಟ್ಟೆಗಳನ್ನು ಹಾಕಿಕೊಂಡು, ಉಡುಪುಗಳನ್ನು ಸೊಟ್ಟಪಟ್ಟೆಯಾಗಿ ಧರಿಸಿಯಾಗಲಿ, ತಲೆಗೆ ಟೋಪಿ ಮೊದಲಾದ ಯಾವುದನ್ನೂ ಧರಿಸದೆಯಾಗಲಿ ಅಥವಾ ತಲೆ ಮೈ ಮೊದಲಾದುವನ್ನು ಕೊಳೆಯಾಗಿಟ್ಟುಕೊಂಡು ಆಗಲಿ ಪಾಠಶಾಲೆಗೆ ಹೋಗುವುದರಿಂದ ಮರ್ಯಾದೆಯು ತಪ್ಪುವುದು. ಬರೀ ತಲೆಯಲ್ಲಿರುವುದು ಘನತೆಗೆ ವಿರುದ್ಧ. ಬರಿಯ ಹಣೆಯಲ್ಲಿಸುವುದು ಹಿಂದೂಮತದಲ್ಲಿ ನಿಷಿದ್ಧ. ನಿತ್ಯವೂ ಪಾಠಶಾಲೆಗೆ ಹೋದಕೂಡಲೆ ಉಪಾಧ್ಯಾಯರನ್ನೂ ಜೊತೆಯವರನ್ನೂ ವಂದಿಸಬೇಕು. ಹೀಗೆ ಮರ್ಯಾದೆಯನ್ನು ತೋರಿಸುವುದರಲ್ಲಿ ಸ್ವಲ್ಪವೂ

ನಾಚಿಕೊಳ್ಳಬಾರದು. ನಾವು ಇತರರಿಗೆ ಮರ್ಯಾದೆ ಮಾಡಿದರೆ ಅವರೂ ನಮಗೆ ಮರ್ಯಾದೆಮಾಡುವರು.

ಯಾರ ಸಂಗಡ ಯಾವ ಮಾತನ್ನು ಆಡಬೇಕಾದಾಗಲೂ 'ದಯೆಯಿಟ್ಟು' ಎಂದು ಹೇಳುವ ವಾಡಿಕೆಯನ್ನಿಟ್ಟುಕೊಂಡಿರುವುದು ಒಳ್ಳೆಯದು. ನಮಗೆ ಯಾರು ಯಾವ ಸಣ್ಣಕೆಲಸವನ್ನು ಮಾಡಿಕೊಟ್ಟರೂ 'ನಿಮ್ಮಿಂದ ತುಂಬ ಸಹಾಯವಾಯಿತು' ಎಂಬ ಉಪಚಾರೋಕ್ತಿಯನ್ನಾದರೂ ಹೇಳಬೇಕು. ಇವೇನೋ ಎರಡು ಸಣ್ಣಮಾತುಗಳು. ಆದರೂ ನಾವು ಯಾರಲ್ಲಿ ಇವನ್ನು ಉಪಯೋಗಿಸುವೆವೋ ಅವರಿಗೆ ಬಹಳವಾಗಿ ಸಂತೋಷವಾಗುವುದು. ಇವನ್ನು ಆಡದಿದ್ದರೆ ನಮ್ಮನ್ನು ಒರಟರೆಂದೋ ಅಥವಾ ಕೃತಘ್ನರೆಂದೋ ಆಡಿಕೊಂಡಾರು. ಈ ಮಾತುಗಳನ್ನಾಡುವುದಕ್ಕೆ ನಮಗೇನೂ ವೆಚ್ಚವಾಗುವುದಿಲ್ಲ. ಆದರೆ ಇವಕ್ಕೆ ಬೆಲೆಯೇನೋ ಹೆಚ್ಚು.

ಮರ್ಯಾದೆಯನ್ನು ಕಾಪಾಡಿಕೊಳ್ಳಬೇಕಾದರೆ ಕೆಲವು ಕೆಟ್ಟಚೇಷ್ಟೆಗಳಿಗೆ ಅವಕಾಶ ಕೊಡದಂತೆಯೂ ನಡೆದುಕೊಳ್ಳಬೇಕಾಗುವುದು. ಪಾಠಶಾಲೆಯಲ್ಲಿ ಜೊತೆಯವರ ಅಥವಾ ನಮ್ಮ ಸೊಂತವಾದ ಪುಸ್ತಕಗಳ ಮೇಲೆ ಸಿಕ್ಕಿದಂತೆ ಗೀಚುವುದು ಅಥವಾ ಬರೆಯುವುದು ಇಂತಹುದು ಕೂಡದು. ಪಾಠಶಾಲೆಯ ಗೋಡೆಗಳ ಅಥವಾ ಮರದ ಸಾಮಾನುಗಳ ಮೇಲೆ ಬರೆಯುವುದು ಇಲ್ಲವೆ ಯಾವ ವಿಧಗಳಿಂದಲಾದರೂ ಅವನ್ನು ವಿಕಾರಮಾಡಿ ಕೆಡಿಸುವುದು, ನೆಲದಮೇಲೆ ಶಾಯಿಯನ್ನು ಚೆಲ್ಲುವುದು, ಅಲ್ಲಲ್ಲಿ ಸಿಂಬಳವನ್ನು ಸೀದುವುದು, ಮತ್ತು ಉಗುಳುವುದು ಇಂತಹವುಗಳೆಲ್ಲಾ ಬಲು ಕೆಟ್ಟಚಾಳಿಗಳು. ಪುಸ್ತಕಗಳನ್ನು ಓದುತ್ತಿರುವಾಗ ನಡುವೆ ಎಲ್ಲಿಯಾದರೂ ನಿಲ್ಲಿಸಿ ಗುರುತಿಡಬೇಕಾದರೆ ಆ ಹಾಳೆಯನ್ನೇ ಮಡಿಸಬಾರದು. ತೆಳುವಾದೊಂದು ಕಾಗದವನ್ನು ಅಥವಾ ದಾರವನ್ನು ಗುರುತಿಡಬೇಕು. ಅಂಗಿಯ ಎಡಗಡೆಯ ಮೇಲಿನ ಜೇಬಿನಲ್ಲಿ ಮುಚ್ಚಳವಿಲ್ಲದ ಬರೆಯುವ ಕಡ್ಡಿಗಳು ಸೀಸದ

ಕಡ್ಡಿಗಳು ಮೊದಲಾದ ಮೊನೆಯಾದ ತುದಿಯುಳ್ಳ ವಸ್ತುಗಳನ್ನಿಟ್ಟುಕೊಂಡಿರುವುದರಿಂದ ಕೆಲವುವೇಳೆ ಆಕಸ್ಮಾತ್ತಾಗಿ ಕಣ್ಣಿಗೆ ಅಪಾಯವಾಗುವ ಸಂಭವವುಂಟು. ಆದುದರಿಂದ ಈ ವಿಷಯದಲ್ಲಿ ಜಾಗರೂಕರಾಗಿರಬೇಕು. ಮತ್ತು ಅಂತಹವುಗಳನ್ನಿಟ್ಟುಕೊಳ್ಳುವುದರಿಂದ ಜೇಬು ಕೊಳೆಯಾಗಿ ಅಸಹ್ಯವಾಗುವುದು.

ನಾವು ಮಾಡಿದ ತಪ್ಪನ್ನು ಇತರರ ಮೇಲೆ ಹೊರಿಸಿ ಅನ್ಯಾಯವಾಗಿ ಅವರಿಗೆ ಶಿಕ್ಷೆಮಾಡಿಸಬಾರದು. ಇದು ಬಹಳ ಹೇಡಿಕೆಲಸ. ಘನತೆಯುಳ್ಳವರು ಎಂದಿಗೂ ಹೀಗೆ ಮಾಡುವುದಿಲ್ಲ. ಮಂಕುಹುಡುಗರನ್ನು ನೋಡಿ ನಗಬಾರದು. ಹೊಸಬರು ಯಾರಾದರೂ ಪಾಠಶಾಲೆಗೆ ಬಂದರೆ ಅವರಕಡೆಯೇ ನೋಡುತ್ತಿರಬಾರದು. ಇದು ಬಲು ಒರಟುತನ ತಾವುತಾವು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿರಬೇಕು ಒಟ್ಟಿನಲ್ಲಿ ಪಾಠಶಾಲೆಯ ಬಾಲಕರಿಗೆಲ್ಲಾ ಸನ್ಮಿತ್ರರಾಗಿಯೂ, ಉಪಾಧ್ಯಾಯರಿಗೆ ವಿಧೇಯರಾಗಿಯೂ ನಡೆಯುತ್ತಿರಬೇಕು

## (iii) ಆಟದ ಕಾಲದಲ್ಲಿರಬೇಕಾದ ನಡತೆ.

ಮಕ್ಕಳು ಇತರರೊಡನೆ ಕಲೆತು ತಮ್ಮ ನಿಜವಾದ ಸ್ವಭಾವವನ್ನು ಹೊರಪಡಿಸುವುದಕ್ಕೆ ಆಟಕ್ಕಿಂತಲೂ ಉತ್ತಮವಾದ ಸನ್ನಿವೇಶವು ಮತ್ತಾವುದೂ ಅಲ್ಲ. ಇಲ್ಲಿ ಕಲಿತುಕೊಂಡ ಒಳ್ಳೆಯ ನಡತೆಯೇ ಮುಂದಕ್ಕೆ ಜನಸಮಾಜದಲ್ಲಿಯೂ ಎಷ್ಟೋ ಮಟ್ಟಿಗೆ ಕಾರ್ಯಕಾರಿಯಾಗುವುದು.

ಆಟದ ವಸ್ತುಗಳನ್ನು ಇತರರಿಗೆ ಥಟ್ಟನೆ ಕೊಡುವುದಕ್ಕೆ ಅಥವಾ ತೆಗೆದುಕೊಳ್ಳುವುದಕ್ಕೆ ಹಿಂತೆಗೆಯಬಾರದು. ಈ ಪ್ರಪಂಚವು ತನಗೊಬ್ಬನಿಗೋಸ್ಕರವೇ ಹುಟ್ಟಿರುವುದೆಂದೂ ಎಲ್ಲವೂ ತನಗೇ ಆಗಬೇಕೆಂದೂ ದುರಾಸೆ ಪಡಬಾರದು.

ಆಟದಲ್ಲಿ ಕೂಡ ಸತ್ಯವಾಗಿ ನಡೆಯಬೇಕಲ್ಲದೆ ಮೋಸಮಾಡಬಾರದು. ಒಂದುವೇಳೆ ನಾವು ಸೋತರೂ ಜೋಲುಮುಖವನ್ನು ಹಾಕಿಕೊಂಡು ಅಥವಾ ಸಿಡಿಗುಟ್ಟುತ್ತ ಇರಬಾರದು. ಆಗಲೂ ನಗುನಗುತ ಇರಬೇಕು. ಒಂದು ಪಂಗಡದವರು ಸೋತ ಮಾತ್ರಕ್ಕೇ ಮತ್ತೊಂದು ಪಂಗಡದವರು ಗೆದ್ದಂತೆ ಆಗುವುದಿಲ್ಲ. ಪ್ರತಿಯೊಂದು ಆಟದಲ್ಲೂ ಪ್ರತಿ ಪಂಗಡದವರೂ ಯಾವಾಗಲಾದರೂ ಗೆದ್ದೇತೀರಬೇಕು ಆದುದರಿಂದ ನಾವು ಸೋತಾಗಲೂ ಎದೆಗುಂದದೆ ಇನ್ನು ಮುಂದಕ್ಕಾದರೂ ಗೆಲ್ಲುವೆವೆಂಬ ಆಸೆಯಿಂದ ನ್ಯಾಯವಾಗಿಯೂ ಕಷ್ಟಪಟ್ಟೂ ಆಡಬೇಕು. ಯಾವಾಗಲೂ ನಾವೇ ಗೆಲ್ಲುವುದಕ್ಕೆ ಆಗುವುದಿಲ್ಲ. ಮತ್ತು ಹಾಗೆ ಸದಾ ಗೆಲ್ಲುವುದು ಒಳ್ಳೆಯದೂ ಅಲ್ಲ. ಯಾಕೆಂದರೆ-ಗೆದ್ದವರಿಗೆ ಜಂಬ ಬರುವುದು. ಮತ್ತು ಸೋತವರು ನಿರಾಶೆಯುಳ್ಳವರಾಗುವರು.

ಆಟದಲ್ಲೂ ಎಲ್ಲರಿಗೂ ಒಳ್ಳೆಯವರಾಗಿರಬೇಕು. ಎಲ್ಲಾ ಆಟಗಾರರಿಗೂ ಗೆಳೆಯರಾಗಿರಬೇಕು. ಆಡುವಾಗ ನಮ್ಮ ಇಷ್ಟದಂತೆ ನಡೆಯದಿದ್ದರೆ ಅಥವಾ ಅಕಸ್ಮಾತ್ತಾಗಿ ಉಡುಪುಗಳು ಹರಿದುಹೋದರೆ ಜಗಳವಾಡುವುದು, ಸೋತವರನ್ನು ಅಥವಾ ಗೆದ್ದವರನ್ನು ಅಡ್ಡ ಹೆಸರಿಟ್ಟು ಕರೆಯುವುದು ಮುಂತಾದುದು ಸರಿಯಲ್ಲ. ಇದು ಒರಟುತನ ಮತ್ತು ಕೈಲಾಗದ ಹೇಡಿತನ. ನಮ್ಮಿಂದ ಇತರರಿಗೆ ಪೆಟ್ಟಾದರೆ ಅವರನ್ನು ವಿಚಾರಿಸದೆಯೇ ನಮ್ಮಷ್ಟಕ್ಕೆ ನಾವು ಆಡಿಕೊಂಡಿರುವುದು ಯೋಗ್ಯವಲ್ಲ. ಅದು ಸ್ವಾರ್ಥಪರತೆ. ಆಡುವಾಗ ಒರಟುತನದಿಂದ ನಡೆಯುವುದು ಬಲು ಕೆಟ್ಟುದು. ನಮಗಿಂತ ಸಣ್ಣ ವಯಸ್ಸಿನವರೂ ಕೈಲಾಗದವರೂ ನಮ್ಮ ಸಂಗಡ ಆಡುತ್ತ ಇದ್ದಾರು; ಆದುದರಿಂದ ಬಲು ಎಚ್ಚರಿಕೆಯಿಂದಿರಬೇಕು. ಯಾವಾಗಲೂ ಆಟದಲ್ಲೇ ಕಾಲವನ್ನು ಕಳೆಯಬಾರದು.

ಯಾವ ಆಟಗಳಿಂದ ಮೈಗೆ ಬಲವೂ ಮನಸ್ಸಿಗೆ ವಿಶ್ರಾಂತಿಯೂ ದೊರೆಯುವುವೋ ಅಂತಹ ಆಟಗಳನ್ನು ಆಡಬೇಕಲ್ಲದೆ ಜೂಜು ಮೊದಲಾದುವನ್ನು ಎಂದಿಗೂ ಆಡಬಾರದು. ಇದರಿಂದ ಎಲ್ಲಾ ವಿಧವಾದ ನಷ್ಟಗಳೂ ಸಂಭವಿಸುವುವಲ್ಲದೆ ಮುಖ್ಯವಾಗಿ ನಮ್ಮ ನಡತೆಯೇ ಕೆಟ್ಟುಹೋಗುವುದು. ಅಪಾಯಕರವಾದ ಆಟಗಳನ್ನು ಆಡಕೂಡದು.

### (iv) ಬೀದಿಯಲ್ಲಿ ಆಚರಿಸಬೇಕಾದ ನಡತೆ.

ಬೀದಿಯಲ್ಲಿಯೂ ಕೆಲವು ನಿಯಮಗಳಿಗೆ ಬದ್ಧರಾಗಿ ನಡೆಯುವುದು ಮೇಲು. ಬೀದಿಯನ್ನು ನಮಗೋಸ್ಕರವೇ ಮಾಡಿಲ್ಲ. ಆದುದರಿಂದ ಇತರರ ಅನುಕೂಲ್ಯವನ್ನು ಯೋಚಿಸಿ ಅದನ್ನು ಉಪಯೋಗಿಸಿಕೊಳ್ಳಬೇಕು. ಬಂಡಿ ಬೈಸಿಕಲ್ ಮೊದಲಾದುವುಗಳ ಮೇಲೆ ಹೋಗುವಾಗ, ರಸ್ತೆಯ ಎಡದ ಪಕ್ಕದಲ್ಲಿ ಹೋಗಬೇಕು. ಯಾವುದಾದರೊಂದು ಬಗೆಯ ಸದ್ದಿನಿಂದ ಜನಗಳನ್ನು ಎಚ್ಚರಗೊಳಿಸಬೇಕು. ಚೌಕಗಳ ಬಳಿಯಲ್ಲಿ ತಾವು ಯಾವ ದಿಕ್ಕಿಗೆ ಹೋಗಬೇಕೋ ಆಕಡೆಗೆ ಕೈತೋರಿಸಬೇಕು ಸಂಜೆಯಾದ ನಂತರ ದೀಪವಿಲ್ಲದೆ ಹೊರಡಕೂಡದು. ಮತ್ತು ಜನಸಮ್ಮರ್ದವು ಹೆಚ್ಚಾಗಿರುವ ಕಡೆಗಳಲ್ಲಿ ವೇಗವಾಗಿ ಹೋಗಕೂಡದು. ಮಿಕ್ಕ ಗಾಡಿಗಳಿಗಿಂತ ಬೇಗ ಮುಂದಕ್ಕೆ ಹೋಗಬೇಕಾದಂತಹ ಅವಸರದ ಕಾರ್ಯವಿದ್ದಲ್ಲಿ ಅವುಗಳನ್ನು ಎಡಕ್ಕೆ ಬಿಟ್ಟುಕೊಂಡು ಹೋಗಬೇಕು. ಕಾಲ್ನಡಿಗೆಯಲ್ಲಾದರೆ ಬಲಗಡೆಯ ಅಂಚಿನಲ್ಲೇ ಹೋಗುವುದು ಯಾವಾಗಲೂ ಒಳ್ಳೆಯದು. ಕೈಯಲ್ಲಿ ಬೆತ್ತವನ್ನು ಅಥವಾ ಕೊಡೆಯನ್ನು ಹಿಡಿದುಕೊಂಡು ಹೋಗುವಾಗ ಅದರ ತುದಿಯು ಇತರರಿಗೆ ಚುಚ್ಚಿ ತೊಂದರೆಯಾಗದಂತೆ ನೋಡಿಕೊಳ್ಳಬೇಕು.

ಸ್ತ್ರೀಯರನ್ನೂ ವೃದ್ಧರನ್ನೂ ಅಥವಾ ಮಕ್ಕಳನ್ನೂ ಸಂಗಡ ನಡಿಗೆಯಿಂದ ಕರೆದುಕೊಂಡು ಹೋಗುವಾಗ, ಯಾವ ಕಡೆ ಗದ್ದಲವೂ ತೊಂದರೆ

ಯೂ ಅತಿಯಾಗಿರುವುದಿಲ್ಲವೋ ಆ ಪಕ್ಕದಲ್ಲಿ ನಾವು ನಡೆಯಬೇಕು. ಬೀದಿಯಲ್ಲಿ ಹೋಗುತ್ತಿರುವಾಗ ಉಪಾಧ್ಯಾಯರು, ಮರ್ಯಾದೆಗೆ ಅರ್ಹರಾದ ಇತರರು ಇದಿರಿಗೆ ಬಂದರೆ ಅವರನ್ನು ವಂದಿಸಬೇಕು. ಬೀದಿಯಲ್ಲಿ ದೇವರ ಉತ್ಸವ ಅಥವಾ ಮಹಾರಾಜರವರ ಸವಾರಿ ದಯಮಾಡಿಸುತ್ತಿರುವಾಗ ನಾವು ಕುಳಿತಿರಬಾರದು. ಎದ್ದು ನಿಂತು ಕೈಮುಗಿಯಬೇಕು. ದೊಡ್ಡವರನ್ನು ವಂದಿಸಬೇಕಾದಾಗ ನಮ್ಮ ಬಲಗೈಯಲ್ಲಿ ಏನಾದರೂ ವಸ್ತುಗಳಿದ್ದರೆ ತಲೆಯನ್ನಾದರೂ ಸ್ವಲ್ಪಮಟ್ಟಿಗೆ ಬಾಗಿಸಬೇಕು ಜೊತೆಯಲ್ಲಿ ಬಾಯಿಂದ ವಂದನೆಯ ಮಾತುಗಳನ್ನು ಹೇಳುವುದೂ ಮೇಲು. ಆದರೆ ಯಾವ ಸಂದರ್ಭದಲ್ಲೂ ದೊಡ್ಡವರಿಗೆ ಎಡಗೈಯಿಂದ ವಂದಿಸುವುದು ನಮ್ಮ ಜನಗಳಲ್ಲಿ ಅಷ್ಟು ಚೆನ್ನಾಗಿ ತೋರುವುದಿಲ್ಲ.

ಬಾಳೆಯಹಣ್ಣು ಮಾವಿನಹಣ್ಣು ಮೊದಲಾದುವುಗಳ ಸಿಪ್ಪೆಯನ್ನು ತೊಟ್ಟಿಗಳೊಳಕ್ಕಾಗಲಿ ಚರಂಡಿಗಳೊಳಕ್ಕಾಗಲಿ ಹಾಕದೆ, ಎಲ್ಲರೂ ತಿರುಗಾಡುವ ರಸ್ತೆಯಲ್ಲಿ ಹಾಕುವುದು ಬಲು ಕೆಟ್ಟ ಪದ್ಧತಿ. ಹೀಗೆಯೇ ಬೀದಿಯಲ್ಲಿ ಕಾಗದದ ಚೂರುಗಳನ್ನೆಸೆಯುವುದು, ಬೂದಿ ಎಂಜಲೆಲೆ ಕಸ ಮೊದಲಾದುವುಗಳನ್ನು ಬಿಸುಡುವುದು, ಮಕ್ಕಳನ್ನು ಮಲವಿಸರ್ಜನೆಗೆ ಕುಳ್ಳರಿಸುವುದು ಇಂತಹವುಗಳೆಲ್ಲ ಅಸಹ್ಯಕರವಾದ ಕೆಲಸಗಳು.

ಗೀಚಿದ ಬೆಂಕಿಯ ಕಡ್ಡಿಯನ್ನು ಬೀದಿಗೆಸೆಯುವುದಾದರೆ ಆದರಲ್ಲಿದ್ದ ಕಿಡಿಯು ಚೆನ್ನಾಗಿ ಆರಿದೆಯೆ ಇಲ್ಲವೆ ಎಂಬುದನ್ನು ನೋಡಬೇಕಾದುದು ಮುಖ್ಯ. ಯಾಕೆಂದರೆ, ಅದು ಹೊತ್ತಿಕೊಂಡು ಏನಾದರೂ ದೊಡ್ಡ ಅಪಾಯಗಳು ಸಂಭವಿಸಿಯಾವು ನಾವು ಇಂತಹ ಕೆಲಸಗಳನ್ನು ಮುಂದಾಲೋಚನೆಯೇ ಇಲ್ಲದೆ ಅಲಕ್ಷ್ಯದಿಂದ ಮಾಡಿದರೂ, ಉದ್ದೇಶಪೂರ್ವಕವಾಗಿಯೇ ಕೆಡಕು ಮಾಡಿದೆವೆಂದು ಜನಗಳ ಮನಸ್ಸಿಗೆ ತೋರೀತಾದುದರಿಂದ ಕೆಲವುವೇಳೆ ಸರ್ಕಾರದ ದಂಡನೆಗೂ ಗುರಿಯಾದೇವು. ಹತ್ತು

ಜನಗಳು ತಿರುಗಾಡುವ ಸ್ಥಳದಲ್ಲಿ ಉಗುಳುವುದು ಬಲು ಕೊಳಕಾದ ಮತ್ತು ಅಸಹ್ಯಕರವಾದ ಚಾಳಿ. ಉಬ್ಬಸ ಮೊದಲಾದ ರೋಗಗಳಿಂದ ಪೀಡಿತರಾದವರು, ಯತ್ನವಿಲ್ಲದೆ ಬಂದರೆ ಚರಂಡಿಯಲ್ಲೇ ಉಗುಳಬೇಕು. ಉಗುಳಿನಿಂದ ಹಲವು ರೋಗಗಳು—ಮುಖ್ಯವಾಗಿ ಕ್ಷಯರೋಗವು—ಒಬ್ಬರಿಂದ ಮತ್ತೊಬ್ಬರಿಗೆ ಹರಡುವುದುಂಟು. ಆದುದರಿಂದಲೇ ಪೋಸ್ಟ ಆಫೀಸ್ ಮೊದಲಾದ ಕೆಲವು ಸ್ಥಳಗಳ ಬಳಿಯಲ್ಲಿ ಇದನ್ನು ಸಂಪೂರ್ಣವಾಗಿ ನಿಷೇಧಿಸಿದಾರೆ.

ಬೀದಿಯಲ್ಲಿ ಹೋಗುವಾಗ ಮೌನವಾಗಿ ನಡೆಯಬೇಕು. ಗಟ್ಟಿಯಾಗಿ ನಗುವುದು, ಸಿಳ್ಳು ಹಾಕುವುದು, ರಾಗ ಹಾಡುತ್ತ, ಓದುತ್ತ ಅಥವಾ ಏನನ್ನಾದರೂ ತಿನ್ನುತ್ತ ನಡೆವುದು, ಗಟ್ಟಿಯಾಗಿ ಅರಚುತ್ತ ಇತರರನ್ನು ಕೂಗುವುದು, ಎಲ್ಲೆಲ್ಲೋ ನೋಡುತ್ತಿದ್ದು ಇದಿರಿಗೆ ಬರುವವರ ಮೇಲೆ ಎಡವಿಬೀಳುವುದು, ಇವೆಲ್ಲಾ ಕೂಡದು. ನಾವು ಆತುರದಿಂದ ಬೇಗ ಬೇಗ ಹೋಗುತ್ತಿರುವಾಗ ಭಾರವನ್ನು ಹೊತ್ತಿರುವವರು, ಕುರುಡರು, ಕುಂಟರು, ಮುದುಕರು, ಸ್ತ್ರೀಯರು, ಮಕ್ಕಳು ಇಂತಹವರು ಇದಿರಿಗೆ ಬಂದರೆ ಅವರನ್ನು ತಳ್ಳಿಕೊಂಡು ಹೋಗಬಾರದು ರಸ್ತೆಯು ನಮಗೊಬ್ಬರಿಗಾಗಿಯೇ ಮಾಡಲ್ಪಟ್ಟುದಲ್ಲವೆಂಬುದನ್ನು ಮರೆಯದಿರಬೇಕು. ಮೇಲೆ ಹೇಳಿದಂತಹವರ ವಿಷಯದಲ್ಲಿ ದಯಾಳುಗಳಾಗಿರಬೇಕು. ಪರದೇಶದವರ ಉಡುಪು, ನಡತೆ, ಭಾಷೆ ಇಂತಹುವೆಲ್ಲಾ ನಮಗೆ ಹೊಸದಾದುದರಿಂದ ವಿಕಾರವಾಗಿ ತೋರಿಬರಬಹುದು. ಅಂತಹವರನ್ನೂ ಅಂಗಹೀನರನ್ನೂ ಗೇಲಿಮಾಡಬಾರದು. ಒಂದುವೇಳೆ ನಾವೇ ಹಾಗಿದ್ದು ಯಾರಾದರೂ ನಮ್ಮನ್ನು ಲೇವಡಿ ಮಾಡಿದ್ದರೆ ನಮಗೆ ಎಷ್ಟು ವ್ಯಸನವೂ, ಕೋಪವೂ ಉಂಟಾಗುತಿದ್ದುವೆಂಬುದನ್ನು ತಿಳಿದು ನಡೆಯಬೇಕು. ನಾವು ಸ್ನೇಹಿತರೊಡನೆ ಹೊರಟಾಗ ಒಬ್ಬರ ಮಗ್ಗುಲಲ್ಲಿ ಮತ್ತೊಬ್ಬರಂತೆ ನಡೆಯುತ್ತ

ಸಾಲಾಗಿ ಅಡ್ಡಗಟ್ಟಿಕೊಂಡು ಇತರರಿಗೆ ತೊಂದರೆಯಾಗುವಂತೆ ಒಟ್ಟು ಬೀದಿಯನ್ನೆಲ್ಲಾ ಆಕ್ರಮಿಸಿಕೊಳ್ಳಬಾರದು ಮತ್ತು ಅನೇಕರು ಒಂದು ಕಡೆ ಗುಂಪಾಗಿ ನಿಂತುಕೊಂಡು, ಮಾತಾಡುತ್ತ ಹೋಗುವವರಿಗೂ ಬರುವ ರಿಗೂ ಅಡಚಣೆಯನ್ನುಂಟುಮಾಡಬಾರದು.

ಹೊಟ್ಟೆಕಿಚ್ಚಿನಿಂದ ಅಥವಾ ಕುಚೇಷ್ಟೆಯಿಂದ ಮಾಡುವ ಕೆಲವು ಅಲ್ಪಕಾರ್ಯಗಳು ಮರ್ಯಾಗೆಗೆ ಭಂಗವನ್ನುಂಟುಮಾಡುವುವು ಕೆಲವರು ದುಷ್ಟರು ಅಸೂಯೆಯಿಂದ ನೆರೆಹೊರೆಯವರ ಮನೆಬಾಗಿಲುಗಳು ಅಂದ ವಾಗಿರುವುದನ್ನು ನೋಡಿ ಸಹಿಸದೆ ಕೆಡಿಸುವುದು, ಬೀದಿಯ ಲಾಂದರಗಳ ನ್ನೊಡೆಯುವುದು, ಇತರರ ಮನೆಗಳ ಬಳಿಯ ಹೂ ಗಿಡಗಳನ್ನು ಕಿತ್ತಿಸೆ ಯುವುದು ಇಂತಹ ಅನ್ಯಾಯಗಳನ್ನು ಮಾಡುತ್ತಾರೆ. ಇದು ಅವಿವೇಕ. ನೆರೆಹೊರೆಯವರ ಮನೆ ಬಾಗಿಲುಗಳು ಅಂದವಾಗಿದ್ದರೆ ನಮ್ಮ ಬೀದಿಗೇ ಅಲಂಕಾರವಲ್ಲವೆ? ನಮ್ಮ ಬೀದಿಗಳು ಹೀಗಿದ್ದರೆ ನಮ್ಮ ಊರಿಗೇ ಸೊಗ ಸಲ್ಲವೆ? ಬೀದಿಯ ಲಾಂದರಗಳನ್ನು ಒಡೆದರೆ ರಾತ್ರಿ ಬೆಳಕಿಲ್ಲದೆ, ಬೀದಿ ಯಲ್ಲಿ ನಾವೂ ಎಡವಿಬಿದ್ದೇವು. ನೆರೆಮನೆಗಳಲ್ಲೂ ಚವಾಲುಗಳಲ್ಲೂ ಬಿಡುವ ಹೂಗಳಿಂದ ಅಲ್ಲಿರುವವರಿಗೆ ಮಾತ್ರವಲ್ಲದೆ ನಮಗೂ ಅವುಗಳ ಸುವಾಸನೆಯು ಬಲುವುದಿಲ್ಲವೆ? ಆದುದರಿಂದ ಅವುಗಳನ್ನು ಕೆಡಿಸಿದರೆ ನಮಗೇ ನಷ್ಟ.

ಬೀದಿಯ ಗೋಡೆಗಳ ಮೇಲೂ, ಹಾಳುಮಂಟಪ ದೇವಸ್ಥಾನ ಮೊದ ಲಾದುವುಗಳ ಗೋಡೆಗಳ ಮೇಲೂ ಸ್ವೇಚ್ಛೆಯಾಗಿ ಬರೆವುದು ಬಲು ನೀಚ ವಾದ ಕೆಲಸ.

### (v) ಪ್ರಯಾಣಕಾಲದಲ್ಲಿ ಅನುಸರಿಸಬೇಕಾದ ನಡತೆ.

ಪ್ರಯಾಣಮಾಡುವಾಗ ಆಚರಿಸಬೇಕಾದ ನಡತೆಗಳು ಎಷ್ಟೋ ಇವೆ. ಆಗ ಉಲ್ಲಾಸವಾಗಿರಬೇಕು. ಕೆಲವುವೇಳೆ ಯತ್ನವಿಲ್ಲದೆ ಹಲವು

ತೊಂದರೆಗಳು ಸಂಭವಿಸಿದರೂ ಸಂತೋಷಶೀಲರಾಗಿರುವುದು ಉತ್ತಮ. ಜೊತೆಯಲ್ಲಿ ಬರತಕ್ಕವರಿಗೆ ಕೂಡಿದಮಟ್ಟಿಗೂ ಸಹಾಯಮಾಡಬೇಕು. ಒಂದೊಂದು ಸಮಯದಲ್ಲಿ ವಿನಯದಿಂದ ಆಡಿದ ಒಂದೊಂದು ಮಾತು, ದಯೆಯಿಂದ ಮಾಡಿದ ಒಂದೊಂದು ಸಣ್ಣ ಸಣ್ಣ ಕೆಲಸವೂ ಇತರರಿಗೆ ಎಷ್ಟೋ ಸ್ಮರಣೀಯವಾಗಿರುವುವು

ಬಂಡಿಗಳಲ್ಲೂ, ರೈಲಿನಲ್ಲೂ ಕುಳಿತಿರತಕ್ಕವರಿಗೆ ತುಂಬ ಅನನುಕೂಲವಾಗುವಂತೆ ಹೆಚ್ಚು ಜನಗಳು ನುಗ್ಗುವುದು ಅಥವಾ ಹೆಚ್ಚು ಸ್ಥಳವಿದ್ದರೂ ಇತರರನ್ನು ಒಳಕ್ಕೆ ಬಿಡದೆ ತಡೆದು ಅಡ್ಡಿಮಾಡುವುದು, ಹೆಚ್ಚು ವಾಸನೆಯುಳ್ಳ ವಸ್ತುಗಳನ್ನುಪಯೋಗಿಸುವುದು, ರಾಗ ಹಾಡುವುದು, ಬಲು ಗಟ್ಟಿಯಾಗಿ ಮಾತಾಡುವುದು—ಇದೆಲ್ಲಾ ಅಸಹ್ಯಕರ.

ರೈಲು, ರಸ್ತೆ, ಉದ್ಯಾನಗಳು ಇಂತಹ ಸ್ಥಳಗಳಲ್ಲೆ ಎಂಜಲು ಪದಾರ್ಥಗಳನ್ನು ಎಸೆಯಬಾರದು. ಹೇಗೂ ತಮ್ಮಿಂದ ಇತರರಿಗೆ ಯಾವ ವಿಧವಾದ ಅನಾನುಕೂಲವಾಗುವುದಕ್ಕೂ ಅವಕಾಶ ಕೊಡಬಾರದು. ಪ್ರಯಾಣ ಮಾಡುವಾಗ ಇತರರ ಮುಂದೆ ನಮ್ಮ ಗೃಹಕೃತ್ಯದ ವಿಚಾರನ್ನಾಗಲಿ ಸ್ನೇಹಿತರು ನೆರೆಹೊರೆಯವರು ಮೊದಲಾದ ಇತರರ ವಿಚಾರವನ್ನಾಗಲಿ ನುಡಿಯಕೂಡದು. ಹಾಗೆ ಒಂದು ವೇಳೆ ಯತ್ನವಿಲ್ಲದೆ ಹೇಳಲೇ ಬೇಕಾಗಿ ಬಂದರೆ ಪಿಸುಮಾತುಗಳನ್ನಾಡಬೇಕು. ಸರ್ಕಾರದವರನ್ನು ದೂಷಿಸುವಂತಹ ಮಾತುಗಳನ್ನು ಯಾವಾಗಲೂ ಆಡಲೇ ಕೂಡದು.

## (V.) ಭೋಜನಕಾಲದಲ್ಲಿ ಅನುಸರಿಸಬೇಕಾದ ನಡತೆ.

ಭೋಜನ ಮಾಡುವಾಗಲು ಕೆಲವು ಒಳ್ಳೆಯ ಕಟ್ಟಳೆಗಳನ್ನು ಅನುಸರಿಸಿ ನಡೆವುದು ಮೇಲು. ಪಾಶ್ಚಾತ್ಯರಂತೆ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲಿನಿಂದ ಆಹಾರವನ್ನು ತೆಗೆದುಕೊಳ್ಳುವ ಪದ್ಧತಿಯು ನಮ್ಮ

ಲ್ಲಿಲ್ಲವಾದುದರಿಂದ ಮಣೆಯ ಅಥವಾ ನೆಲದ ಮೇಲೆ ಕುಳಿತುಕೊಳ್ಳುವೆವಷ್ಟೆ. ಆಗ ಪದ್ಮಾಸನಹೂಡಿ ಕುಳಿತುಕೊಳ್ಳಬೇಕೇ ಹೊರತು, ಕುಕ್ಕರುಕಾಲಿನಲ್ಲಿ ಕುಳ್ಳಿರಬಾರದು.

ಊಟಕ್ಕೆ ಕುಳಿತುಕೊಳ್ಳುವಾಗ ಬಹಳ ಶುಚಿಯಾಗಿರಬೇಕು. ನಮ್ಮಲ್ಲಿ ಕೆಲವರು ಎಷ್ಟು ದಿನಗಳಾದರೂ ಒಗೆಯದುದರಿಂದ ಕೊಳೆಯು ಸೇರಿರುವ ಮುಗುಟವನ್ನೇ ಮಡಿಯೆಂದು ಭಾವಿಸಿಉಡುತ್ತಾರೆ. ಅದು ಹತ್ತಿರ ಕುಳಿತುಕೊಂಡಿರುವವರಿಗೆ ಕೂಡ ಅಸಹ್ಯವಾಗಿರುತ್ತದೆ. ಊಟಕ್ಕೆ ಮುಂಚೆಯೂ ಊಟವಾದ ಮೇಲೂ ಕೈಕಾಲುಗಳನ್ನು ಚೆನ್ನಾಗಿ ತೊಳೆದುಕೊಳ್ಳಬೇಕು.

ಜೊತೆಯಲ್ಲಿ ಕುಳಿತುಕೊಂಡಿರುವವರಿಗಿಂತ ಮೊದಲೇ ನಾವು ಊಟಕ್ಕೆ ಪ್ರಾರಂಭಿಸುವುದು, ಅಥವಾ ಮುಗಿಸಿ ಎದ್ದು ಬಿಡುವುದು ಇವೆಲ್ಲಾ ಅಮರ್ಯಾದೆಯೆಂದು ನಿಷೇಧಿಸಿರುವರು. ಬಡಿಸುತ್ತಿರುವಾಗ ತಮಗೆ ಮೊದಲು ಬಡಿಸಬೇಕೆಂದು ಕೂಗಿಕೊಳ್ಳುತ್ತಿರಬಾರದು. ನಮಗಿಂತ ದೊಡ್ಡವರಿಗೂ ಅತಿಥಿಗಳಿಗೂ ಬಡಿಸಿದರೇ ಎಂಬುದನ್ನು ಮೊದಲು ನೋಡಬೇಕು.

ನಾವು ಆರೋಗ್ಯವಾಗಿರಬೇಕಾದರೆ, ನಮ್ಮ ದೇಹಪ್ರಕೃತಿಗೆ ಅನುಗುಣವಾದ ಮತ್ತು ಚೆನ್ನಾಗಿ ಪಕ್ವವಾದ ಆಹಾರಗಳನ್ನು ಮಾತ್ರ ಕ್ಲಪ್ತಕಾಲಗಳಲ್ಲಿ ಭುಜಿಸಬೇಕು. ಬುದ್ಧಿಯಿಂದ ಕೆಲಸಮಾಡತಕ್ಕವರು ರಂಜಕ ಮತ್ತು ಅಲ್ಬ್ಯುಮಿನ್ ಎಂಬ ತತ್ವಗಳಿರುವ ಸಸಾರಜನಕವಸ್ತುಗಳನ್ನೂ ನರಗಳಿಗೆ ಬಲ ಬರತಕ್ಕವಸ್ತುಗಳನ್ನೂ ಸೇವಿಸಬೇಕು. ಇಂತಹವರು ಮುಖ್ಯವಾಗಿ ಹಣ್ಣು ಹಂಪಲುಗಳನ್ನು ಹೇರಳವಾಗಿ ಉಪಯೋಗಿಸುವುದು ಒಳ್ಳೆಯದು. ಎಷ್ಟೋ ಜನ ಹೊಟ್ಟೆಬಾಕರು ಅಜೀರ್ಣರೋಗದಿಂದಲೇ ಸತ್ತಿರುವರು.

ಊಟಮಾಡುವಾಗ ನಡುನಡುವೆ ನೀರನ್ನು ಕುಡಿಯಬಾರದು. ಹಾಗೆ ಕುಡಿದರೆ ದೇಹದಲ್ಲಿ ಉತ್ಪತ್ತಿಯಾಗಿ ಆಹಾರದಸಂಗಡ ಸೇರತಕ್ಕ ರಸಗಳೆಲ್ಲಾ ಈ ನೀರಿನಸಂಗಡ ಕಲೆತು ದುರ್ಬಲವಾಗುವುವು. ಇದರಿಂದ ಉಂಡ ಊಟವು ಅರಗದೆಹೋಗುವುದು. ವಿಶೇಷವಾಗಿ ಹಸಿವಿದ್ದಾಗ ಹೊಟ್ಟೆತುಂಬ ಊಟಮಾಡಬಾರದು, ಮಾಂಸವೊದಲಾದ ಗುರುವಾದ ಪದಾರ್ಥಗಳನ್ನು ಭುಜಿಸಿದನಂತರ ಟೀಯನ್ನು ಕುಡಿಯಕೂಡದು. ಏಕೆಂದರೆ ಅಂತಹ ಟೀಯು ಆಹಾರವನ್ನು ಗಟ್ಟಿಮಾಡುವುದರಿಂದ ಅದು ಅರಗುವುದಿಲ್ಲ. ಬಹಳಹೊತ್ತು ಕುದಿಸಿದ ಟೀಯು ವಿಷಪ್ರಾಯ. ಕ್ಕೋಕೋಪಾನವು ಟೀಕಾಫಿಗಳಿಗಿಂತ ಉತ್ತಮವೆನ್ನುವರು. ಚೆನ್ನಾಗಿ ಕಾಯಿಸಿದ ಹಸುವಿನಹಾಲು ಸರ್ವೋತ್ತಮವಾದ ಪಾನ. ಆರೋಗ್ಯದಿಂದಿರುವ ಬಿಳಿಯಹಸುವಿನ ಹಾಲನ್ನು ಕೊಳೆಯಿಲ್ಲದಂತೆ ಚೆನ್ನಾಗಿ ಬೆಳಗಿದ ಪಾತ್ರೆಯಲ್ಲಿ ಕರೆದು ಬೇಗನೆ ಕುಡಿಯುವಪಕ್ಷದಲ್ಲಿ ಹಸಿಯಹಾಲೇ ಕಾಯಿಸಿದ ಹಾಲಿಗಿಂತಲೂ ಒಳ್ಳೆಯದೆಂದು ಆಸ್ಟ್ರಿಯಾದೇಶದ ಪ್ರಸಿದ್ಧ ಪಂಡಿತನಾದ ಡಾಕ್ಟರ್ ಲೋರ್ಯಾಂಡ್ (Doctor Lorand) ಎಂಬಾತನು ಹೇಳುತ್ತಾನೆ. ನೀರು ಶುದ್ಧವಾಗಿಲ್ಲದಿದ್ದರೆ ಅದನ್ನು ಕಾಯಿಸಿ ಶೋಧಿಸಿ ಕುಡಿಯಬೇಕು. ಸೋಡ, ಲೆಮೊನೇಡ್, ಕೋಲ, ಕಾಫಿ ಮೊದಲಾದವನ್ನು ನಿತ್ಯವೂ ಅಭ್ಯಾಸದಲ್ಲಿಟ್ಟುಕೊಂಡು ಉಪಯೋಗಿಸುವುದಕ್ಕಿಂತ ಕದಾಚಿತ್ತಾಗಿ ಉಪಯೋಗಿಸುವುದು ಉತ್ತಮ. ರಾತ್ರಿಮಲಗುವಾಗ ಅಥವಾ ಬೆಳಗೆ ಎದ್ದಕೂಡಲೇ ಒಂದು ಪಂಚಪಾತ್ರೆಯಷ್ಟು ನಿರ್ಮಲವಾದ ನೀರನ್ನು ಕುಡಿಯುವುದರಿಂದ ಚೆನ್ನಾಗಿ ಮಲವಿಸರ್ಜನೆಯಾಗುವುದಲ್ಲದೆ ಜೀರ್ಣಶಕ್ತಿಯೂ ಕೆಡದೆ ಇರುವುದು.

ಅಜೀರ್ಣವ್ಯಾಧಿಗ್ರಸ್ತರಿಗೂ, ದುರ್ಬಲರಿಗೂ ಕರಿದ ಪದಾರ್ಥಗಳಿಗಿಂತ ಆವಿಯಲ್ಲಿ ಬೆಂದುವುಗಳು ಮೇಲು. ನಿದಾನವಾಗಿ ಊಟಮಾಡ

ಬೇಕು ಆಹಾರವನ್ನು ಚೆನ್ನಾಗಿ ಅಗಿದು ನುಂಗಿದರೆ ಸಂಪೂರ್ಣವಾಗಿ ಅರಗುವುದು. ಪದಾರ್ಥಗಳನ್ನು ಅಗಿಯುವಾಗ ಪದೇಪದೇ ಬಾಯನ್ನು ತೆರೆಯುವುದು, ಮುಚ್ಚುವುದು ಇವುಗಳಿಂದ ಒಂದು ಬಗೆಯ ಸದ್ದಾಗುವುದು. ಹತ್ತಿರ ಕುಳಿತಿರುವವರಿಗೆ ಇದರಿಂದ ಜುಗುಪ್ಸೆಯಾಗುವುದು. ಆದುದರಿಂದ ಈ ವಿಷಯದಲ್ಲಿ ಜಾಗರೂಕರಾಗಿರಬೇಕು. ಬಾಯಲ್ಲಿ ಬಿದ್ದ ಆಹಾರವು ಪುನಃ ಯಾವಾಗಲೂ ಈಚೆಗೆ ತೋರಬಾರದು. ಪದಾರ್ಥಗಳನ್ನು ಬಾಯಿತುಂಬ ತುಂಬಿಕೊಳ್ಳಬಾರದು. ಊಟಮಾಡುವಾಗ ನಡುನಡುವೆ ನೀರುಕುಡಿಯಬಾರದೆಂದು ಮೊದಲೇ ಹೇಳಿದೆಯಷ್ಟೆ. ಒಂದು ವೇಳೆ ಯತ್ನವಿಲ್ಲದೆ ಬಂದರೆ ಬಾಯಲ್ಲಿದ್ದುದನ್ನೆಲ್ಲಾ ಚೆನ್ನಾಗಿ ಅಗಿದು ನುಂಗಿದ ಮೇಲೆ ಕುಡಿಯಬೇಕು. ಕಡುಬು, ದೋಸೆ ಮೊದಲಾದ ವಸ್ತುಗಳನ್ನು ಕೈಯಲ್ಲಿ ಹಿಡಿದು ಬಾಯಲ್ಲಿ ಕಡಿದು ತಿನ್ನುವುದಕ್ಕಿಂತ ಕೈಯಿಂದ ಮುರಿದು ತಿನ್ನುವುದು ಮರ್ಯಾದೆ. ಪಾಯಸ ಮೊದಲಾದುವನ್ನು ಸೊರ್ರನೆ ಹೀರುತ್ತ ಸದ್ದು ಮಾಡಬಾರದು. ಊಟಮಾಡುವಾಗ ಬಡಿಸುವುದು ಸ್ವಲ್ಪ ತಡವಾಗಿ ಕೈಗೆ ಕೆಲಸವಿಲ್ಲದೆ ಇದ್ದಾಗ ಊಟದ ಎಲೆಯಲ್ಲಿಯೋ ಅಥವಾ ತಟ್ಟೆಯಲ್ಲಿಯೋ ಕೈಯನ್ನಾಡಿಸುತ್ತ ಇರಬಾರದು. ಮತ್ತು ಆಗ ಹಲ್ಲಿಗೆ ಕಡ್ಡಿಯನ್ನಿಟ್ಟುಕೊಂಡು ಕೆದಕುವುದು, ನಾಲಗೆಯಿಂದ ಹಲ್ಲನ್ನು ಸವರಿಕೊಳ್ಳುತ್ತಿರುವುದು ಇವೆಲ್ಲಾ ಕೆಟ್ಟ ಚಾಳಿಗಳು. ಊಟಮಾಡುವಾಗ ಕೆಮ್ಮು, ಸೀನು ಮೊದಲಾದವುಗಳೇನಾದರೂ ಬಂದರೆ ಪಕ್ಕಕ್ಕೆ ತಿರುಗಿಕೊಂಡು ವಸ್ತ್ರವನ್ನು ಅಥವಾ ಟವಲನ್ನು ಅಡ್ಡವಾಗಿ ಹಿಡಿದುಕೊಳ್ಳಬೇಕು. ಎಲೆಯ ಅಥವಾ ತಟ್ಟೆಯ ಸುತ್ತಲೂ ಎಂಜಲನ್ನು ಚೆಲ್ಲಿ ಅಸಹ್ಯವಾಗುವಂತೆ ಮಾಡಕೂಡದು.

ಭೋಜನ ಕಾಲದಲ್ಲಿ ನಾವಾಗಿಯೇ ಇತರರನ್ನು ಮಾತಾಡಿಸುವುದೂ ಇತರರ ಎಲೆಯನ್ನು ಅಥವಾ ಅವರು ಊಟಮಾಡುತ್ತಿರುವುದನ್ನು

ನಿಟ್ಟಿಸುತ್ತಿರುವುದೂ ಕೆಟ್ಟ ಪದ್ಧತಿ. ಬಾಯಲ್ಲಿ ಆಹಾರವಿರುವಾಗ ಮಾತಾಡಬಾರದು.

ದೋಸೆ ಅಂಗಡಿಗಳು, ಫಲಾಹಾರ ಮಂದಿರಗಳು, ಕಾಫಿಕ್ಲಬ್ಬುಗಳು ಮೊದಲಾದ ಸ್ಥಳಗಳಲ್ಲಿ ಮಾಡಿ ಮಾರುವ ಆಹಾರ ವಸ್ತುಗಳನ್ನು ಕೊಂಡು ತಿನ್ನುವುದು ಅಷ್ಟು ಮರ್ಯಾದಾವಹವೂ ಅಲ್ಲ; ಇದರ ಜೊತೆಗೆ ಅದು ಅಸಹ್ಯಕರವೂ, ಅಪಾಯಕರವೂ ಆದ ಕೆಟ್ಟ ಪದ್ಧತಿ, ಹೇಗೆಂದರೆ:—ಅಲ್ಲಿನವರು ತುಂಬ ಕೊಳಕರಾಗಿರುವುದರಿಂದ ಶುಚಿತ್ವಕ್ಕೆ ಗಮನಕೊಡದೆಯೂ, ಪಾತ್ರೆಗಳನ್ನು ಚೆನ್ನಾಗಿ ತೊಳೆಯದೆಯೂ ಕೊಳೆಪದಾರ್ಥಗಳನ್ನು ಪ್ರತ್ಯೇಕಿಸದೆ ಬೆರೆಯಿಸುತ್ತಲೂ, ಮಣಕು ಎಣ್ಣೆ, ಮುಗ್ಗಿದ ಹಿಟ್ಟು ಇಂತಹವುಗಳಿಂದ ತಿಂಡಿ ಪದಾರ್ಥಗಳನ್ನು ಮಾಡುತ್ತಲೂ ಇರುವುದುಂಟು. ಅಲ್ಲದೆ ಅವರು ಮಾರುವುದಕ್ಕೆಂದು ತೆರೆದಿಟ್ಟ ತಿಂಡಿಯ ಪದಾರ್ಥಗಳ ಮೇಲೆ ಎಂಜಲು, ಉಗುಳು ಹೇಸಿಕೆ ಮೊದಲಾದುವುಗಳೊಂದಿಗೆ ಸೇರಿದ ಬೀದಿಯ ದೂಳೆಲ್ಲಾ ಕಸದೊಡನೆ ಸೇರಿ ಬೀಳುವುದರಿಂದ ಈ ವಸ್ತುಗಳು ವಿಷಪ್ರಾಯ. ಮತ್ತು ಬಚ್ಚಲರೊಚ್ಚು ತಿಪ್ಪೆ ಮೊದಲಾದುವುಗಳ ಮೇಲೆ ಕುಳಿತಿದ್ದ ನೊಣಗಳು ಈ ತಿಂಡಿಯ ಪದಾರ್ಥಗಳ ಮೇಲೂ ಕುಳಿತುಕೊಳ್ಳುವುದರಿಂದ ಇಂತಹ ವಸ್ತುಗಳನ್ನು ಸೇವಿಸತಕ್ಕವರಲ್ಲಿ ಸಾಂಕ್ರಾಮಿಕ ಜಾಡ್ಯಗಳು ಹರಡಿ ಪ್ರಾಣಾಪಾಯವನ್ನುಂಟುಮಾಡುವ ಸಂಭವವೂ ಉಂಟು. ಅಲ್ಲದೆ ಮನೆಯಲ್ಲಿ ಮಾಡಿಸಿದರೆ ಆಗುವುದಕ್ಕಿಂತಲೂ ಅಂಗಡಿಯ ತಿಂಡಿಗೆ ಹೆಚ್ಚು ಕ್ರಯವನ್ನು ಕೊಡಬೇಕಾಗುವುದರಿಂದ ತುಂಬ ನಷ್ಟವೂ ಆಗುವುದು. ಊಟವಾದನಂತರ ಸುಮಾರು ಅರ್ಧ ಗಂಟೆಯವರೆಗಾದರೂ ಯಾವ ಕೆಲಸವನ್ನೂ ಮಾಡದೆ ವಿಶ್ರಾಂತಿವಿನೋದಗಳಲ್ಲಿ ಕಾಲಕ್ಷೇಪಮಾಡಬೇಕು. ಊಟವಾದಕೂಡಲೆ ನಿದ್ರೆ ಮಾಡಬಾರದು. ಹಾಗೆ ಮಾಡಿದರೆ ಕೆಟ್ಟ ಕನ

ಪ್ರಾಣಕ್ಕೆ ಬರುವ ಸಂಕಟವುಂಟು. ಯಾವ ಸಂದರ್ಭದಲ್ಲಿಯೂ ಇತರರ ಎಂಜಲನ್ನು ತಿನ್ನಕೂಡದು.

## (VI.) ಇತರ ವಿಷಯಗಳಲ್ಲಿರಬೇಕಾದ ನಡತೆ.

ಇತರವಾದ ಅನೇಕ ವಿಷಯಗಳಲ್ಲಿ ಮರ್ಯಾದೆಯಿಂದ ನಡೆದುಕೊಳ್ಳಬೇಕಾಗಿರುವುದು. ಮರ್ಯಾದೆಯನ್ನು ತೋರಿಸುವುದಕ್ಕೆ ಬಹಳ ದೊಡ್ಡ ಕೆಲಸಗಳಲ್ಲಿ ಮಾತ್ರ ಅವಕಾಶವುಂಟೆಂದು ತಿಳಿಯಕೂಡದು. ಎಂತಹ ಸಣ್ಣ ಪುಟ್ಟ ಕಾರ್ಯಗಳಲ್ಲಿಯೂ ಇದನ್ನು ತೋರಿಸಬಹುದು. ಇತರರು ಬಡವರಾಗಲಿ, ಐಶ್ವರ್ಯವಂತರಾಗಲಿ, ದೊಡ್ಡವರಾಗಲಿ, ಚಿಕ್ಕವರಾಗಲಿ ಕಡೆಗೆ ಯಾರೇ ಆಗಲಿ ಅವರ ವಿಷಯದಲ್ಲಿ ನಾವು ಮರ್ಯಾದೆಯಿಲ್ಲದೆ ನಡೆಯುವುದು ಒರಟುತನ. ನಾವು ಯಾರ ಮನೆಗಾದರೂ ಹೋದಾಗ ಅಲ್ಲಿ ಬಾಗಿಲು ಹಾಕಿದ್ದರೆ, ತಳ್ಳಿಕೊಂಡು ಥಟ್ಟನೆ ನುಗ್ಗಿಬಿಡಲು ಯತ್ನಿಸಬಾರದು. ಒಂದೆರಡು ಸಲ ಕದವನ್ನು ಕೈಬೆರಳುಗಳ ಗೆಣ್ಣುಗಳಿಂದ ಮೆಲ್ಲಗೆ ಬಡಿಯಬೇಕು. ನಮಗಿಂತ ದೊಡ್ಡವರಾದವರು ನಾವಿದ್ದ ಕಡೆಗೆ ಬಂದರೆ, ಎದ್ದುನಿಂತುಕೊಂಡು ಅವರಿಗೆ ಪೀಠವನ್ನು ಕೊಟ್ಟು ಬಳಿಕ ಅವರ ಅಪ್ಪಣೆಯಂತೆ ನಾವು ಕುಳಿತುಕೊಳ್ಳಬೇಕು. ಮನೆಗೆ ಬಂದವರು ಯಾರೇ ಆಗಲಿ ಅವರನ್ನು ನಿಲ್ಲಿಸಿ ನಾವು ಕುಳಿತುಕೊಂಡೇ ಮಾತಾಡಬಾರದು. ದೊಡ್ಡವರು ನಮ್ಮ ಮನೆಗೆ ಬಂದಿದ್ದು ಹೊರಡುವಾಗ ನಾವೂ ಎದ್ದುನಿಂತುಕೊಳ್ಳುವುದು, ಅವರು ಕೊಡೆ, ದೊಣ್ಣೆ ಮೊದಲಾದುದನ್ನೇನಾದರೂ ತಂದಿದ್ದರೆ ಅದನ್ನು ಅವರ ಕೈಗೆ ಕೊಡುವುದು, ಕದವನ್ನು ತೆರೆಯುವುದು, ಸ್ವಲ್ಪ ದೂರದವರೆಗೂ ಜೊತೆಯಲ್ಲಿ ಹೋಗಿ ಸಾಗಕಳುಹಿಸಿ ಬರುವುದು ಇತ್ಯಾದಿಗಳಲ್ಲಿ ಮರ್ಯಾದೆಯನ್ನು ತೋರಿಸಬೇಕು. ಇತರರು ಪರಸ್ಪರ ಮಾತಾಡಿಕೊಳ್ಳುತ್ತಿರುವಾಗ ನಮ್ಮನ್ನು ಕೇಳದ ಹೊರತು ನಾವು ನಡುವೆ ಮಾತಾಡಬಾರದು. ಆಗ ನಮ್ಮ ಕೆಲಸವನ್ನು ನಾವು ನೋಡಿಕೊಳ್ಳುತ್ತಿರ

ಬೇಕಾದ ಕರೆಯಿಸಿಕೊಳ್ಳದೆ ಯಾವುದಕ್ಕೂ ನಾವಾಗಿಹೋಗುವುದು ಬಹಳ ಅಗೌರವ. ಸರಿಯಾಗಿ ಪರ್ಯಾಲೋಚಿಸದೆ ಇತರರನ್ನು ಥಟ್ಟನೆ ಒಳ್ಳೆಯವ ರೆಂದು ಅಥವಾ ಕೆಟ್ಟವರೆಂದು ದುಡುಕಿ ಹೇಳಬಿಡಬಾರದು. ಅವರ ವಿಷ ಯದಲ್ಲಿ ಕೂಲಂಕಷವಾಗಿ ತಿಳಿಯುವವರೆಗೂ ಸುಮ್ಮನಿರುವುದು ಮೇಲು. ಹಾಗೆ ಹೇಳುವುದರಲ್ಲೂ ಏನಾದರೂ ಒಳ್ಳೆಯ ಗುಣವಿದ್ದರೆ ಹೊರಪ ಡಿಸಬಹುದಲ್ಲದೆ ನಾವು ಅವರ ದುರ್ಗುಣಗಳನ್ನು ಎಲ್ಲರ ಸಂಗಡವೂ ಹೇಳುತ್ತ ದೂರಬಾರದು. ಮುಖ್ಯವಾಗಿ ನಮ್ಮನ್ನು ಇತರರು ಹೇಗೆನ್ನು ವರೋ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ನಾವು ಇತರರ ವಿಷಯ ವಾಗಿ ಹೇಳಬೇಕು. ಇತರರೊಡನೆ ಮಾತಾಡುವಾಗ ನಾವು ಅವರ ಕಡೆಗೇ ತಿರುಗಿಕೊಂಡಿರಬೇಕಲ್ಲದೆ ನೆಲವನ್ನು ಅಥವಾ ಮತ್ತೆ ಯಾವುದ ನ್ನಾದರೂ ನೋಡುತ್ತಿರಬಾರದು. ಇತರರು ಪುಂಡುಮಾತು ಅಥವಾ ಇತರ ವಿಧವಾದ ಕೆಟ್ಟ ಮಾತನ್ನು ಆಡುತ್ತಿದ್ದರೆ ಅವರನ್ನು ಪ್ರೋತ್ಸಾಹಿಸಬಾರದು. ನಾವು ಅಂತಹವರ ಜೊತೆಯನ್ನೇ ಬಿಟ್ಟು ಹೊರಡುವುದು ಇಲ್ಲವೆ, ಆ ವಿಷ ಯವನ್ನೇ ಬದಲಾಯಿಸಿ ಅಡ್ಡ ಮಾತಾಡುವುದು ಇತ್ಯಾದಿಗಳಿಂದ ನಮ್ಮ ಅಸಮ್ಮತಿಯನ್ನು ತೋರಿಸಬೇಕು. ನಾವು ಆಡುವ ಮಾತುಗಳು ಯಾವಾ ಗಲೂ ಯೋಗ್ಯವಾಗಿಯೂ, ಮರ್ಯಾದೆಯುಳ್ಳವಾಗಿಯೂ ಇರಬೇಕು. ಇತರರು ಏನೋ ಉಲ್ಲಾಸಕರವಾದ ಮತ್ತು ಏನೋ ದೊಡ್ಡ ಆಶೆಯುಳ್ಳ ಮಾತುಗಳನ್ನಾಡಿಕೊಳ್ಳುತಿದ್ದರೆ 'ಆ ಕೆಲಸವಾಗುವುದಿಲ್ಲ. ಅವರು ಬಿಡು ಕುವುದಿಲ್ಲ' ಎಂಬಂತಹ ಅಶ್ಲೀಲವಾದ ನುಡಿಗಳನ್ನಾಡಿ ಅವರನ್ನು ಸಂಕ ಟಗಡಿಸಬಾರದು. ಇತರರು ಒಂದು ಕಡೆ ಒಟ್ಟಾಗಿ ಸೇರಿದ್ದರೆ ಅವರಲ್ಲಿ ಒಬ್ಬರನ್ನು ಬೇರೆಯಾಗಿ ಕರೆದು ಮಾತಾಡುವುದು ತಪ್ಪು. ಇದರಿಂದ ಅವ ರಿಗೆ ನಮ್ಮಲ್ಲಿ ಪ್ರೀತಿಯು ತಪ್ಪಬಹುದಲ್ಲದೆ ಅವರಲ್ಲೇ ಪರಸ್ಪರವಾಗಿ ಅಂತಃಕಲಹಗಳೂ ಹುಟ್ಟಬಹುದು. ಸದಾ ನಮ್ಮ ಬಳಿಯಲ್ಲಿರತಕ್ಕವರಲ್ಲಿ

ನಮಗೆ ಸಲಿಗೆ ಇದೆಯೆಂದು ತಾತ್ಸಾರ ಮಾಡದೆ ಅವರಲ್ಲೂ ಮರ್ಯಾದೆಯನ್ನು ತೋರಿಸಬೇಕು. ದೇವಸ್ಥಾನಗಳೊಳಕ್ಕೆ ಹೋಗುವಾಗ ಪಾದರಕ್ಷೆಗಳನ್ನೂ, ಕೊಡೆಗಳನ್ನೂ ಒಳಕ್ಕೆ ತೆಗೆದುಕೊಂಡು ಹೋಗಕೂಡದು. ದೇವರ ದರ್ಶನ ಮಾಡುವಾಗ ಇತರರಿಗೆ ಅಡ್ಡವಾಗದಂತೆ, ಒಂದು ಪಕ್ಕದಲ್ಲಿ ನಿಂತುಕೊಳ್ಳಬೇಕು ದೇವಸ್ಥಾನ, ರಾಜಾಸ್ಥಾನ ಮೊದಲಾದ ಘನತೆಯ ಸ್ಥಳಗಳಲ್ಲೂ ಕೈಗಳನ್ನು ಹಿಂದಕ್ಕೆ ಮಡಿಸಿಕೊಳ್ಳದೆ ಮುಂದುಗಡೆ ಜೋಡಿಸಿ ಗಾಂಭೀರ್ಯದಿಂದ ನಿಂತುಕೊಳ್ಳಬೇಕು.

ದೊಡ್ಡಮನುಷ್ಯರನ್ನು ಕಾಣಬೇಕಾದರೆ ಬರೀ ತಲೆಯಲ್ಲಿ ಹೋಗಬಾರದು. ಮತ್ತು ಹಾಗೆ ಹೋಗತಕ್ಕವರು ಲೌಕಿಕರಾಗಿದ್ದರೆ ನಿಲುವಂಗಿ (Long coat) ಯನ್ನು ಧರಿಸುವುದು ಉತ್ತಮ, ನಮ್ಮ ಕೈ ಬರೆಹವನ್ನು ಮುಖ್ಯವಾಗಿ ನಮ್ಮ ಹೆಸರು ಮತ್ತು ವಿಳಾಸವನ್ನು ಕೂಡ ಇತರರು ಸುಲಭವಾಗಿ ಓದುವುದಕ್ಕಾಗುವಂತೆ ಬರೆಯಬೇಕು. ಬೇಗಬೇಗ ಪರಪರನೆ ಗೀಚುವುದರಿಂದ ನಮಗೆ ಕಾಲವು ಕೂಡಿಬರುವುದೆಂದು ಭಾವಿಸುವೆವಾದರೂ ಅದನ್ನು ಓದತಕ್ಕವರಿಗೆ ಎಷ್ಟು ತೊಂದರೆಯಾಗಿ ಕಾಲವು ನಷ್ಟವಾದೀತೆಂಬುದನ್ನು ಯೋಚಿಸಬೇಕು. ಓದುವುದಕ್ಕೆ ತಿಳಿಯದಂತೆ ವಿಳಾಸವನ್ನು ಬರೆದವರು ತಮ್ಮ ಕಾಗದವನ್ನು ಅದೇ ವಿಳಾಸದಾರರಿಗೆ ಸರಿಯಾಗಿ ತಲಪಿಸಲಿಲ್ಲವೆಂದು ಅಂಚೆಯವರನ್ನು ಆಕ್ಷೇಪಿಸುವುದು ತಪ್ಪಲ್ಲವೆ? ಕಾಗದದ ಒಳಗೆ ಮತ್ತು ಮೇಲ್ವಿಳಾಸದಲ್ಲಿ ಸಹ ನಾವು ಯಾರಿಗೆ ಬರೆಯುವೆವೋ ಅವರ ಹೆಸರಿನ ಹಿಂದೆ ಮ|| ರಾ||, ತೀ|| ಚಿ||, ಇಂತಹ ಮರ್ಯಾದೆಯ ಮಾತುಗಳನ್ನು ಅಥವಾ ಸಂಕೇತಾಕ್ಷರಗಳನ್ನು ಆಯಾ ಪಾತ್ರಗಳಿಗೆ ಉಚಿತವಾಗುವಂತೆ ಬರೆಯಬೇಕು.

ಮನುಷ್ಯರಾದವರಿಗೆಲ್ಲಾ ಸರ್ವದಾ ಯಾವುದಾದರೊಂದು ದೊಡ್ಡ ಅಥವಾ ಸಣ್ಣ ಘುಟ್ಟ ಯೋಚನೆ ಇದ್ದೇ ಇರುವುದಷ್ಟೆ. ಇದಕ್ಕೆಲ್ಲಾ

ಎದೆಗುಂದದೆ ಸದಾ ಸಂತೋಷಶೀಲರಾಗಿರಬೇಕು. ಇತರರು ತಮ್ಮ ಬಂಧುಗಳು ಮಿತ್ರರು ಮೊದಲಾದ ಯಾರಾದರೊಬ್ಬರ ಮರಣ ಅಥವಾ ವ್ಯಾಧಿ ಮುಂತಾದ ಏನಾದರೊಂದನ್ನು ಕುರಿತು ತುಂಬ ವ್ಯಸನಪಡುತ್ತಿರುವಾಗ ನಾವು ನಮ್ಮ ಸಂತೋಷದ ಸುದ್ದಿಗಳನ್ನೇ ಅವರ ಸಂಗಡ ಹೇಳುತ್ತ ಬಂದರೆ ಅವರ ಮನಸ್ಸಿಗೆ ಮತ್ತಷ್ಟು ವ್ಯಥೆಯಾದೀತು. ಆದುದರಿಂದ ಅಂತಹ ಸಂದರ್ಭಗಳಲ್ಲಿ ತಕ್ಕ ಸಮಾಧಾನೋಕ್ತಿಗಳಿಂದ ಅವರ ದುಃಖವನ್ನು ತಗ್ಗಿಸಲು ಯತ್ನಿಸಬೇಕು. ಯಾರಾದರೂ ತಮ್ಮ ಇಷ್ಟಮಿತ್ರರ ಮರಣದಿಂದ ತುಂಬ ವ್ಯಥೆಪಟ್ಟು ಸ್ವಲ್ಪ ಕಾಲದ ಮೇಲೆ ಶಾಂತರಾಗಿದ್ದಾಗ ಬಹುಕಾಲ ಕ್ಕೊಂದುಸಲ ಅವರ ಯೋಗಕ್ಷೇಮವನ್ನು ವಿಚಾರಿಸುವುದಕ್ಕೆಂದು ಬಂದವರು ಗತಿಸಿಹೋದವರ ವಿಷಯವನ್ನೆಲ್ಲಾ ವರ್ಣಿಸುತ್ತ ಪುನಃ ಪುನಃ ಆಡುತ್ತ ಬರುವುದರಿಂದ ಅವರು ಮರೆತಿದ್ದ ದುಃಖವನ್ನು ಮತ್ತೆ ಜ್ಞಾಪಿಸಿ ತೊಂದರೆಪಡಿಸಿದಂತಾಗುವುದರಿಂದ ಈ ವಿಷಯದಲ್ಲಿ ತುಂಬ ಜಾಗರೂಕತೆಯಿಂದಿರಬೇಕು. ಲೋಕದಲ್ಲಿ ಯಾರನ್ನೂ ಕೆಟ್ಟವರೆಂದು ಭಾವಿಸಬಾರದು. ನಮ್ಮ ಬಾಯಿ ಒಳ್ಳೆಯದಾದರೆ ಊರು ಒಳ್ಳೆಯದಾಗುವುದು. ಒಟ್ಟು ನೋಡಿದರೆ ನಮಗೆ ಯಾವುದು ಆಗಕೂಡದೆನ್ನುತ್ತೇವೋ ಅದನ್ನು ನಾವು ಇತರರಿಗೂ ಮಾಡಬಾರದು. ಅಂತು ನಮ್ಮ ವಂಶಕ್ಕೂ, ನಾವು ವಿದ್ಯೆ ಕಲಿತ ಪಾಠಶಾಲೆಗೂ ಕೀರ್ತಿಬರುವಂತೆ ನಡೆದುಕೊಳ್ಳಬೇಕು.

## ನೈರ್ಮಲ್ಯ.

ನಾವು ಆರೋಗ್ಯದೃಢಕಾಯರಾಗಿಯೂ ದೀರ್ಘಾಯುಷ್ಮಂತರಾಗಿಯೂ ಬಾಳುತ್ತ ಇತರರಿಂದ ಗೌರವವನ್ನೂ ಪಡೆಯುತ್ತಿರಬೇಕಾದರೆ ನೈರ್ಮಲ್ಯವು ನಮಗೆ ಅತ್ಯಾವಶ್ಯಕ. ನೈರ್ಮಲ್ಯವು ದೇಹ, ಉಡುಪು, ಮನೆ, ಮನೆಯಲ್ಲಿಯ ವಸ್ತು ಇತ್ಯಾದಿವಿಷಯಗಳಲ್ಲೆಲ್ಲಾ ಆಚರಣೀಯವಾದುದು. ಮೈಯ ಕೊಳೆಯು ಚರ್ಮದಲ್ಲಿರುವ ರಂಧ್ರಗಳಮೂಲಕ ಸರಾಗವಾಗಿ

ಈಚೆಗೆ ಬಂದುಬಿಟ್ಟರೆ ಮೈಯ ಮೇಲ್ಭಾಗವು ಶುಚಿಯಾಗುವುದು. ಇದಕ್ಕಾಗಿ ನಿತ್ಯವೂ ತಪ್ಪದೆ ಸ್ನಾನಮಾಡಬೇಕು. ಬಿಸಿನೀರಿನ ಸ್ನಾನವು ಎಲ್ಲರಿಗೂ ಹಿತಕರ. ಒಂಟುವುದಾದರೆ ತಣ್ಣೀರಿನ ಸ್ನಾನವು ಬಹಳ ಒಳ್ಳೆಯದು. ನಿತ್ಯವೂ ಸ್ನಾನವಾದನಂತರ ಒರಟಾದ ಮಡಿಬಟ್ಟೆಯಿಂದ ಚೆನ್ನಾಗಿ ಉಜ್ಜಿ ಒರಸಿಕೊಳ್ಳಬೇಕು. ಇದರಿಂದ ರಕ್ತ ಪರಿಚಲನೆಯೂ ಕ್ರಮಪಟ್ಟು ಶಾಖವೂ ಹುಟ್ಟುವುದು. ಶೈತ್ಯಕ್ಕೂ ಅವಕಾಶವಿರುವುದಿಲ್ಲ. ಊಟವಾದಕೂಡಲೆ ಸ್ನಾನ ಮಾಡಬಾರದು. ಅಭ್ಯಂಜನ ಸ್ನಾನವಾದಮೇಲೆ ಥಟ್ಟನೆ ಶೀತಾಸ್ಪದವಾಗುವ ಪ್ರಕೃತಿಯುಳ್ಳವರು ಸ್ನಾನವಾದಕೂಡಲೆ ಬೇಗ ಒರಸಿಕೊಂಡು ಬಳಿಕ ಶಾಖವಾದ ಬಟ್ಟೆಗಳನ್ನುಹೊದೆದು ಮಲಗಿಕೊಳ್ಳಬೇಕು. ನಿತ್ಯವೂ ರಾತ್ರಿ ಮಲಗಿಕೊಳ್ಳುವುದಕ್ಕೆಮೊದಲು ಕೈಗಳನ್ನೂ ಮುಖವನ್ನೂ ಚೆನ್ನಾಗಿತೊಳೆದುಕೊಳ್ಳಬೇಕು. ಇದಕ್ಕೆ ಬಿಸಿನೀರಾದರೆ ಒಳ್ಳೆಯದು. ಇದರಿಂದ ಚೆನ್ನಾಗಿ ನಿದ್ರೆ ಬರುವುದು. ಮತ್ತು ಪದೇಪದೇ ಕೈಕಾಲುಗಳನ್ನು ತೊಳೆದುಕೊಳ್ಳುವುದರಿಂದ ಬಹಳ ಪ್ರಯೋಜನವುಂಟು. ಹಾಗಿಲ್ಲದೆ ಬೆವರಿರುವ ಕೈಗಳಿಂದ ಶುಚಿಯಾದ ವಸ್ತುಗಳನ್ನು ಮುಟ್ಟುವುದು, ಆಹಾರವನ್ನು ತೆಗೆದುಕೊಳ್ಳುವುದು ಇತ್ಯಾದಿಗಳು ಅಸಹ್ಯಕರ ಮತ್ತು ಅನಾರೋಗ್ಯಕರ. ವಿಶೇಷಗಂಧವುಳ್ಳ ಸಾಬೂನುಗಳನ್ನು ಮೈಗೆ ಉಪಯೋಗಿಸಬಾರದು. ಕಿವಿಯ ಒಳಗೂ ಹೊರಗೂ ಸದಾ ಶುಚಿಯಾಗಿರಬೇಕು. ಗುಗ್ಗೆಯನ್ನು ತೆಗೆಯುವುದಕ್ಕೆ ಮೊನೆಯಾದ ವಸ್ತುಗಳನ್ನು ಉಪಯೋಗಿಸಕೂಡದು. ಯಾಕೆಂದರೆ ಆಯತಪ್ಪಿ ಅವೇನಾದರೂ ಒಳಕ್ಕೆ ತಗುಲಿಬಿಟ್ಟರೆ ದೊಡ್ಡ ಗಂಡವು ಸಂಭವಿಸೀತು. ಆಗಾಗ್ಗೆ ಮುಖ್ಯವಾಗಿ ಬೆಳಗಿನವೇಳೆಗಳಲ್ಲಾದರೂ ಮತ್ತು ದೂರದ ಪ್ರಯಾಣಮಾಡಿದನಂತರವೂ ಕಣ್ಣುಗಳನ್ನು ಸಿಹಿನೀರಿನಿಂದ ತೊಳೆದುಕೊಳ್ಳುವುದು ಒಳ್ಳೆಯದು. ತಲೆಯು ನಿರ್ಮಲವಾಗಿರಬೇಕಾದರೆ ನಿತ್ಯವೂ ಶಿರಸ್ನಾನಮಾಡುವುದು, ಬಾಚಿಕೊಳ್ಳುವುದು, ಇವೆ

ರಡೂ ಇದಕ್ಕೆ ಮುಖ್ಯಮಾರ್ಗಗಳು. ಒಳ್ಳೆಯ ಕೊಬ್ಬರಿಯೆಣ್ಣೆಗೆ ನಿಂಬೆಯ ಹುಳಿಯನ್ನು ಬೆರಸಿ ಕೂದಲಿಗೆ ಸವರಿ ಬಾಚಿಕೊಂಡರೆ ಸದಾ ನಿರ್ಮಲವಾಗಿರುವುದು. ಒಂದುಭಾಗ ಹರಳೆಣ್ಣೆಗೆ ನಾಲ್ಕುಭಾಗ ರೆಕ್ಟಿಫೈಡ್ ಸ್ಪಿರಿಟ್ (Rectified Spirit) ಸೇರಿಸಿ ತಲೆಗೆ ಹಚ್ಚಿಕೊಂಡರೆ ಹುರುಪುಗಳು ಏಳುವುದೂ, ಸುಂಡು ಮೊದಲಾದುವೂ ಗುಣವಾಗುವವು. ಏನಾದರೂ ಕೆಲಸಗಳನ್ನು ಮಾಡಿದನಂತರ ಕೈಕಾಲು ತೊಳೆದುಕೊಳ್ಳುವುದು ಸಾಮಾನ್ಯವಾಗಿ ಎಲ್ಲರಲ್ಲೂ ರೂಢಿಯಾಗಿದೆಯಷ್ಟೆ. ಆದರೆ ಹಾಗೆ ತೊಳೆದುಕೊಂಡಮೇಲೆ ಕೂಡ ಕೆಲವರ ಉಗುರು ಕಣ್ಣುಗಳಲ್ಲಿ ಕೊಳೆಯು ಶಾಶ್ವತವಾಗಿ ಅಂಟಿಕೊಂಡೇ ಇರುವುದು. ಇಂತಹವರು ಊಟಮಾಡುವಾಗ ಈ ಕೊಳೆಯು ಆಹಾರದೊಡನೆ ಸೇರಿ ಹೊಟ್ಟೆಯೊಳಕ್ಕೂ ಹೋಗುವ ಸಂಭವವುಂಟು. ಇದು ಕೇವಲ ಅನಾರೋಗ್ಯಕರ ಮತ್ತು ಹೀಗೆ ಕೊಳೆಗೂಡಿ ಕಪ್ಪಾದ ಉಗುರುಗಳು ತಮಗೆಮಾತ್ರವಲ್ಲದೆ ಇತರರಿಗೂ ಅಸಹ್ಯವಾಗಿರುವುವು. ಆದುದರಿಂದ ಆಗಾಗ್ಗೆ ಉಗುರುಗಳನ್ನು ಕತ್ತರಿಸುತ್ತಿರಬೇಕು. ಪಾದಗಳು ಸರ್ವದಾ ಒದ್ದೆಯಾಗಿರಕೂಡದು. ಹಾಗಿದ್ದರೆ ಶ್ವಾಸಕೋಶಗಳಿಗೂ, ನರಗಳಿಗೂ ಸಂಬಂಧಪಟ್ಟ ಶೀತರೋಗಗಳಿಗೆ ಆಸ್ಪದವುಂಟಾಗುವುದು. ಕಾಲು ಶೈತ್ಯದಿಂದ ಕೂಡಿದ್ದರೆ ಬೇಗಬೇಗ ಒಡುವುದು. ತುಪ್ಪಟದ ಕಾಲುಚೀಲ, ಶಾಲು, ಕಂಬಳಿ ಮೊದಲಾದುವುಗಳನ್ನು ಧರಿಸುವುದು ಅಥವಾ ಬೂದಿಯಿಂದ ತಿಕ್ಕುವುದು ಇವೇ ಮೊದಲಾದವುಗಳಿಂದ ಶಾಖಹುಟ್ಟುವಂತೆ ಮಾಡಬೇಕು. ಉಟ್ಟ ಬಟ್ಟೆಯಲ್ಲಿಯೇ ಸಿಂಬಳವನ್ನು ಸೀದುವುದು, ಅದನ್ನು ಕಿವುಚುವುದು, ಅಥವಾ ನೆಲದ ಮೇಲೆಯೋ ಗೋಡೆಯ ಮೇಲೆಯೋ ಸೀತು ಉಜ್ಜುವುದು ಇವೆಲ್ಲಾ ಕೊಳಕು ಚಾಳಿಗಳು. ಇದಕ್ಕಾಗಿ ಕೈಚೌಕವನ್ನುಪಯೋಗಿಸಬೇಕು. ಹಲ್ಲು ಕೊಳೆಯಾಗಿದ್ದರೆ ನೋಡುವುದಕ್ಕೆ ಚೆನ್ನಾಗಿ ಕಾಣುವುದಿಲ್ಲವಲ್ಲದೆ ಉಸಿರಿನಲ್ಲಿ ಕೆಟ್ಟನಾತವೂ ಉಂಟ

ಗುವುದು ಇದರಿಂದ ಇತರರು ನಮ್ಮನ್ನು ಕಂಡರೆ ಅಸಹ್ಯಪಡುವುದಲ್ಲದೆ ನಮ್ಮ ಹತ್ತಿರ ಸೇರುವುದಕ್ಕೂ ಹಿಂದೆಗೆಯುವರು. ನಿತ್ಯವೂ ಬೆಳಗ್ಗೆ ಮತ್ತು ರಾತ್ರಿ ಮಲಗಿಕೊಳ್ಳುವುದಕ್ಕೆ ಮೊದಲು ಹಲ್ಲನ್ನು ಚೆನ್ನಾಗಿ ಉಜ್ಜಿ ಕೊಳ್ಳಬೇಕು. ಹಲ್ಲು ಸಂದುಗಳಲ್ಲಿ ಆಹಾರಪದಾರ್ಥಗಳ ಅಣುಗಳು ಸೇರಿ ಕೊಂಡಿದ್ದರೆ ಅವೆಲ್ಲಾ ಕೊಳೆತು ದುರ್ಗಂಧವುಂಟಾಗುವುದು. ಮತ್ತು ಇದರಿಂದ ಆಗಾಗ್ಗೆ ಹಲ್ಲುನೋವು ಬರುವುದೂ ಉಂಟು. ಆದುದರಿಂದ ಒಳ್ಳೆಯನೀರಿನಿಂದ ಆಗಾಗ ಬಾಯನ್ನು ಮುಕ್ಕುಳಿಸುತ್ತಿರಬೇಕು. ಎಲ್ಲರೂ ಸಾಮಾನ್ಯವಾಗಿ ಹಲ್ಲುಗಳ ಮುಂಭಾಗವನ್ನುಮಾತ್ರ ಉಜ್ಜಿತೊಳೆಯು ತ್ತಾರೆ. ಇದರ ಜೊತೆಗೆ ಒಳಭಾಗ, ಹಲ್ಲುಗಳ ತುದಿಗಳು, ನಾಲಗೆ, ಒಸಡು, ಇವನ್ನು ಮೆಲ್ಲಗೆ ಬೆರಳುಗಳಿಂದ ತಿಕ್ಕಿಕೊಂಡು ತೊಳೆಯ ಬೇಕು. ಒಳ್ಳೆಯ ಮಾವಿನೆಲೆ ಎಳೆಯದಾದ ಮಾವಿನ ಅಥವಾ ಬೇವಿನಕಡ್ಡಿ ಇವುಗಳಿಂದ ಹಲ್ಲುಜ್ಜುವುದು ತುಂಬ ಮೇಲಾದುದು ಅಥವಾ ಉತ್ತಮ ವಾದ ಹಲ್ಲುಪುಡಿಗಳನ್ನು ಉಪಯೋಗಿಸಬಹುದು. ಮೆಣಸು, ಉಪ್ಪು ಕರ್ಪೂರ, ಗೊಬ್ಬಳಿಯ ಮರದ ತೊಗಟೆ ಅಥವಾ ಬೂದಿ ಇವುಗಳನ್ನು ಬೆರಸಿಟ್ಟುಕೊಂಡರೆ ಒಳ್ಳೆಯ ಹಲ್ಲುಪುಡಿಯಾಗುವುದು. ಅಥವಾ ಬಾದಾಮಿ ಯಹೊಟ್ಟಿನ ಬೂದಿಗೆ ಉಪ್ಪನ್ನುಬೆರಸಿ ಉಪಯೋಗಿಸಬಹುದು. ಯಾವಾ ಗಲೇಆಗಲಿ ಜನಗಳನಡುವೆಯಿರುವಾಗ ಬಾಯಲ್ಲಿ ಬೆರಳಿಟ್ಟುಕೊಂಡು ಕೊಡವಬಾರದು. ಕೆಲವರು ಗಂಟಲನ್ನು ಅಥವಾ ಮೂಗನ್ನು ಸರಿಮಾಡಿ ಕೊಳ್ಳುವುದಕ್ಕೋಸ್ಕರ ಸದಾ ಏನೋಒಂದು ಬಗೆಯ ಸದ್ದನ್ನು ಮಾಡು ತ್ತಿರುವುದುಂಟು ಇದುಬಲು ಕೆಟ್ಟುದು. ಇದರಿಂದ ಸಿಂಬಳವು ಗಂಟಲಿಗೆ ಬರುವುದು. ಇದೊಂದು ಕೆಟ್ಟಚಾಳಿಯೂ ಆಗುವುದು. ಹೀಗೆಯೇ ಮೂಗಿನಲ್ಲಿ, ಕಣ್ಣಿನಬಳಿ, ಅಥವಾ ಕಿವಿಯಲ್ಲಿ ಕೈಯಾಡಿಸುತ್ತಿರುವುದು, ಕೂದಲನ್ನು ಬಿಡಿಸಿಕೊಳ್ಳುತ್ತಿರುವುದು, ನೆಲವನ್ನು ಕೆರೆಯುತ್ತಿರುವುದು

ಇಂತಹ ಅಂಗಚೇಷ್ಟೆಗಳು ಒಳ್ಳೆಯುವಲ್ಲ. ನಾವು ಮಾತನಾಡುವಾಗ ಇತರರ ಮೇಲೆ ಉಗುಳು ಹಾರದಂತೆ ಜಾಗರೂಕರಾಗಿರಬೇಕು. ಇದುವರೆಗೆ ಹೇಳಿದಂತೆ ಶುಚಿತ್ವದಿಂದ ನಮ್ಮ ಮತ್ತು ಇತರರ ಮನಸ್ಸಿಗೆ ಹರ್ಷವೂ ನಮಗೆ ಆರೋಗ್ಯವೂ ಉಂಟಾಗಲು ಅನುಕೂಲ. ಸರ್ವಶ್ರೇಷ್ಠವಾದ ಆರೋಗ್ಯವನ್ನು ಪಡೆಯುವುದಕ್ಕೆ ಇನ್ನು ಕೆಲವು ನೈರ್ಮಲ್ಯ ನಿಯಮಗಳನ್ನು ಅನುಸರಿಸಿ ನಡೆಸುಬೇಕಾಗಿರುವುದು. ನೈರ್ಮಲ್ಯಕ್ಕೆ ಒಳ್ಳೆಯ ಗಾಳಿಯೂ ಬೆಳಕೂ ಬೇಕು ಆದುದರಿಂದಲೇ ಬಿಸಿಲು ನೈರ್ಮಲ್ಯಕ್ಕೆ ಸಹಾಯಕವು ಕಗ್ಗತ್ತಲೆಯಲ್ಲಿ ಒಂದು ಗಿಡವನ್ನಿಟ್ಟರೆ ಅದೂ ಬಿಳಚಿಕೊಂಡು ಕಾಂತಿ ಹೀನವಾಗಿ ಬೆಳಕು ಬರಬಹುದಾದ ಕಡೆಗೆ ತಿರುಗಿಕೊಳ್ಳುವುದಲ್ಲವೆ? ಹಾಗೆಯೇ ಮನುಷ್ಯರು ಕೂಡ ಸರ್ವೋತ್ತಮವಾದ ಈ ಬಿಸಿಲಿನ ಪ್ರಯೋಜನವನ್ನು ಪಡೆದುಕೊಳ್ಳಬೇಕಾಗಿರುವುದು. ಆಗಾಗ ಮೈಗೆ ಬಿಸಿಲು ಬೀಳಬೇಕು ಆದರೆ ಬೆಳಗಿನ ಮತ್ತು ಮಧ್ಯಾನದ ಬಿಸಿಲು ಅನಾರೋಗ್ಯಕರ. ಸಂಜೆಯ ಬಿಸಿಲು ಉತ್ತಮ. ಆದರೆ ತೀಕ್ಷ್ಣವಾದ ಬಿಸಿಲಿನಲ್ಲಿ ತಲೆಗೆ ಬಟ್ಟೆ ಇಲ್ಲದೆ ಅಥವಾ ಕೊಡೆಯನ್ನು ಹಿಡಿದುಕೊಳ್ಳದೆ ಹೊರಗೆ ಹೋದರೆ ತಾಪಾತಿಶಯದಿಂದ ಮೂರ್ಛೆ ಬರುವಂತಾಗುವುದು.

ನಾವು ಧರಿಸುವ ಉಡುಪುಗಳು ಬಹಳ ಮಟ್ಟಿಗೂ ನಿರ್ಮಲವಾಗಿರಬೇಕು. ಮೇಲ್ಗಡೆ ಧರಿಸುವ ಬಟ್ಟೆಗಳಿಗಿಂತಲೂ ಒಳಗಡೆಯವು ಬಹಳ ಮುಖ್ಯವಾದುದರಿಂದ ಅವುಗಳನ್ನಾದರೂ ನಿತ್ಯಗಟ್ಲೆ ತಪ್ಪದೆ ಒಗೆಯುತ್ತಿರಬೇಕು. ಶುಚಿತ್ವವು ಆರೋಗ್ಯವನ್ನು ಕಾಪಾಡುವುದಲ್ಲದೆ ನೋಟಕ್ಕೆ ಅಂದವನ್ನು ಉಂಟುಮಾಡುವುದು. ಕೊಳೆಯು ಕಾಣದೆ ಇರಲಿ ಎಂಬ ಉದ್ದೇಶದಿಂದಲೇ ಕೆಲವರು ಬಿಳುಪಲ್ಲದ ಬಟ್ಟೆಗಳಿಂದ ಅಂಗಿ ಮೊದಲಾದವುಗಳನ್ನು ಹೊಲಿಸಿಕೊಳ್ಳುತ್ತಾರೆ. ಇದೆಂತಹ ದಡ್ಡತನ! ಕೊಳೆಯು ಥಟ್ಟನೆ ಗೊತ್ತಾಗುವಂತಿದ್ದರೆ ಮೇಲಲ್ಲವೆ? ಹಾಸಿಗೆ ಮೊದಲಾದುವನ್ನೂ

ಒಗೆಯಕೂಡದಾದಂತಹ ಬೆಲೆಯಾದ ಒಟ್ಟೆಗಳನ್ನೂ ಬಿಸಿಲಿನಲ್ಲಿ ಒಣಗಹಾಕ ಬೇಕು. ಹೆಚ್ಚು ಬೆಲೆಬಾಳುವ ಕೊಳೆ ಬಟ್ಟೆಗಳಗಿಂತ ಶುದ್ಧವಾದ ಅಗ್ಗದ ಬಟ್ಟೆಗಳೇ ಉತ್ತಮವಾದುವುಗಳು. ಉಡುಪುಗಳು ನಿರ್ಮಲವಾಗಿರುವುದರ ಜೊತೆಗೆ ಇನ್ನು ಕೆಲವು ಗುಣಗಳನ್ನು ಪಡೆದಿರಬೇಕು. ಉಡುಪುಗಳು ಹಗುರವಾಗಿಯೂ, ಸಡಿಲವಾಗಿಯೂ, ಶಾಖವಾಗಿಯೂ ಇರಬೇಕು. ಒದ್ದೆ ಬಟ್ಟೆಗಳನ್ನು ಧರಿಸಬಾರದು. ತುಂಬ ಭಾರವಾದ ರುಮಾಲು ಮೊದಲಾ ದುವನ್ನು ಧರಿಸುವುದು ಕೆಟ್ಟುದು. ಬಟ್ಟೆಗಳು ಹರಿದು ಹೋದರೆ ಹಾಗೆಯೇ ಬಿಟ್ಟು ಬಿಡದೆ ಕೂಡಲೆ ಹೊಲಿಸಬೇಕು. ಹೊಲಿದು ಸರಿಮಾಡಿದ ಒಟ್ಟೆಗ ಳನ್ನು ಧರಿಸುವುದು ಹರಕು ಬಟ್ಟೆಗಳನ್ನು ಧರಿಸುವಷ್ಟು ಅವಮಾನಕರ ವಲ್ಲ. ಮಕ್ಕಳ ತಲೆಗೆ ಉಣ್ಣೆಯಿಂದ ತಯಾರಾದ ಟೋಪಿಗಳನ್ನಿಡ ಕೂಡದು ಹಾಗಿಟ್ಟರೆ ಮಿದುಳಿಗೆ ಕೆಡುಕು. ಚಳಿಗಾಲಕ್ಕೆ ತುಪ್ಪಟದಿಂದ ಆದ ಕರೀಬಟ್ಟೆಗಳು ಮೇಲು. ಬೇಸಗೆಯಲ್ಲಿ ರೇಷ್ಮೆಯಿಂದ ಅಥವಾ ಹತ್ತಿಯಿಂದ ಆದ ತೆಳುವಾದ ಬಿಳಿಯ ಬಟ್ಟೆಗಳು ಹಿತಕರ. ಮನೆಯಿಂದ ಹೊರಗೆ ಹೊರ ಟಾಗ ಬರಿಯಕಾಲಲ್ಲಿ ಸಂಚರಿಸುವುದರಿಂದ ಎಂಜಲು ಮೊದಲಾದ ಕೊಳೆಯು ಕಾಲಿಗೆ ಅಂಟಿಕೊಳ್ಳುವುದಲ್ಲದೆ ಹಲವು ಬಗೆಯ ಅಂಟುರೋ ಗಗಳು—ಮುಖ್ಯವಾಗಿ ಕ್ಷಯಜಾಡ್ಯವು ಪ್ರಾಪ್ತವಾಗುವ ಸಂಭವವುಂಟು. ಮತ್ತು ದೂಳಿನಲ್ಲಿ ಬರಿಯಕಾಲಿನಿಂದ ನಡೆದರೆ ಹಿಮ್ಮಡಿಯು ಬಿರಿಯು ವುದು. ಜೋಡು ಪಾಪಾಸು ಮೊದಲಾದುವುಗಳ ಅಟ್ಟೆಗಳು ತುಂಬ ಎತ್ತ ರವಾಗಿರಕೂಡದು. ಹಾಗಿದ್ದರೆ ಬೆನ್ನು ನೋವೂ ಕಡೆಗೆ ಗೂನೂ ಬರು ವುದುಂಟು.

ಪ್ರತಿಯೊಬ್ಬರೂ ತಮ್ಮ ಜೀವಮಾನದ ಹೆಚ್ಚು ಕಾಲವನ್ನೆಲ್ಲಾ ಮನೆಯಲ್ಲಿ ಕಳೆಯಬೇಕಾಗುತ್ತದೆ. ಆದುದರಿಂದ ಆರೋಗ್ಯವಾಗಿರಬೇ ಕಾದರೆ ಮನೆಯೂ ನಿರ್ಮಲವಾಗಿರಬೇಕಾದುದು ಅತ್ಯಾವಶ್ಯಕ. ಆದುದ

ರಿಂದಲೇ ದೇಹಕ್ಕೆ ಕೊಡಬೇಕಾದಷ್ಟು ಎಚ್ಚರಿಕೆಯು ಗೇಹದ ವಿಷಯ ದಲ್ಲೂ ಆವಶ್ಯಕವೆನ್ನುವರು. ಕೆಲಸಕ್ಕೆ ಬಾರದ ಮತ್ತು ಕೊಳೆಯಾದ ಸಾಮಾನುಗಳನ್ನು ಮನೆಯಲ್ಲಿ ಇಟ್ಟಿರಬಾರದು. ಇದರಿಂದ ಕೊಳೆಯು ಹೆಚ್ಚಿ ರೋಗಾದಿಗಳುಂಟಾಗುವುವು. ಆದುದರಿಂದ ಅಂತಹವುಗಳನ್ನೆಲ್ಲಾ ಸುಟ್ಟುಬಿಡುವುದುತ್ತಮ. ಬಚ್ಚಲುಗಳನ್ನು ಆಗಾಗ್ಗೆ ತೊಳೆಯುತ್ತ ಶುಚಿ ಯಾಗಿಟ್ಟಿರಬೇಕು. ಗೋಡೆಗಳಿಗೆ ವರ್ಷಕ್ಕೊರಡುಸಲವಾದರೂ ಸುಣ್ಣವನ್ನು ತೊಡೆಯಿಸಬೇಕು. ಹೆಂಚಿನ ಮನೆಯಾದರೆ ತಪ್ಪದೆ ವರ್ಷಕ್ಕೊಂದು ಸಲ ಹೆಂಚುಗಳನ್ನು ಕೈಯಾಡಿಸಬೇಕು. ನೆಲವು ಮಣ್ಣಿನದಾಗಿದ್ದರೆ ಕೆಲವು ವರ್ಷಗಳಿಗೊಂದುಸಲವಾದರೂ ಹಳೆಯ ಮಣ್ಣನ್ನು ತೆಗೆಯಿಸಿ ಹೊಸ ಮಣ್ಣನ್ನು ಹಾಕಿಸಬೇಕು. ಮನೆಯಲ್ಲಿ ಯಾವ ವಿಧವಾದ ಕೆಟ್ಟ ನಾತವು ಕಂಡು ಬಂದರೂ ಅಲಕ್ಷ್ಯಮಾಡದೆ ಥಟ್ಟನೆ ಅದರ ಕಾರಣವನ್ನು ಕಂಡು ಹಿಡಿದು ಅದನ್ನು ತಪ್ಪಿಸಬೇಕು. ಮುಖ್ಯವಾಗಿ ಪ್ಲೇಗಿನ ಕಾಲ ದಲ್ಲಿ ಈ ವಿಷಯವಾಗಿ ಬಲು ಎಚ್ಚರಿಕೆಯಿಂದಿರಬೇಕು. ಮನೆಯಲ್ಲಿ ಮೋಲ್ಗಡೆಯ ಕಿಟಕಿಗಳನ್ನು ಸರ್ವದಾ ತೆರೆದಿರಬೇಕು. ಗಾಳಿಯ ಕಾಲ ದಲ್ಲಿ ಬಿರುಗಾಳಿಯ ರಭಸವನ್ನೂ ಬೇಸಗೆಯಲ್ಲಿ ಬಿಸಿಲಿನ ಝಳವನ್ನೂ ತಡೆ ಯುವುದಕ್ಕೋಸ್ಕರ ಕಿಟಕಿಗಳಿಗೆ ಗೌಸು ಹಾಕಿರುವುದು ಮೇಲು. ಮನೆಯ ಒಳಗಡೆ ಮಾತ್ರವಲ್ಲದೆ ಹೊರಗಡೆಯೂ ಬಹಳ ನಿರ್ಮಲವಾಗಿರ ಬೇಕು. ವಾಸ ಮಾಡತಕ್ಕ ಮನೆಯ ಅಂಗಳದಲ್ಲಿ ಕೂಡ ಪಶುಗಳನ್ನು ಕಟ್ಟಕೂಡದು ಬೀದಿಕಸ, ಬಚ್ಚಲನೀರು ಮೊದಲಾದುವು ದೂರವಾಗಿ ಸಾಗಿಹೋಗುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿರಬೇಕು. ಮನೆ ಯ ಹತ್ತಿರ ಎತ್ತರವಾಗಿ ಬೆಳೆದ ಹುಣಿಸೆ ಮೊದಲಾದ ಯಾವ ದೊಡ್ಡ ಮರ ಗಳೂ ಇರಕೂಡದು. ಸುತ್ತಲೂ ಸಣ್ಣ ಪುಟ್ಟ ಹೂ ಗಿಡಗಳು ಮಾತ್ರ ಇರಬಹುದು. ಮನೆಯ ಯಾವ ಭಾಗದಲ್ಲೂ ಪಕ್ಷಿಗಳು ಗೂಡು ಕಟ್ಟ

ಕೊಳ್ಳುವುದಕ್ಕಾಗಲಿ, ಇಲಿಗಳು ತೋಡುವುದಕ್ಕಾಗಲಿ ಅವಕಾಶ ಕೊಡ ಕೂಡದು. ಹೊಗೆಯು ಧಾರಾಳವಾಗಿ ಹೊರಟು ಹೋಗುವಂತೆಯೂ ಜಾಗಿಗೆ ಸ್ವಲ್ಪವೂ ಆಸ್ಪದವಿಲ್ಲದಂತೆಯೂ ನೋಡಿಕೊಳ್ಳಬೇಕು.

ಮನೆಯಲ್ಲಿ ಪ್ರತಿಯೊಂದು ವಸ್ತುವಿಗೂ, ಪ್ರತಿಯೊಂದು ಕೆಲಸಕ್ಕೂ ಗೊತ್ತಾದ ಒಂದೊಂದು ಸ್ಥಳವಿರಬೇಕು. ಮತ್ತು ಎಲ್ಲವೂ ಶುಚಿಯಾಗಿಯೂ, ಅಂದವಾಗಿಯೂ ಇರಬೇಕು. ಮುಖ್ಯವಾಗಿ ಅಡಿಗೆಯ ಮತ್ತು ನೀರಿನ ಪಾತ್ರೆಗಳು ನಿರ್ಮಲವಾಗಿಯೂ ನೋಟಕ್ಕೆ ಅಂದವಾಗಿರುವ ಹಾಗೆ ಸ್ವಚ್ಛವಾಗಿಯೂ ಇರಬೇಕು. ಅಡಿಗೆಯ ಪಾತ್ರೆಗಳನ್ನು ಬೆಳಗಿದ ನಂತರ ಸ್ವಲ್ಪ ಹೊತ್ತು ಬಿಸಿಲಿನಲ್ಲಿ ಅಥವಾ ಬೆಂಕಿಯ ಮೇಲೆ ಇಟ್ಟಿರಬೇಕು. ಕಲಾಯಿ ಇಲ್ಲದೆ ಹಿತ್ತಾಳೆಯ ಅಥವಾ ತಾಮ್ರದ ಪಾತ್ರೆಗಳಲ್ಲಿ ಅಡಿಗೆಯನ್ನು ಮಾಡಕೂಡದು ನೀರಿನ ಪಾತ್ರೆಗಳನ್ನು ಮುಖ್ಯವಾಗಿ ಒಳಗಡೆ ಚೆನ್ನಾಗಿ ಉಜ್ಜಿ ತೊಳೆಯಬೇಕು. ಮುಚ್ಚದೆ ಯಾವ ಪದಾರ್ಥಗಳನ್ನೂ ತೆರೆದಿಟ್ಟಿರಕೂಡದು. ಹಾಗೆ ತೆರೆದಿದ್ದರೆ ನೊಣ, ಹುಳು, ಧೂಳು ಮೊದಲಾದುವು ಬಿದ್ದು ಕೆಡಿಸುವ ಸಂಭವವುಂಟು. ಹಾಲಿನ ಪಾತ್ರೆಯು ಮತ್ತು ಅದನ್ನು ಇಡುವ ಸ್ಥಳದ ವಿಷಯದಲ್ಲಿ ಹೆಚ್ಚು ಜಾಗರೂಕತೆಯು ಆವಶ್ಯಕ. ಅಕ್ಕಿ, ಬೇಳೆ ಮೊದಲಾದ ಧಾನ್ಯಗಳು ತಂಕಾಗಿ ಉಪ್ಪಿನಕಾಯಿ ಮೊದಲಾದವುಗಳಲ್ಲಿ ಹುಳುಗಳು ಬೀಳಲವಕಾಶವಿಲ್ಲದಂತೆ ರಕ್ಷಿಸಬೇಕು. ಕುರ್ಚಿ, ಬೆಂಚು ಮೊದಲಾದ ಮರದ ಸಾಮಾನುಗಳನ್ನು ಧೂಳು ಸೇರದಂತೆ ನಿತ್ಯವೂ ಒರಸುತ್ತಲೂ ಆಗಾಗ್ಗೆ ಗಚ್ಚೆಣ್ಣೆಯನ್ನು ಹಾಕಿಸುತ್ತಲೂ ಇರಬೇಕು. ಪುಸ್ತಕಗಳಿಗೆ ಹುಳ ಹತ್ತದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ನ್ಯಾಪ್ತಲೈನ್ ಗುಳಿಗೆಗಳನ್ನುಪಯೋಗಿಸುವುದು ಮೇಲು ನಾವು ನಿದ್ರೆಯಿಂದ ಎದ್ದ ಕೂಡಲೆ ಹಾಸಿಗೆಯನ್ನು ಸುತ್ತಿಬಿಡದೆ ಅದನ್ನು ಬಿಸಿನಲ್ಲಿ ಅಥವಾ ಗಾಳಿಯಲ್ಲಾದರೂ ಸ್ವಲ್ಪ ಹೊತ್ತು ಆರಹಾಕಬೇಕು.

ಹತ್ತಿಯ ಬಟ್ಟೆಗಳಾದರೆ ಕಡೆಗೆ ವಾರಕ್ಕೊಂದುಸಲವಾದರೂ ಒಗೆಯಬೇಕು. ಇದರಿಂದ ಬಟ್ಟೆಗಳು ಬೆವರು ಮೊದಲಾದ ಕೊಳೆಯಿಲ್ಲದೆ ಶುದ್ಧವಾಗಿರುವುವು. ಮಲಗುವುದಕ್ಕೆ ಒತ್ತಾಗಿ ನೆಯ್ದ ಜಂಖಾನೆ, ತುಂಬ ದಪ್ಪವಾದ ಸುಪ್ಪತ್ತಿಗೆ, ಸ್ಪ್ರಿಂಗಿನ ಮಂಚ, ಇಂಥವುಗಳಗಿಂತಲೂ ಗಾಳಿಯಾಡಲನುಕೂಲಿಸುವ ಕಂಬಳಿಗಳು ಚಾಪೆ, ತೆಳುವಾದ ಸುಪ್ಪತ್ತಿಗೆ, ಕೇವಲ ಎತ್ತರವಿಲ್ಲದ ತಲೆದಿಂಬು, ಮರದ ಹಲಗೆಯ ಮಂಚ ಇಂಥವುಗಳು ಉತ್ತಮ. ಸರ್ವದಾ ಕೇವಲ ಮೃದುವಾದ ಹಾಸಿಗೆಯ ಮೇಲೆ ಮಲಗುವ ಅಭ್ಯಾಸವಾದರೆ ಕಾಲಕ್ರಮದಲ್ಲಿ ಮೂಲವ್ಯಾಧಿಯು ಪ್ರಾಪ್ತವಾಗುವುದೆನ್ನುವರು. ಮಲಗುವ ಮನೆಯಲ್ಲಿ ದೊಡ್ಡದೀಪಗಳನ್ನಿಡಬಾರದು. ಇದರಿಂದ ಅಲ್ಲಿಯ ವಾಯು ಕೆಟ್ಟು ಅಲ್ಲಿ ಮಲಗಿದವರ ಆರೋಗ್ಯವನ್ನು ಕೆಡಿಸುವುವು.

## ವ್ಯಾಯಾಮ.

ಮನುಷ್ಯರು ಮಾಡುವ ಪ್ರತಿಯೊಂದು ಕೆಲಸವು ದೇಹಬಲದಿಂದ ಅಥವಾ ಬುದ್ಧಿಬಲದಿಂದ ನಡೆಯುವುದಷ್ಟೆ. ಕಾಯಪುಷ್ಟಿಯು ಸರಿಯಾಗಿದ್ದರೆ ಬುದ್ಧಿಯು ಕೆಲಸಮಾಡುವುದಕ್ಕೆ ತಕ್ಕಂತೆ ಒಳ್ಳೆಯ ಸ್ಥಿತಿಯಲ್ಲಿರುವುದು. ಆದುದರಿಂದ ಯಾವುದು ಸರಿಯಾಗಿ ನಡೆಯುವುದಕ್ಕೆ ದೇಹದಾರ್ಢ್ಯವು ಇರಲೇಬೇಕೆಂದಾಯಿತು. ಇದಕ್ಕೆ ಹಿಂದೆ ತಿಳಿಯಿಸಿದವುಗಳು ಮಾತ್ರವಲ್ಲದೆ ವ್ಯಾಯಾಮವೂ ಆವಶ್ಯಕ. ಈಚೇಚೆಗೆ ನಾಗರೀಕತೆಯು ಹೆಚ್ಚುತ ಬಂದಂತೆಲ್ಲಾ ಜನರು ಕೈಗಾರಿಕೆ, ವಿದ್ಯಾಭ್ಯಾಸ ವ್ಯಾಪಾರ, ಇಂತಹ ಯಾವುದಾದರೊಂದುದ್ದೇಶದಿಂದ ಪಟ್ಟಣವಾಸವನ್ನೇ ಹೆಚ್ಚಾಗಿ ಬಯಸುತ್ತಿರುವರು. ಅಲ್ಲಿ ಹೆಚ್ಚು ಜನಗಳು ಕಡಿಮೆಯ ಸ್ಥಳದಲ್ಲೇ ಒತ್ತರಿಸಿಕೊಂಡು ತಕ್ಕಷ್ಟು ಗಾಳಿ ಬೆಳಕುಗಳಿಗನುಕೂಲವಲ್ಲದ ಮನೆಗಳಲ್ಲಿ ವಾಸಮಾಡಬೇಕಾಗುವುದು.

ಪುರುಷರು ಕೆಲಸಗಳಿಗೋಸ್ಕರ ಹೊರಗೆ ಓಡಾಡಿಕೊಂಡು ಬರುವುದರಿಂದ ಅವರಿಗೆ ಈ ತೊಂದರೆಯು ಸ್ವಲ್ಪವಾದರೂ ಕಡಿಮೆಯಾಗುವ ಸಂಭವವುಂಟು. ಸ್ತ್ರೀಯರಾದರೋ ಪುರುಷರಂತೆ ಹೊರಗೆ ಸಂಚರಿಸುವುದು ನಮ್ಮಲ್ಲಿ ಅಷ್ಟು ಬಳಕೆಯಲ್ಲಿಲ್ಲದಿರುವುದರಿಂದ ಈ ಸೆರೆಮನೆಗಳಲ್ಲೇ ಇರುತ್ತ ಪರಮೇಶ್ವರನ ಪರಮಾನುಗ್ರಹರೂಪವಾದ ಗಾಳಿ ಬೆಳಕುಗಳನ್ನು ಪಡೆದು ಬದುಕುವ ಪುಣ್ಯವೂ ಅವರಿಗೆ ದೊರೆಯದೆ ಇದೆ. ನೆಯ್ಗೆ ವ್ಯಾಪಾರ, ಬರೆವಣಿಗೆ ಇಂತಹ ವೃತ್ತಿಗಳನ್ನವಲಂಬಿಸಿರುವ ಪುರುಷರಿಗೂ ಇದೇ ದುರ್ಗತಿಯುಂಟಾಗಿದೆ. ವ್ಯಾಯಾಮವು ಸರ್ವರಿಗೂ ಅವಶ್ಯಕ; ಈ ಮೇಲೆ ಕಂಡವರಿಗಂತು ಅತ್ಯಾವಶ್ಯಕ.

ಗರಡಿಸಾಧನೆ, ಡ್ರಿಲ್, ಓಟ, ಅಥವಾ ಚುರುಕಾದ ನಡಗೆ, ನೆಗೆತ ಕುಣಿತಗಳು, ಈಜು ಇಂಥವುಗಳೆಲ್ಲ ವ್ಯಾಯಾಮವೆನಿಸಿಕೊಳ್ಳುವುವು. ಅಂಗಸಾಧನೆಯು ಎಲ್ಲರಿಗೂ ಯಾವಾಗಲೂ ಒಂದೇ ವಿಧವಾಗಿರಬೇಕೆಂದು ಹೇಳಲು ಸಾಧ್ಯವಿಲ್ಲ. ಇದು ಅವರವರ ವಯಸ್ಸು, ದೇಹಪ್ರಕೃತಿ, ಸ್ತ್ರೀಯರೋ, ಪುರುಷರೋ ಎಂಬ ಅಂಶ, ಬೇಸಗೆಯೋ ಮಳೆಗಾಲವೋ ಎಂಬುದು ಇಂಥವುಗಳನ್ನೆಲ್ಲಾ ಯೋಚಿಸಿ ತಕ್ಕ ಅಂಗಸಾಧನೆಯನ್ನು ಮಾಡಬೇಕು. ಅಂಗಚಲನೆಗೆ ವಿಶೇಷ ಅವಕಾಶವಿರತಕ್ಕ ಫುಟ್‌ಬಾಲ್ ಕ್ರಿಕೆಟ್ ಟೆನಿಸ್ ಲಗ್ಗೆ ಚೆಂಡು ಚಿಣ್ಣಿಕೋಲು ಮೊದಲಾದ ವಿದೇಶೀಯ ಮತ್ತು ಸ್ವದೇಶದ ಆಟಗಳು ಪಾಠಶಾಲೆಯಲ್ಲಿ ನಡೆಯುವ ಡ್ರಿಲ್ಲೂ ಬಾಲಕರಿಗೆ ಒಳ್ಳೆಯ ಸಾಧನೆಗಳು. ನೀರು ಸೇದುವುದು, ಕುಟ್ಟುವುದು, ಬೀಸುವುದು, ಗಿಡಗಳಿಗೆ ನೀರೆರೆಯುವುದು, ಬಟ್ಟೆಯೊಗೆಯುವುದು, ಇಂಥಹ ಮನೆಗೆಲಸಗಳಿಂದಲೇ ಸ್ತ್ರೀಯರಿಗೆ ಉತ್ತಮವಾದ ವ್ಯಾಯಾಮವುಂಟಾಗುವುದು. ಇವುಗಳನ್ನು ಮಾಡುವುದರಿಂದ ಯಾವ ಅವಮಾನವೂ ಉಂಟಾಗುವುದಿಲ್ಲ. ಮತ್ತು ಇವುಗಳನ್ನು ಮಾಡುವುದರಿಂದ ವ್ಯಾಯಾಮದ ಫಲಗಳುಂಟಾಗುವುದಲ್ಲದೆ

ಮನೆಯ ಕೆಲಸಗಳನ್ನೆಲ್ಲಾ ನಿರ್ಮಲವಾಗಿಯೂ ವ್ಯಥಾನಷ್ಟವಿಲ್ಲದೆ ಸುಲಭವಾಗಿಯೂ ನಡೆಯುವುವು. ದಂಡೆ ಬೈಟ ಈಜುವುದು ಮೊದಲಾದುವು ಪುರುಷರಿಗೆ ಒಳ್ಳೆಯ ಸಾಧನೆಗಳು.

ಅಂಗಸಾಧನೆಯಿಂದ ದೇಹವು ಸದಾ ಆರೋಗ್ಯಸ್ಥಿತಿಯಲ್ಲಿರುವುದು ಮಾತ್ರವಲ್ಲದೆ ಶಕ್ತಿಯೂ ಹೆಚ್ಚುವುದು. ದೇಹದ ಪ್ರತಿಭಾಗದಲ್ಲೂ ರಕ್ತವು ಚೆನ್ನಾಗಿ ಸಂಚರಿಸುವುದರಿಂದ ದೇಹವು ಕಾಂತಿಯುಕ್ತವಾಗಿ ಸುಂದರವಾಗುವುದು. ಏನಾದರೂ ಮೈಗೆ ಬಂದ ವಿಕಾರ ಅಜೀರ್ಣ, ತಲೆತಿರುಗು, ಶೂಲೆ ವಕ್ರಗಮನ, ಕೆಟ್ಟ ಬಗೆಯ ವಾಯುಗಳು, ಇಂಥವುಗಳೆಲ್ಲಾ ಇದರಿಂದ ಗುಣವಾಗಬಹುದು. ಮನಸ್ಸಿನ ಉತ್ಸಾಹವು ಹೆಚ್ಚಿ ಸದಾ ಸಂತೋಷವುಂಟಾಗುವುದು. ದೇಹವನ್ನು ಮನಸ್ಸನ್ನು ಬದ್ಧದಲ್ಲಿಟ್ಟುಕೊಳ್ಳುವಂಥ ಆತ್ಮಸಂಯಮ ಅಥವಾ ನಿಗ್ರಹಶಕ್ತಿಯುಂಟಾಗುವುದು. ನಿಶ್ಚಯಜ್ಞಾನವೂ ಅವಧಾನಶಕ್ತಿಯೂ ಹೆಚ್ಚುತ್ತವು. ಶ್ರಮದಿಂದ ಅನೇಕರು ಒಟ್ಟಿಗೆ ಕೆಲಸಮಾಡುವ ಸ್ವಭಾವವುಂಟಾಗಿ ಐಕಮತ್ಯದ ಫಲಗಳನ್ನು ಪಡೆಯಲು ಅನುಕೂಲವಾಗುವುದು. ವ್ಯಾಯಾಮದಿಂದ ಒಳ್ಳೆಯ ಸಹನತೆಯೂ ನೆಲೆಗೊಳ್ಳುವುದು. ಈ ಫಲಗಳನ್ನೆಲ್ಲಾ ಸರಿಯಾಗಿ ಪಡೆಯಬೇಕಾದರೆ ನಿತ್ಯವೂ ತಪ್ಪದೆ ವ್ಯಾಯಾಮವನ್ನು ಮಾಡುತ್ತಿರಬೇಕು. ಕೆಲವು ದಿನಗಳು ಏನೂ ಮಾಡದೆ ಸುಮ್ಮನಿರುವುದು, ಮತ್ತೆ ಕೆಲವು ದಿನ ಮಿತಿಮೀರಿ ಮಾಡುವುದು ಇಂಥ ಅಕ್ರಮಗಳಿಂದ ಒಳ್ಳೆಯ ಫಲಗಳಿಗೆ ಬದಲಾಗಿ ಕೇಡಾಗುವುದುಂಟು. ಆದುದರಿಂದ ಈ ವಿಷಯದಲ್ಲಿಯೂ ಜಾಗರೂಕತೆಯು ಅವಶ್ಯಕ.

## ವಿಶ್ರಾಂತಿ

ಲೋಕದಲ್ಲಿ ಪ್ರತಿಯೊಂದಕ್ಕೂ ವಿಶ್ರಾಂತಿಯು ಆವಶ್ಯಕ. ಪ್ರಕೃತಿಯಲ್ಲಿ ಯಾವ ವಸ್ತುವನ್ನು ನೋಡಿದರೂ ಒಂದು ಕೆಲಸ ನಡೆದಮೇಲೆ ಮತ್ತೆ ಅದೇ ಕೆಲಸ ನಡೆಯುವುದಕ್ಕೆ ಮೊದಲು ವಿಶ್ರಾಂತಿಯು ಇರಲೇ

ಬೇಕು. ಮೆದುಳಿಗೆ ವಿಶ್ರಾಂತಿಯನ್ನು ಕೊಡಲು ನಿದ್ರೆಯು ಸನ್ನದ್ಧವಾಗಿಯೇ ಇರುವುದು. ಈ ರೀತಿಯಾಗಿ ನೋಡಿದಲ್ಲಿ ಆದುದೇ ಆಗುತ್ತಿದ್ದರೆ ಎಲ್ಲರಿಗೂ ಬದುಕುವುದು ಕೂಡ ಬೇಸರವಾಗಿ ಲೋಕವ್ಯವಹಾರವು ಚೆನ್ನಾಗಿ ನಡೆಯಲಾರದೆಂದು ಭಾವಿಸಿ ಭಗವಂತನು ಈ ವಿಧವಾದ ಬದಲಾವಣೆಯನ್ನು ದಯೆಪಾಲಿಸಿರುವುದೊಂದು ಅಮೂಲ್ಯವಾದ ಅನುಗ್ರಹವೆಂದು ತಿಳಿಯಬೇಕು. ಆದುದರಿಂದ ಕೆಲಸಗಳ ಬದಲಾವಣೆಯೇ ವಿಶ್ರಾಂತಿಯೆಂದು ಬಲ್ಲವರು ಹೇಳುವರು.

ಯಾವುದಾದರೊಂದು ಕೆಲಸವನ್ನು ಮಾಡಿ ದಣಿದಿದ್ದಾಗ ಮಾತ್ರ ವಿಶ್ರಾಂತಿಯು ಅವಶ್ಯಕ. ಹೀಗೆ ವಿಶ್ರಾಂತಿಯು ಒಂದು ಕೆಲಸ ಮುಗಿದ ಮೇಲೆ ಮತ್ತೊಂದು ಕೆಲಸದ ರೂಪದಲ್ಲಿ ಅಥವಾ ನಿರುದ್ಯೋಗದ ರೂಪದಲ್ಲಿರಬಹುದು. ಆದರೆ ಸರ್ವದಾ ಯಾವ ಕೆಲಸವನ್ನು ಮಾಡದೆ ಸುಮ್ಮನೆ ಕುಳಿತಿರುವುದು ಎಂದಿಗೂ ವಿಶ್ರಾಂತಿಯೆನಿಸಿಕೊಳ್ಳಲಾರದು. ಅದು ಸೋಮಾರಿತನವೆನಿಸುವುದು ಕೆಲಸಮಾಡುವುದರಿಂದ ಸವೆದುಹೋದ ಶರೀರಾಂಶಗಳು ಪುನಃ ಕೂಡಿಕೊಳ್ಳುವುದಕ್ಕಾಗಿ ಸ್ವಲ್ಪ ಕಾಲವನ್ನೇ ಕೊಟ್ಟು ಆಗ ದಣಿವಾರಿಸಿಕೊಳ್ಳುವುದೇ ವಿಶ್ರಾಂತಿಯೆಂದು ಕೆಲವರು ವಿದ್ವಾಂಸರು ಹೇಳುವರು.

ಪ್ರತಿಯೊಂದು ಪ್ರಾಣಿಗೂ ಅವಶ್ಯಕವಾದ ಈ ವಿಧವಾದ ವಿಶ್ರಾಂತಿಯು ನಿದ್ರೆಯಿಂದ ದೊರೆವುದು. ಇದು ಅಷ್ಟು ಮುಖ್ಯವಾದುದರಿಂದ ದೇವರಿಂದಲೇ ಅನುಗ್ರಹಿಸಲ್ಪಟ್ಟಿದೆ. ನಿದ್ರೆಯು ಪ್ರಕೃತಿಯನ್ನು ಪೂರ್ವಸ್ಥಿತಿಗೆ ತರುವುದು. ಸಾಮಾನ್ಯವಾಗಿ ಒಬ್ಬ ಪುರುಷನಿಗೆ ಒಂದು ದಿನಕ್ಕೆ ಏಳು ಗಂಟೆಗಳ ಕಾಲವೂ ಒಬ್ಬ ಸ್ತ್ರೀಗೆ ಎಂಟುಗಂಟೆಗಳಷ್ಟು ಕಾಲವೂ ನಿದ್ರೆಗೆ ಅವಶ್ಯಕ. ಆದರೆ ಅವರವರು ಮಾಡುವ ವೃತ್ತಿಗಳಿಗೂ ಅವರವರ ದೇಹಸ್ಥಿತಿಗಳಿಗೂ ತಕ್ಕಂತೆ ಆ ಕಾಲವು ಸ್ವಲ್ಪಮಟ್ಟಿಗೆ ವ್ಯತ್ಯಾಸವನ್ನು

ಪಡೆಯಬಹುದು. ಹುಡುಗರು ಬಹಳಹೊತ್ತು ನಿದ್ರಿಸಬೇಕು. ಆದುದರಿಂದಲೇ ಅವರು ಹೊತ್ತಿಗೆ ಮುಂಚೆ ಮಲಗಿಕೊಳ್ಳಬೇಕು. ಎಳೆಯ ಮಕ್ಕಳು ನಿತ್ಯವೂ ಹನ್ನೆರಡುಗಂಟೆಗಳಷ್ಟುಕಾಲ ನಿದ್ರಿಸಬೇಕು. ಮಿದುಳಿನಿಂದ ಅಂದರೆ ಬುದ್ಧಿಯಿಂದ ಕೆಲಸಮಾಡತಕ್ಕವರಿಗೆ ಎಂಟುಗಂಟೆಗಳಷ್ಟು ಕಾಲದ ನಿದ್ರೆಯು ಆವಶ್ಯಕ. ಶುಭ್ರವಾದ ಹಾಸಿಗೆಯಮೇಲೆ ನಿರ್ಮಲವಾದ ಗಾಳಿಯಲ್ಲಿ ತಕ್ಕಷ್ಟುಕಾಲ ನಿದ್ರೆಮಾಡದಿದ್ದರೆ ಆರೋಗ್ಯಸ್ಥಿತಿಯು ಸರಿಯಾಗಿರುವುದಿಲ್ಲ. ಹೊತ್ತಿಗೆ ಮುಂಚೆ ಏಳುವುದರಿಂದ ಸರ್ವದಾ ಆರೋಗ್ಯವಾಗಿರಬಹುದು. ಇದು ನಿತ್ಯಗಟ್ಟಳೆ ಪಡೆಯತಕ್ಕ ವಿಶ್ರಾಂತಿ. ನಿತ್ಯವೂ ಏಕರೀತಿಯಾಗಿ ಕೆಲಸಮಾಡುವುದರಿಂದುಂಟಾಗುವ ಬೇಸರವನ್ನು ಪರಿಹರಿಸಿಕೊಳುವುದಕ್ಕೆ ವಾರಕ್ಕೊಂದುದಿನವಾದರೂ ವಿಶ್ರಾಂತಿಯು ಆವಶ್ಯಕ. ಸರ್ಕಾರದವರು ಈಗ ಭಾನುವಾರ ರಜಾಕೊಡಿಸುತ್ತಿರುವುದೇ ಇದಕ್ಕೆ ದೃಷ್ಟಾಂತವಾಗಿದೆ. ಬುದ್ಧಿಗೆ ಬೇಸರವಾಗಿರುವಾಗ ಆಟಪಾಟಗಳು, ವೃತ್ತಾಂತಪತ್ರಿಕೆಗಳನ್ನೂ ಕಾದಂಬರಿಗಳನ್ನೂ ಓದುವುದು, ಮಿತ್ರರ ಸಂಗಡ ಸರಸ ಸಲ್ಲಾಪಗಳು, ಮಕ್ಕಳನ್ನಾಟವಾಡಿಸುವುದು, ಇಂಥವುಗಳೆಲ್ಲಾ ಒಳ್ಳೆಯ ವಿಶ್ರಾಂತಿಮಾರ್ಗಗಳು.

## ಆರೋಗ್ಯ.

ನಮ್ಮ ಜೀವಮಾನಕ್ಕೆ ಆರೋಗ್ಯವೇ ಮೂಲಾಧಾರ, ಆರೋಗ್ಯವನ್ನು ಕಾಪಾಡಿಕೊಳ್ಳುವುದು ನಮ್ಮ ಕೈಯಲ್ಲಿಯೇ ಇರುವುದು. ಇಂಗ್ಲೆಂಡಿನ ಯಾರ್ಕ್‌ಷೈರಿನಲ್ಲಿ ೧೫೦೦ ನೆ ಮೇ ೧೭ ರಲ್ಲಿ ಜನಿಸಿದ ಹೆನ್ರಿ ಜಂಕಿನ್ಸ್ ಎಂಬಾತನು ೧೭೦ ವರ್ಷಗಳು ಬದುಕಿದ್ದನು. ಈತನು ನಿತ್ಯವೂ ಬೆಳಗಾಗುತ್ತಲೇ ಒಂದು ಪಂಚಪಾತ್ರೆಯಷ್ಟು ನೀರನ್ನು ಕುಡಿಯುತ್ತ ಮಿತಾಚರಣೆಯಲ್ಲಿದ್ದುದರಿಂದ ಹಾಗೆ ದೀರ್ಘಾಯುಷ್ಮಂತನಾಗಿ ಜೀವಿಸಿದನು. ೧೪೮೩ ರಲ್ಲಿ ಇಂಗ್ಲೆಂಡಿನಲ್ಲಿ ಹುಟ್ಟಿದ ಥಾಮುಸ್‌ಪಾರ್ ಎಂಬಾತನು

ತನ್ನ ೮೮ ನೆಯ ವಯಸ್ಸಿನಲ್ಲಿ ಮೊದಲನೆಯ ಮದುವೆಯನ್ನು ೧೨೦ ನೆಯ ವಯಸ್ಸಿನಲ್ಲಿ ಮತ್ತೊಂದು ಮದುವೆಯನ್ನೂ ಮಾಡಿಕೊಂಡನಂತೆ! ಮತ್ತು ಈತನು ತನ್ನ ೧೪೪ ನೆಯ ವಯಸ್ಸಿನಲ್ಲಿ ಜೂಜೋಟವಾಡುತ್ತಲೂ ಕಣದಲ್ಲಿ ಕಾಳು ಬಡಿಯುತ್ತಲೂ ಇದ್ದನಂತೆ! ದಿನಕ್ಕೆರಡುವೇಳೆ ಸಾಮಾನ್ಯವಾದ ಆಹಾರವನ್ನು ಮಿತವಾಗಿ ಭುಜಿಸುತ್ತಿದ್ದುದು ವಿನಾ ಮತ್ತೆ ಯಾವ ಅತಿಶಯವಾದ ಸುಖಭೋಗಗಳನ್ನೂ ಈತನು ಕಂಡವನಲ್ಲವಂತೆ! ಈ ಪುಣ್ಯಾತ್ಮನು ೧೫೨ ವರ್ಷಗಳು ಬದುಕಿದ್ದನೆನ್ನುವರು. ಮನುಷ್ಯರು ಸ್ವಪ್ರಯತ್ನದಿಂದ ಹೆಚ್ಚು ಹೆಚ್ಚು ಭೋಗಗಳನ್ನು ಕಲ್ಪಿಸಿಕೊಳ್ಳುತ್ತ ಬಂದಂತೆಲ್ಲಾ ಅವರ ಆಯುಸ್ಸು ಕ್ಷೀಣಿಸುತ್ತ ಬರುವುದು. ನಮ್ಮ ದೇಶದಲ್ಲಿ ಈಗಿರುವವರನ್ನೂ ಪೂರ್ವಿಕರನ್ನೂ ಹೋಲಿಸಿದರೆ ಈ ಸಂಗತಿಯು ವ್ಯಕ್ತಪಡುವುದು.

ಸ್ವಾಭಾವಿಕವಾಗಿ ಮಿತಾಚರಣೆಯುಳ್ಳವುವುದರಿಂದ ತಿರ್ಯಗ್ಜಂತುಗಳು, ಕೂಡ ದೀರ್ಘಾಯುಸ್ಸನ್ನು ಪಡೆದಿರುವುವೆಂಬುದಕ್ಕೆ ಲೋಕದಲ್ಲಿ ಎಷ್ಟೋ ದೃಷ್ಟಾಂತಗಳುಂಟು. ಮಹಾ ಅಲೆಗ್ಝಾಂಡರನು ಪುರೂರವಸ್ಸನ್ನು ಗೆದ್ದು ಬಂದು ಆನೆಯನ್ನು ಪಡೆದು ಅದನ್ನು ಸೂರ್ಯನಿಗೆ ಖಾಸಲಾಗಿ ಬಿಡಬೇಕೆಂದು ನಿಶ್ಚಯಿಸಿ ಅದರ ಕೊಂಬುಗಳಮೇಲೆ ತನ್ನ ಹೆಸರಿನ ಶಾಸನವನ್ನು ಕೆತ್ತಿಸಿದ್ದುದು ಅಲ್ಲಿಂದ ಮುಂದಕ್ಕೆ ೩೫೦ ವರ್ಷಗಳನಂತರವೂ ಜೀವಿಸಿದ್ದ ಆ ಆನೆಯನ್ನು ನೋಡಿದುದರಿಂದ ಸ್ಪಷ್ಟವಾಗಿ ಗೊತ್ತಾಯಿತಂತೆ! ತಿಮಿಂಗಿಲವು ೧೦೦೦ ವರ್ಷ ಬದುಕುವುದೆಂದು ಕುರೀರ್ ಎಂಬ ಒಬ್ಬ ಪಂಡಿತನು ಹೇಳಿರುವನು. ವಿಯನ್ನದಲ್ಲಿ ಒಂದು ಹದ್ದು ೧೦೪ ವರ್ಷ ಜೀವಿಸಿದ್ದಿತಂತೆ! ಹೀಗೆ ಕಾಗೆಯು ಒಂದುನೂರುವರ್ಷವೂ ಹಂಸೆಯು ೩೦೦ ವರ್ಷವೂ ಆಮೆಯು ೧೦೩ ವರ್ಷವೂ ಬದುಕಿದುದಕ್ಕೆ ನಿದರ್ಶನಗಳಿವೆ. ಆಯಾಯ ಜನಾಂಗದವರ ನಡೆವಳಿಕೆಗೆ ತಕ್ಕಂತೆ ಮನುಷ್ಯರಲ್ಲಿಯೂ ಆಯುಃಪ್ರಮಾ

ಣದ ವಿಚಾರದಲ್ಲಿ ಹಲವು ವ್ಯತ್ಯಾಸಗಳಿರುವುವು. ಸೀಸರಿನಕಾಲದಲ್ಲಿ ರೋಮನ್ ಜನಗಳ ಸರಾಸರಿ ಆಯುಸ್ಸು ೧೭ ವರ್ಷಗಳು, ಎಲಿಸ್ ಬೆತ್ತಿನ ಕಾಲದಲ್ಲಿ ಇಂಗ್ಲಿಷರ ಸರಾಸರಿ ಆಯುಸ್ಸು ೨೦ ವರ್ಷಗಳಿದ್ದುವು. ಈಗ ೪೦ ರ ಮೇಲಾಗಿದೆ ಈಗ ಪ್ರಪಂಚದಲ್ಲೆಲ್ಲಾ ಅಮೇರಿಕದವರ ಜೀವಮಾನದ ಸರಾಸರಿ ವರ್ಷಗಳ ಸಂಖ್ಯೆಯೇ ಇತರ ಸಮಸ್ತ ಜನಾಂಗಗಳದಕ್ಕಿಂತ ಹೆಚ್ಚಾಗಿದೆ.

ಆರೋಗ್ಯವನ್ನು ಕಾಪಾಡಿಕೊಳ್ಳುವ ವಿಧಾನದಲ್ಲಿ ಕೆಲವುಕೆಲವರು ಕೆಲವು ಕೆಲವು ಅಭಿಪ್ರಾಯಗಳನ್ನು ಪಡೆದಿರುವರು. ಹೆಚ್ಚಾಗಿ ಬೆವರಿಸುವುದರಿಂದಲೂ ವಾಂತಿಮಾಡಿಸುವುದರಿಂದಲೂ ಜನರು ಆರೋಗ್ಯಶಾಲಿಗಳೂ ದೀರ್ಘಾಯುಷ್ಮಂತರೂ ಆಗುವರೆಂದು ಈಜಿಪ್ಟಿನವರು ನಂಬಿದ್ದರಂತೆ! ದೇಹಪಾಟವವು ದೀರ್ಘಾಯುಸ್ಸನ್ನು ಸೂಚಿಸುವುದು. ನೆಪೋಲಿಯನ್ನನು ಅವಿಚ್ಛಿನ್ನವಾಗಿ ೨೪ ಗಂಟೆಗಳ ಹೊತ್ತು ಪೂರ್ತಿಯಾಗಿ ಕುದುರೆಯ ಸವಾರಿ ಮಾಡಬಲ್ಲವನಾಗಿದ್ದನಂತೆ! ಗ್ಲಾಡ್‌ಸ್ಟನ್ನನು ತನ್ನ ೮೫ ನೆಯ ವಯಸ್ಸಿನಲ್ಲಿ ಮರವನ್ನು ಕಡಿಯುತ್ತಿದ್ದನು. ದೊಡ್ಡ ದೇಹ, ದಪ್ಪ ಮಾಂಸಖಂಡಗಳು ಇವು ಶಕ್ತಿಗೂ ಆರೋಗ್ಯಕ್ಕೂ ಮುಖ್ಯವೆಂದು ತಿಳಿಯಬಾರದು.

ಆರೋಗ್ಯವಿಚಾರದಲ್ಲಿ ನರಮಂಡಲದ ಪಾಟವವು ಅತ್ಯಂತ ಮುಖ್ಯವಾದುದು ಪಾರಿಶುಧ್ಯ, ಇಂದ್ರಿಯನಿಗ್ರಹ, ದೈವಭಕ್ತಿ, ಪಾಪಭೀತಿ, ಉದಾರಹೃದಯ, ಧರ್ಮಬುದ್ಧಿ, ಸದಾಲೋಚನೆ, ತೃಪ್ತಿ. ಇಂತಹ ಸುಗುಣಗಳೂ, ಮಿತಭೋಜನ, ಮಾದಕವಸ್ತುಗಳನ್ನು ಸೇವಿಸದಿರುವಿಕೆ, ಸರ್ವದಾ ಸಂತೋಷದಿಂದಿರುವಿಕೆ, ಇಂತಹ ನಡೆವಳಿಕೆಗಳೂ ಆಯುರ್ವೃದ್ಧಿತರಗಳು. ಅಂತು ಬಟ್ಟನಲ್ಲಿ ನೋಡಿದರೆ ಕಾಯಪುಷ್ಟಿ, ಬುದ್ಧಿಬಲ, ಮತ್ತು ಒಳ್ಳೆಯ ನಡೆವಳಿ ಇವು ಸಕಲ ವಿಷಯಗಳಲ್ಲಿಯೂ ಮನುಷ್ಯರನ್ನು ಕಾಪಾಡುವುವು.

## (6) ದುರಭ್ಯಾಸಗಳು.

ಚಾಳಿಯು ಒಳ್ಳೆಯದಾಗಲಿ ಕೆಟ್ಟದೇ ಆಗಲಿ ಅದು ನಮ್ಮಲ್ಲಿ ಬೇರೂರಿದರೆ ನಮ್ಮ ಜೀವಮಾನದಲ್ಲೆಲ್ಲಾ ಬೆಂಬಿಡದೆ ಇರುವುದು. ಒಳ್ಳೆಯ ಚಾಳಿಯನ್ನು ಸುಶೀಲವೆಂದು ಕರೆಯುವರು. ಅದು ಎಂದೂ ಬಾಡದ ಪುಷ್ಪ ಮಾಲಿಕೆಯಂತಿರುವುದು. ಕೆಟ್ಟ ಚಾಳಿಯು ಘಟಸರ್ಪದಂತೆ ಪರಿಣಮಿಸುವುದು. ನಡತೆಯೆಂಬ ನದಿಗೆ ಚಾಳಿಗಳೇ ಉಪನದಿಗಳು. ಕಾರ್ಯ್ಯಗಳೆಂಬ ಬೀಜಗಳನ್ನು ಬಿತ್ತಿದರೆ ಚಾಳಿಗಳೆಂಬ ಬೆಳೆಯೂ ಚಾಳಿಗಳಿಂದ ನಡತೆಯೂ ಉಂಟಾಗುವುವು. ನಮ್ಮ ಜೀವಮಾನವೆಂಬ ಉತ್ತಮ ಕ್ಷೇತ್ರದಲ್ಲಿ ಒಳ್ಳೆಯ ನಡತೆಯೆಂಬ ಪೈರನ್ನು ಕಷ್ಟಪಟ್ಟು ಬೆಳೆಯಿಸುತ್ತಿರುವಾಗ ದುರಭ್ಯಾಸಗಳೆಂಬ ಕಳೆಗಳು ತಾವಾಗಿಯೇ ಬೆಳೆದು ಉದ್ದಿಷ್ಟವಾದ ಬೆಳಸನ್ನು ಧ್ವಂಸಮಾಡುವುವು. ಇದಕ್ಕೆ ಅವಕಾಶಕೊಡದಂತೆ ಎಚ್ಚರಿಕೆಯಿಂದಿರಬೇಕು.

ಮನುಷ್ಯನ ಒಳ್ಳೆಯ ಅಥವಾ ಕೆಟ್ಟ ಚಾಳಿಗಳೆಲ್ಲಾ ೨೨—೩೪ ವರ್ಷಗಳೊಳಗೇ ಬೇರೂರುವುವೆಂತಲೂ ಅಲ್ಲಿಂದ ಮುಂದಕ್ಕೆ ಪ್ರಾಯಶಃ ಯಾವ ಹೊಸಚಾಳಿಗೂ ಅವಕಾಶವಿರಲಾರದೆಂದೂ ಬಲ್ಲವರು ಹೇಳುವರು. ಚಾಳಿಯು ಕೆಲವು ಕಾಲದನಂತರ ಸ್ವಾಭಾವವಾಗಿಯೇ ಪರಿಣಮಿಸುವುದು. ಒಬ್ಬ ಹುಟ್ಟುಹುಚ್ಚನು ಒಂದು ಪಟ್ಟಣದಲ್ಲಿ ಒಂದು ದೊಡ್ಡ ಗಡಿಯಾರದ ಬಳಿ ವಾಸಮಾಡುತ್ತ ಅದು ಗಂಟೆಹೊಡೆದಾಗಲೆಲ್ಲಾ ಎಣಿಸಿಕೊಳ್ಳುತ್ತಿದ್ದನು. ಬಹುಕಾಲಾನಂತರ ಆ ಗಡಿಯಾರವು ಕೆಟ್ಟುಹೋದಮೇಲೂ ಅವನು ತಪ್ಪದೆ ಪ್ರತಿಯೊಂದು ಗಂಟೆಯಲ್ಲಿಯೂ ಒಂದು ನಿಮಿಷವೂ ಕೂಡ ವ್ಯತ್ಯಾಸವಿಲ್ಲದಂತೆ ಆಯಾಗಂಟೆಗಳನ್ನು ಎಣಿಸುತ್ತಿದ್ದನಂತೆ! ಚಾಳಿಯ ಮಹಿಮೆಯನ್ನು ನೋಡಿದಿರಾ ! ಜಾನ್ಸನ್ ಎಂಬ ಘನಪಂಡಿತನೊಬ್ಬನು ದಾರಿಯಲ್ಲಿ ಹೋಗುವಾಗ ದಾರಿಯಲ್ಲಿ ಸಿಕ್ಕತಕ್ಕ ಕಂಭಗಳನ್ನೆಲ್ಲಾ ಸವರಿಕೊಂಡು ಹೋಗುತ್ತಿದ್ದನಂತೆ. ಅಕಸ್ಮಾತ್ತಾಗಿ ಯಾವುದಾದ

ಕೊಂದುಕಂಬವನ್ನು ಮುಟ್ಟುವುದನ್ನು ಮರೆತಿದ್ದು ಜ್ಞಾಪಕಬರಲು ಪುನಃ ಅದನ್ನು ಮುಟ್ಟದಹೊರತು ಯಾವಕೆಲಸವನ್ನೂ ಮಾಡಲಾರದೆ ಬೇಸರ ಪಡುತ್ತಿದ್ದನಂತೆ!

ಬಬ್ಬರಲ್ಲಿ ಬಂದುಚಾಳಿಯು ಬೇರೂರಿದರೆ ಅದು ವಂಶಪಾರಂಪರ್ಯವಾಗಿ ಅನುಸರಿಸಿಬರವುದೂಉಂಟು. ಕೆಲವರು ವಿನೋದಕ್ಕೆ ಅಥವಾ ಅನುಕರಣಕ್ಕೆ ಎಂದು ಮಾಡುವಚೇಷ್ಟೆಗಳು ಕಾಲಕ್ರಮೇಣ ಚಾಳಿಗಳಾಗುವುದುಂಟು. ಕೆಲವರು ಸದಾಮುಖದಮೇಲೆ ಕೈಯಾಡಿಸುತ್ತಿರುವುದು, ಕಣ್ಣುಮಿಟಕಿಸುವುದು, ಕೈಚಿಟಿಕೆಹಾಕುವುದು, ಇಂಥಾಚಾಳಿಗಳನ್ನು ಪಡೆದಿರುವರು ಅವರು ಹಾಗೆಮಾಡದಿರುವುದಕ್ಕೇ ಆಗುವುದಿಲ್ಲ. ಇಷ್ಟಾದರೂ ತಮ್ಮಚಾಳಿ ಇಂತಹುದೆಂದು ತಮಗೆ ಗೊತ್ತಿರುವುದಿಲ್ಲ.

ಆದಿಯಿಂದಲೂ ಒಳ್ಳೆಯ ಅಭ್ಯಾಸಗಳನ್ನು ಪಡೆದಿರಬೇಕು. ಹೊತ್ತಿಗೆ ಸರಿಯಾಗಿ ಕೆಲಸಮಾಡುವುದು, ನಿಷ್ಕರ್ಷೆ, ಹಿಡಿದಕೆಲಸವನ್ನು ಬಿಡದೆ ಸಾಧಿಸುವುದು; ಇಂತಹುವು ಒಳ್ಳೆಯಚಾಳಿಗಳು. ಯಾವುದೇಆಗಲಿ ಆದಿಯಲ್ಲಿ ಎಷ್ಟುಕಷ್ಟವಾಗಿದ್ದರೂ ಅಭ್ಯಾಸಬಲದಿಂದ ಕಾಲಕ್ರಮದಲ್ಲಿ ಅದೇಚಾಳಿಯಾಗಿ ಅತಿಸುಲಭವಾಗುವುದು, ಹೊಸದಾಗಿ ಕಟುಕತನವನ್ನು ಕೈಗೊಳ್ಳತಕ್ಕವನಿಗೆ ಮೊದಲು ಕನಿಕರವು ತಕ್ಕಮಟ್ಟಿಗಾದರೂ ಇದ್ದೇಇರುವುದು. ಆದರೆ ಕೆಲವುಕಾಲದನಂತರ ಅವನ ಎದೆಯು ಕಲ್ಲಾಗುವುದು. ಟೈಪ್‌ಬಡಿಯತಕ್ಕವರ ಬೆರಳುಗಳ ಕೆಲಸವನ್ನುನೋಡಿದರೆ ಅಭ್ಯಾಸದಮಹಿಮೆಯು ಎಂತಹವರಿಗೂ ಸ್ಪಷ್ಟವಾಗಿ ಗೊತ್ತಾಗದೆಇರಲಾರದು. ಚಾಳಿಯು ಹೀಗೆ ತಾನೇತಾನಾಗಿ ಕೆಲಸಮಾಡುವುದರಿಂದ ಬುದ್ಧಿಯ ಸ್ಥಾನವಾದ ಮೆದುಳಿಗೆ ಆಯಾಸವು ಕಡಿಮೆಯಾಗುವುದು. ಮುದುಕನಾಗಿ ಪೆನ್ಷನ್‌ಪಡೆಯುತ್ತಿದ್ದ ಬಾರ್ಸಿಪಾಯಿಯು ಕೈಯಲ್ಲಿ ತರಕಾರಿಯಬುಟ್ಟಿಯನ್ನು ತೆಗೆದುಕೊಂಡು

ಹೋಗುತ್ತಿದ್ದಾಗ ಎಲ್ಲಿಂದಲೋ ಅಟೆನ್ಷನ್ ಎಂಬಸದ್ದು ಕೇಳಿಸಲು ಕೈಯ್ಯಲ್ಲಿದ್ದುದನ್ನು ಕೆಳಗೆಸೆದು ನೇರವಾಗಿ ನಿಂತುಕೊಂಡನಂತೆ!

## (7) ಮನೋದಾರ್ಢ್ಯ.

ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಮೊದಲಾದ ಇಂದ್ರಿಯಸ್ಥಾನಾವಯವಗಳು ಶರೀರರಕ್ಷಣೆಗೂ ಜ್ಞಾನಾರ್ಜನೆಗೂ ದೇವರಿಂದನಮಗೆ ಅನುಗ್ರಹಿಸಲ್ಪಟ್ಟವೆ. ಆದರೆ ಅಸಂಸ್ಕೃತವಾದಮನಸ್ಸು ಸುಖೇಚ್ಛೆ ಮರುಳಾಗಿ ಇಂದ್ರಿಯಗಳನ್ನು ಸರ್ವದಾ ಒಳ್ಳೆಯದಾರಿಯಲ್ಲಿ ನಡೆಯಿಸುವುದಕ್ಕೆ ಬದಲಾಗಿ ತಪ್ಪುದಾರಿಗೆಳೆದು ಜೀವನಿಗೆ ಪಾಪಸಂಘಟನೆಯನ್ನು ಉಂಟುಮಾಡುವುದು. ಆದುದರಿಂದಲೇ—ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ಎಂಬಂತೆ ಒಳ್ಳೆಯತನ ಕೆಟ್ಟತನ ಎಂಬಸ್ಥಿತಿಗಳಿಗೆ ಮನಸ್ಸೇಕಾರಣವೆಂಬುದು ಪ್ರಾಜ್ಞರಮತವು. ಅಂಥಮನಸ್ಸನ್ನು ನಾವು ಹದ್ದಿನಲ್ಲಿಟ್ಟುಕೊಂಡಿರಬೇಕು. ಮನಸ್ಸು ಚಪಲಪಟ್ಟು ಯಾವಾವುದನ್ನೋ ಬಯಸುತ್ತದೆ. ಅದು ಬಯಸಿದ್ದನ್ನೆಲ್ಲಾ ನಾವು ಪಡೆಯುವದಕ್ಕಾಗುವುದಿಲ್ಲ. ಸ್ವೇಚ್ಛೆಯಾಗಿ ಮನಸ್ಸು ಪ್ರೇರಿಸಿದ ದಾರಿಯಲ್ಲೇ ನಾವು ನಡೆವುದರಿಂದ ಎಷ್ಟೋ ವೇಳೆ ನಮ್ಮ ನಡತೆ ಕೆಟ್ಟುಹೋದೀತು—ಹೇಗೆಂದರೆ ಒಬ್ಬ ಹುಡುಗನು ಮಿಠಾಯಿಯಂಗಡಿಯ ಬಳಿಯಲ್ಲಿನಿಂತು ಆವಾಸನೆಗೆ ಮರುಳಾಗಿ ಹೇಗಾದರೂಮಾಡಿ ಆ ಮಿಠಾಯನ್ನು ತಿನ್ನಬೇಕೆಂದು ಹಠ ಹಿಡಿಯುವನೆಂದು ಭಾವಿಸೋಣ. ಅದನ್ನು ಕೊಂಡುಕೊಳ್ಳುವುದಕ್ಕೆ ಅವನಿಗೆ ಕಾಸುಗತಿಯಿರುವುದಿಲ್ಲವಾದುದರಿಂದ ಅದನ್ನು ಇತರವಿಧಗಳಿಂದಲಾದರೂ ಪಡೆಯಲು ಅಂದರೆ_ತಿರುಪಬೇಡುವುದು, ಸಾಲಕೇಳುವುದು, ಇವೆರಡರಿಂದಲೂ ದೊರೆಯದಿದ್ದರೆ ಕದಿಯ ತೊಡಗುವುದು ಹೀಗೆ ಅವನ ಮನಸ್ಸು ಪ್ರವರ್ತಿಸೀತು. ಇದರಿಂದ ಅವನನಡತೆಯೇ ಕೆಟ್ಟುಹೋಗುವುದು. ಏನಾದರೊಂದು ವ್ಯಾಧಿಯಿಂದ ನರಳುತ್ತ ಔಷಧಿಯನ್ನು ಸೇವಿಸುತ್ತಿರುವಾಗ ನಾಲಗೆಯು ಚಾಪಲ್ಯಕ್ಕೊಳಪಟ್ಟು ಅಪಥ್ಯ

ಕಾರಿಗಳಾದ ವಸ್ತುಗಳನ್ನು ಸೇವಿಸುವುದರಿಂದ ದೇಹಸ್ಥಿತಿಯು ಕೆಟ್ಟು ಹೋಗಿ ಕಡೆಗೆ ಪ್ರಾಣಹಾನಿಯಾಗುವ ಸಂಭವವೂ ಉಂಟು.

ಜೂಜು, ಸಾಲ ಮೊದಲಾದ ಕೆಲವು ಅಂಶಗಳು ಮೊದಲುಮೊದಲು ಪ್ರಿಯವಾಗಿಕಂಡುಬಂದರೂ ಪರಿಣಾಮದಲ್ಲಿ ಅವುಗಳಿಂದ ಎಂಥ ಅನರ್ಥಗಳುಂಟಾಗುವುದೆಂಬುದನ್ನು ಯೋಚಿಸಿ ಅವಕ್ಕೆ ಆಸ್ಪದಕೊಡದಂತೆ ಮನಸ್ಸನ್ನು ಬಿಗಿಹಿಡಿದು ನಡೆಯಬೇಕು. ಮನಸ್ಸು ಕೋಪತಾಪಗಳಿಗೆ ಪ್ರವರ್ತಿಸತೊಡಗಿದಾಗಲೂ ಹೀಗೆಯೇ ಅದನ್ನು ತಡೆಯಬೇಕು. ಈ ರೀತಿಯಾಗಿ ಮನಸ್ಸನ್ನು ದುರ್ಮಾರ್ಗಗಳ ಕಡೆಗೆ ಬಿಡದೆ ತಡೆಯುವುದೇ ಆತ್ಮನಿಗ್ರಹ ಅಥವಾ ಆತ್ಮಸಂಯಮನ ವೆನಿಸುವುದು. ಯಾರು ಹಾಗೆ ತಮ್ಮನ್ನು ತಾವು ಹದ್ದಿನಲ್ಲಿಟ್ಟುಕೊಳ್ಳಬಲ್ಲರೋ ಅಂಥವರು ಯಾವ ಇತರರನ್ನಾದರೂ ವಶದಲ್ಲಿಟ್ಟುಕೊಳ್ಳಬಲ್ಲರು.

ಕೆಲವು ಸಮಯಗಳಲ್ಲಿ ಏನಾದರೂ ಕೆಲಸಮಾಡಬೇಕಾದಾಗ ಅದನ್ನು ಮಾಡೋಣವೇ ಬೇಡವೆ ಎಂಬ ಸಂಶಯವುಂಟಾಗುವುದು. ಅಂಥ ಸಂದರ್ಭಗಳಲ್ಲಿ ಕೆಲವರು ಇತರರು ಹೇಗೆ ಹೇಳದರೆ ಹಾಗೆ ನಡೆಯುತ್ತಾರೆ. ಆದರೆ ನಮಗೆ ಸಲಹೆ ಹೇಳತಕ್ಕವರು ನಮಗಿಂತ ಯೋಗ್ಯರೂ ತಿಳಿದವರೂ ನಮಗೆ ಆಪ್ತರೂ ಆಗಿದ್ದರೆ ಅಂಥವರ ಮಾತನ್ನು ಅವಶ್ಯಕವಾಗಿ ಕೇಳುವುದೇಯುಕ್ತವು. ಆದರೆ ಯಾವಾಗಲೂ ಎಲ್ಲೆಲ್ಲಿಯೂ ಎಲ್ಲರಿಗೂ ಅಂಥ ಹಿತಚಿಂತಕರಾದ ದೊಡ್ಡಮನುಷ್ಯರು ದೊರೆಯುವರೆಂಬ ಭರವಸೆಯು ಕಡಿಮೆ. ಅಂಥವರಲ್ಲದವರ ಮಾತನ್ನು ಕೇಳುವುದರಿಂದ ಅನೇಕವೇಳೆ ನಾವು ತಪ್ಪು ದಾರಿಯನ್ನು ತುಳಿಯಬೇಕಾದೀತು. ಅದುದರಿಂದ ಎಂಥ ಸಂಶಯಬಂದಾಗಲೂ, ಇತರರು ನಮಗೆ ಹೇಳುವುದರಲ್ಲಿರುವ ಗುಣದೋಷಗಳನ್ನು ಗ್ರಹಿಸಿ ಇದನ್ನು ಹೀಗೆ ಮಾಡಬೇಕೆಂದು ನಮ್ಮ ಮನಸ್ಸಿನಲ್ಲಿ ನಿಶ್ಚಯಿಸಿ

ಕೊಂಡು ನಡಿಯುವ ಅಭ್ಯಾಸವನ್ನು ಪಡೆಯಬೇಕು. ಸ್ವಬುದ್ಧಿಯಿಲ್ಲದವರು ನಿಶ್ಚಯಜ್ಞಾನವಿಲ್ಲದೆ ಕುರಿಗಳಂತೆ ಆಗುವರು.

ಆಕಸ್ಮಿಕವಾಗಿ ಯಾವ ಅಪಾಯಗಳು ಸಂಭವಿಸಿದರೂ ಧೈರ್ಯಗೆಡದೆ ಹೀಗೆಯೇ ನಡೆಯಬೇಕೆಂಬ ಮನೋದಾರ್ಢ್ಯವನ್ನು ಪಡೆದವರೇ ನಿಜವಾದ ಧೀರರು. ಈ ವಿಧವಾದ ಮನೋದಾರ್ಢ್ಯವಿಲ್ಲದಿದ್ದರೆ ಎಷ್ಟೋವೇಳೆ ಅನೇಕ ಕಷ್ಟನಷ್ಟಗಳು ಬದಗಿಯಾವು. ನಿಶ್ಚಯಜ್ಞಾನವಿಲ್ಲದೆ ಚಿತ್ತಚಾಂಚಲ್ಯದಿಂದ ನಡೆವುದು ಕಷ್ಟ. ಪ್ರತಿಯೊಂದು ವಿಷಯದಲ್ಲಿಯೂ ಒಂದೊಂದು ನಿಯಮವನ್ನಿಟ್ಟುಕೊಂಡು ಅದನ್ನು ಅನುಸರಿಸಿ ನಡೆಯಬೇಕು. ಮನೋದಾರ್ಢ್ಯದಿಂದ ಮಾಡಿದ ಯಾವ ಕೆಲಸದಲ್ಲಿಯೂ ಅಪಜಯವಾಗುವ ಸಂಭವ ಕಡಿಮೆ. ಚಿತ್ತಚಾಂಚಲ್ಯದಿಂದಲಾದರೋ ಯಾವ ಕೆಲಸವೂ ಸರಿಯಾಗಿ ಆಗುವುದಿಲ್ಲ. ಇತರರಿಗೂ ತೊಂದರೆ ಮತ್ತು ಆತ್ಮಗೌರವಕ್ಕೂ ಹಾನಿ.

ಧರ್ಮಸಂದೇಹಬಂದಾಗಲೂ ಕಕ್ಷಿಪ್ರತಿಕಕ್ಷಿಗಳಿಬ್ಬರೂ ತಮ್ಮತಮ್ಮ ಮೂಗಿಗೆ ನೇರವಾಗಿ ಹೇಳದಾಗಲೂ ನಿಜಸ್ಥಿತಿಗನುಸಾರವಾಗಿ ಮಾಡತಕ್ಕ ತೀರ್ಮಾನವೂ ಜಾಣತನವೂ ಹಿಡಿದ ಕೆಲಸವನ್ನು ಬಿಡದೆ ಸಾಧಿಸುವ ಬಳ್ಳಿಯನಡತೆಯೂ ಮನೋದಾರ್ಢ್ಯವಿಲ್ಲದವರಿಗೆಂದಿಗೆ ಲಭಿಸಿಯಾವು? ಯಾವ ಮಾತಾಡಿದರೆ ಏನು ನಿಷ್ಠುರ ಬರುವುದೋ ಎಂದು ಹೆದರುತ್ತ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಹಾದಪ್ಪನಚಾವಡಿಯಲ್ಲಿ ಹಾದಪ್ಪ. ಅಲ್ಲಪ್ಪನಚಾವಡಿಯಲ್ಲಿ ಅಲ್ಲಪ್ಪ, ಎಂಬಂತೆ ಆಯಾಕಾಲಕ್ಕೆ ತಕ್ಕಂತೆ ನಟಿಸುತ್ತ ಸ್ವಕಾರ್ಯವನ್ನು ಸಾಧಿಸಿಕೊಳ್ಳತಕ್ಕ ಹೇಡಿಗಳು ಚಿತ್ತಸ್ಥೈರ್ಯದಿಂದ ದೃಢಪ್ರತಿಜ್ಞರಾಗಿ ಕೆಲಸಮಾಡತಕ್ಕ ವಿವೇಕಶಾಲಿಗಳಿಗೂ ಬಹಳ ವ್ಯತ್ಯಾಸವುಂಟು. ಈ ವಿವೇಕಶಾಲಿಗಳು ಜನಗಳ ನೈಷ್ಠುರ್ಯಕ್ಕೆ ಹೆದರುವುದಿಲ್ಲ. ನ್ಯಾಯಕ್ಕೂ ದೇವರಿಗೂ ಮಾತ್ರ ಹೆದರುವರು. ದೃಢಪ್ರತಿಜ್ಞೆಯಿಂದ ಎಂಥ ಕೆಲಸವೂ

ಕೈಗೂಡುವುದು. ಎಷ್ಟೋ ಕಷ್ಟ ಸಂಭವಿಸಿದರೂ ಲಕ್ಷ್ಯಮಾಡದೆ ಅಮೆರಿಕವನ್ನು ಕಂಡುಹಿಡಿದ ಕೊಲಂಬಸ್ಸನು ಈ ವಿಷಯದಲ್ಲಿ ಒಳ್ಳೆಯ ದೃಷ್ಟಾಂತವಾಗಿದ್ದಾನೆ. ಆದರೆ ಯಾವುದನ್ನೂ ವಿವೇಕದಿಂದ ಮಾಡಬೇಕು. ಇಲ್ಲವಾದರೆ ಮೂರ್ಖತನವೆನಿಸುವುದು.

## (8) ಆತ್ಮಗೌರವ.

ದೀಪವನ್ನು ನೋಡಿದರೆ ಎಣ್ಣೆಯ ಯೋಗ್ಯತೆಯು ಗೊತ್ತಾಗುವಂತೆ ನಮ್ಮ ಹೊರಗಣ ಸ್ಥಿತಿಯನ್ನು ನೋಡಿದರೆ ನಮ್ಮ ನಿಜವಾದ ಯೋಗ್ಯತೆಯು ಗೊತ್ತಾಗಬಹುದು. ಇತರರು ನಮ್ಮನ್ನು ನೋಡಲಿ ನೋಡದಿರಲಿ ನಡೆಯಬೇಕಾದ ರೀತಿಯಲ್ಲಿ ನಾವು ನಡೆಯುತ್ತಿದ್ದರೆ ಘನತೆಯುಂಟಾಗುವುದು. ಪ್ರಾಮಾಣಿಕತೆಯೂ ಸತ್ಯಸಂಧತೆಯೂ ಘನತೆಗೆ ಸಹಕಾರಿಗಳು. ಘನತೆಯುಳ್ಳವರಿಗೆ ಎಲ್ಲೆಲ್ಲೂ ಯಾವಾಗಲೂ ಮರ್ಯಾದೆಯೂ ಕೀರ್ತಿಯೂ ಹೆಚ್ಚು. ತುಂಬ ಘನತೆಯುಳ್ಳವರನ್ನು ಪ್ರಜೆಗಳೂ ಮಾತ್ರವಲ್ಲದೆ ಸರ್ಕಾರದವರೂ ಗೌರವಿಸಿ ಬಿರುದುಗಳನ್ನು ಕೊಡುವುದುಂಟು. ಆದರೆ ಪ್ರತಿಯೊಬ್ಬರಿಗೂ ಅಂಥಗೌರವವು ದೊರೆಯಲಾರದೆಂದು ಯಾರೂ ನಿರಾಶೆಯಿಂದಿರಕೂಡದು.

ನ್ಯಾಯವಾದ ಮಾರ್ಗದಲ್ಲಿ ನಡೆಯುತ 'ಹಲಕ' ಎನಿಸಿಕೊಳ್ಳದೆ ಮರ್ಯಾದೆಯಿಂದ ಬಾಳುವುದೂ ಘನತೆಯೇ. ಬಡವರು ಭಾಗ್ಯವಂತರು, ಮೇಲ್ಜಾತಿಯವರು ಕೀಳ್ಜಾತಿಯವರು ತರುಣರು ವೃದ್ಧರು ಯಾರೇ ಆಗಲಿ ಈ ಘನತೆಯನ್ನು ಪಡೆದು ಕೊಳ್ಳ ಬಹುದು. ನಾವು ನಮ್ಮ ಗೌರವವನ್ನು ಉಳಿಸಿಕೊಂಡಿದ್ದರೆ ಇತರರೂ ನಮ್ಮನ್ನು ಗೌರವಿಸುವರು. ಗೌರವಕ್ಕೆ ಅರ್ಹರಾದವರಿಗೆಲ್ಲಾ ನಾವು ಗೌರವವನ್ನು ಕೊಟ್ಟೇತೀರಬೇಕು. ಇದೂ ನಮ್ಮ ಘನತೆಗೆ ಹೆಗ್ಗುರುತು. ಗೌರವವು ಅಮೂಲ್ಯವಾದ ಆಭರಣಕ್ಕಿಂತ ಮಿಗಿಲಾದುದೆಂದು ತಿಳಿಯಬೇಕು. ಮುಖ್ಯವಾಗಿ ನಮ್ಮ ನಡತೆಯು ನಮ್ಮ

ಯೋಗ್ಯತೆಗೆ ತಕ್ಕುದಾಗಿರಬೇಕು. ಇಲ್ಲದಿದ್ದರೆ ಆತ್ಮಗೌರವಕ್ಕೆ ಹಾನಿ ಬರುವುದು. ಘನತೆಯೆಂಬ ವೃಕ್ಷಕ್ಕೆ ನಡತೆಯೇ ತಾಯಿಬೇರು. ತುಂಬ ಹೆಚ್ಚು ಬೆಲೆ ಬಾಳುವ ಅಥವಾ ಹೆಚ್ಚುಬಣ್ಣವುಳ್ಳ ಉಡುಪುಗಳನ್ನು ಧರಿಸಿ ಎಲ್ಲರೂ ತಮ್ಮನ್ನೇ ನೋಡುವರೆಂದು ಭ್ರಮಿಸುವುದು ನಿಷಿದ್ಧ. ಮತ್ತು ಡಂಭ. ನಿಜಸ್ಥಿತಿಯ ಮುಂದೆ ಡಂಭವು ಎಂದಿಗೂ ಜಯಿಸಲಾರದು. ಹಗಲುಚಂದ್ರನಿಗೆ ಪ್ರಕಾಶವಿಲ್ಲದಿರುವುದೂ ಸೂರ್ಯನಿಗೆ ಪ್ರಕಾಶವಿರುವುದೂ ಸಾಕಾದ ದೃಷ್ಟಾಂತವಾಗಿದೆ. ಆದರೆ ನಿಜಸ್ಥಿತಿಯು ಮರೆಯಾದಾಗ ಸುಳ್ಳೇ ಮೋಹಕರವಾಗಿ ತೋರುವುದು. ಆದುದರಿಂದಲೇ ಸ್ವಯಂಪ್ರಕಾಶಮಾನನಾದ ಸೂರ್ಯನು ಮರೆಯಾದನಂತರ ಚಂದ್ರನಿಗೇ ಪ್ರಾಶಸ್ತ್ಯ. ನಾವು ಧರಿಸುವ ಬಟ್ಟೆಗಳು ಎಷ್ಟೇ ಕಡಿಮೆಯ ಬೆಲೆಯುಳ್ಳವಾದರೂ ಚಿಂತೆಯಿಲ್ಲ. ಆದರೆ ಕೊಳೆಯಿಲ್ಲದೆ ಶುಭ್ರವಾಗಿರಬೇಕಾದುದು ಮುಖ್ಯ.

ನಮ್ಮ ಚಾಳಿಗಳೂ ಕೆಲಸಗಳೂ ಕೊಳಕಿಲ್ಲದೆಯೂ ಒಪ್ಪವಾಗಿಯೂ ಇರಬೇಕು. ಬೀದಿಯಲ್ಲಿ ಸಿಳ್ಳುಹಾಕುವುದು, ಸ್ವೇಚ್ಛೆಯಾಗಿ ಬಲು ಗಟ್ಟಿಯಾಗಿ ನಗುವುದು, ಜೂಜಾಡುವುದು, ಕುಸ್ತಿ ಇಂಥವುಗಳೂ ಘನತೆಯನ್ನು ಕೆಡಿಸುವುವು. ಆಹಾರಪಾನ ಮೊದಲಾದುವುಗಳಲ್ಲಿ ಮಿತಿಮೀರಿ ಹೊಟ್ಟೆಬಾಕರಾಗಿದ್ದರೆ ಇತರರ ಹೇಳನೆಗೆ ಗುರಿಯಾಗಬೇಕಾಗುವುದಲ್ಲದೆ ದೇಹಾರೋಗ್ಯವೂ ಕೆಡುವುದು. ಗೌರವಶಾಲಿಗಳಾಗಿರಬೇಕಾದವರಲ್ಲಿ ಯಾವ ಕೆಟ್ಟಚಾಳಿಗಳೂ ಇರಕೂಡದು. ನಾಲಗೆಯನ್ನು ಹದ್ದಿನಲ್ಲಿಟ್ಟುಕೊಂಡಿರಬೇಕು. ಅಸತ್ಯ, ಪರನಿಂದೆ, ಕರೆಯದ ಕಡೆಗೆ ಹೋಗುವುದು ಪೆಚ್ಚುಮಾತು, ಪುಂಡುಮಾತು, ಅಥವಾ ಗ್ರಾಮ್ಯವಾದಮಾತು ಇವುಗಳಿಂದ ಇತರರೊಡನೆ ಸಲ್ಲಾಪಮಾಡುವುದು. ಕೆಟ್ಟಮಾತುಗಳಿಂದ ತನ್ನನ್ನೇ ಬೈದುಕೊಳ್ಳುವುದು, ಹರ್ಷವಿಷಾದಗಳಲ್ಲಿ ಮಿತಿಮೀರಿದ ಉದ್ರೇಕ ಇವುಗಳೆಲ್ಲಾ ಮನುಷ್ಯನ ನಡತೆಯನ್ನು 'ಕೆಡಿಸುವುವು. ಸ್ತ್ರೀಪುರುಷರು ಪರಸ್ಪರವಾಗಿ

ಎದುರಿಗೆನಿಂತು ಜಗಳವಾಡುವುದರಿಂದ ಅವರಿಬ್ಬರ ಗೌರವಕ್ಕೂ ಹಾನಿ. ತಮ್ಮ ಯೋಗ್ಯತೆಗೂ ಘನತೆಗೂ ತಕ್ಕಂತೆ ನಡೆದುಕೊಳ್ಳದೆ ಕಾಸಿನಾಸೆಗಾಗಿ ಸರ್ವದಾ ದೈನ್ಯದಾಸತ್ವಗಳಿಂದ ನಡೆಯುವುದು, ಇವೆಲ್ಲಾ ಬಹಳ ಹೀನಾಯ.

ಸರ್ಕಾರದವರಿಂದ ನಮಗೆ ಏನಾಗಬೇಕಾದರೂ ಆಯಾನಿಯಮಗಳಿಗೆ ತಪ್ಪದಂತೆ ನಡೆಯುತ್ತದೆ. ಕೆಲವು ಮುಖ್ಯ ನಿಯಮಗಳನ್ನಂತು ಯಾವ ದೊಡ್ಡ ಅಧಿಕಾರಿಗಳೂ ಮೀರಿನಡೆವುದಕ್ಕಾಗುವುದಿಲ್ಲ. ಹೀಗಿದ್ದರೂ ತಿಳವಳಿಕೆಯಿಲ್ಲದ ಅನೇಕಜನ ಕಕ್ಷಿಗಾರರು ತಮ್ಮ ಅರ್ಜಿಗಳಲ್ಲಿ—ಮಹಾಸ್ವಾಮಿ, ನಾನುಬಡವ, ಮಕ್ಕಳೊಂದಿಗ, ತಮ್ಮಿಂದಲೇ ಉದ್ಧಾರವಾಗಬೇಕು. ಇದರಿಂದ ತಮಗೆ ಪುಣ್ಯಬರುತ್ತದೆ—ಎಂಬಂಥ ಮಾತುಗಳನ್ನು ಬರೆದು ವೃಥಾ ತಮ್ಮ ಗೌರವವನ್ನು ತಾವೇ ಹಾಳುಮಾಡಿಕೊಳ್ಳುವರು. ಇದರಿಂದ ತಮ್ಮ ಅಲ್ಪಸ್ವಭಾವವು ತೋರ್ಪಡುವುದುಹೊರತು ಮತ್ತೇನೂ ಇಲ್ಲ.

ನಾವು ಸದಾ ಯೋಗ್ಯರ ಸಹವಾಸದಲ್ಲೇ ಇರಬೇಕು. ಅಲ್ಪರ ಸಂಗವನ್ನು ಮಾಡಬಾರದು. ನಾವು ಎಂಥವರಜತೆಯಲ್ಲಿರುವೆವೆಂಬುದನ್ನು ನೋಡುವುದರಿಂದಲೇ ನಮ್ಮನಡತೆ ಯಿಂಥಾದ್ದು ಎಂದು ಜನಗಳು ಊಹಿಸುತ್ತಾರೆ. ದುರ್ಬೋಧನೆಯಿಂದ ಯಾರನ್ನೂ ತಪ್ಪುದಾರಿಗೆಳೆಯಬಾರದು. ಕೈಲಾಗದವರಿಗೆ ಸಹಾಯವನ್ನು ಮಾಡಬಹುದಾದ ಸಂದರ್ಭಗಳು ದೊರೆತಾಗಲೂ ಮಾಡದೆ ಬಿಟ್ಟುಬಿಡಬಾರದು. ನ್ಯಾಯಕ್ಕೆ ಕಟ್ಟುಬಿದ್ದು ನಡೆಯಬೇಕು. ನಾಗರಿಕರಾಗಿರಬೇಕು. ನಾವು ಮಾಡಬೇಕಾದ್ದನ್ನು ಧರ್ಮವಾಗಿ ಪ್ರಾಮಾಣಿಕತೆಯಿಂದ ಮಾಡಬೇಕು. ನಾವು ಇತರರಿಗೆ ಮೇಲ್ಪಂಕ್ತಿಯಾಗುವವರೆಗೂ ಒಳ್ಳೆಯ ನಡತೆಯಲ್ಲಿರಬೇಕು. ಲಂಚವನ್ನು ತೆಗೆದುಕೊಳ್ಳುವುದು ಅಥವಾ ಕೊಡುವುದು ಹೇಡಿತನದಿಂದ ನಡೆಯಿಸುವ ಹೀನಕೃತ್ಯ.

ನ್ಯಾಯವಾಗಿ ನಡೆಯುವುದಕ್ಕೆ ನಾಚಿಕೊಳ್ಳಬಾರದು. ಒಂದುವೇಳೆ ನಾವು ಅಕಸ್ಮಾತ್ತಾಗಿ ತಪ್ಪುಮಾಡಿದರೂ ಅದನ್ನು ಮರೆಮಾಚದೆ ಒಪ್ಪಿಕೊಂಡು ಮುಂದಕ್ಕಾದರೂ ಹಾಗಾಗದಂತೆ ಎಚ್ಚರಿಕೆಯಿಂದಿರಬೇಕು.

(9) ಉತ್ಸಾಹ.

ಉತ್ಸಾಹವೊಂದಿದ್ದರೆ ಎಂಥ ಬಡತನದಲ್ಲಿಯೂ ತೃಪ್ತಿ. ಕಷ್ಟದ ಲ್ಲಿಯೂ ಸಂತೋಷವುಂಟಾಗುವುದು. ಮನುಷ್ಯನಿಗೆ ಚಿಂತೆಯೇ ಮುಪ್ಪು ಸಂತೋಷವೇ ಪ್ರಾಯ ಎಂದು ತಿಳಿದವರು ಹೇಳುವರು ಉತ್ಸಾಹಶೀಲರು ಸರ್ವದಾ ಉಲ್ಲಾಸದಿಂದ ಇರುತ್ತಾರೆ. ಸಂತೋಷವೂ ಉಲ್ಲಾಸವೂ ಪರ್ಯಾಯಪದಗಳು ಸಂತೋಷಶೀಲರು ದೀರ್ಘಾಯುಷ್ಮಂತರಾಗಿರುವರು. ಸಂತೋಷದಿಂದ ಒಂದುಸಲ ನಕ್ಕ ನಗೆಯು ಹತ್ತುಸೇರು ಅಮೃತರಸವನ್ನು ಕುಡಿದಷ್ಟು ಬಲಕಾರಿಯೆಂದು ಪಂಡಿತರು ಅಭಿಪ್ರಾಯಪಡುವರು. ಯಾರು ಸದಾ ಉತ್ಸಾಹದಿಂದ ಇರುತ್ತಾರೋ ಅವರು ಮುಂದಕ್ಕೆ ಬರುತ್ತಾರೆ.

ಜುಗುಪ್ಸೆಪಡುತ್ತ ಅರ್ಧಮನಸ್ಸಿನಿಂದ ಗೋಳಾಡುತ್ತ ಮಾಡಿದ ಕೆಲಸವು ಕೆಟ್ಟುಹೋಗುವುದೇ ನಿಜ. ಉತ್ಸಾಹಶಾಲಿಯಾದವನು ಕೆಲಸಕ್ಕೆ ಪ್ರಾರಂಭಿಸುವುದರಲ್ಲೇ ಆ ಕೆಲಸವು ಚೆನ್ನಾಗಿ ನೆರವೇರುವುದೆಂಬ ಶುಭ ಸೂಚನೆಯು ತೋರುವುದು. ಉತ್ಸಾಹವಿಲ್ಲದವನಾದರೋ ತಾನು ಮಾಡುವ ಕೆಲಸವು ಆಗುವುದೋ ಇಲ್ಲವೋ ಎಂದು ಸಂದೇಹಿಸುತ್ತ ಮುಂದೆ ಬರುವ ಕಷ್ಟಗಳನ್ನು ಕುರಿತು ಯೋಚಿಸುತ್ತ ಹೆದರಿ ಕೆಲಸಕ್ಕೆ ಕೈ ಹಾಕದೆ ಇರುವನು. ಹೀಗೆ ಹಿಂದೆಗೆವವನು ಒಂದುವೇಳೆ ನಿರ್ಬಂಧದಿಂದ ಅದನ್ನು ಮಾಡತೊಡಗಿದರೂ ಅದೇನೋಚೆನ್ನಾಗಿ ನಡೆವುದಿಲ್ಲ. ಹೇಗೆಂದರೆ ಯೋಧನು ಎಷ್ಟೇ ಬಲಶಾಲಿಯಾಗಿದ್ದರೂ ಯುದ್ಧಕಾಲದಲ್ಲಿ ಉತ್ಸಾಹ ವನ್ನು ಪಡೆಯದಿದ್ದರೆ ಅವನು ಸೋತು ಹೋಗುವುದೇ ಖಂಡಿತ. ಅವನಲ್ಲಿ ಎಷ್ಟು ಶಕ್ತಿಯಿದ್ದರೂ ವ್ಯರ್ಥವೇ, ಹೀಗೆಯೇ ಒಬ್ಬ ಸಂಗೀತಗಾರನು

ಎಷ್ಟೇ ಬುದ್ಧಿವಂತನಾಗಿ ಒಳ್ಳೆಯ ಶಾರೀರವನ್ನು ಪಡೆದಿದ್ದರೂ ಸಮಯದಲ್ಲಿ ಉತ್ಸಾಹಗೊಳ್ಳದಿದ್ದರೆ ಆತನ ಸಂಗೀತವು ಕಳೆಗಟ್ಟುವುದಿಲ್ಲ. ಉಲ್ಲಾಸವೂ ಉತ್ಸಾಹವೂ ತಾನಾಗಿ ಹುಟ್ಟ ಬೇಕಲ್ಲದೆ ನಿರ್ಬಂಧದಿಂದ ಪಡೆಯತಕ್ಕವಲ್ಲ. ಒಂದಾನೊಂದು ಕಾಲದಲ್ಲಿ ಹೊಟ್ಟೆಯಪಾಡಿಗಾಗಿ ಕಾಡಿನಲ್ಲಿ ಹಾರಾಡುತ್ತಲೂ ಓಡಾಡುತ್ತಲೂ ನಡು ನಡುವೆ ಉಲ್ಲಾಸದಿಂದ ಮಧುರವಾಗಿ ಗಾನಮಾಡುತ್ತಲೂ ಇದ್ದ ಒಂದು ಹಕ್ಕಿಯನ್ನು ಒಬ್ಬ ಮನುಷ್ಯನು ತಂದು ಪಂಜರದಲ್ಲಿ ಕೂಡಿ ಬೇಕಾದಷ್ಟು ತಿಂಡಿಯನ್ನು ಮುಂದಿಟ್ಟು 'ಹಾಡು ಹಾಡು' ಎಂದು ಹೇಳುತ್ತ ಎಷ್ಟು ನಿರ್ಬಂಧಪಡಿಸಿದರೂ ಅದು ತನ್ನ ಸ್ವಾತಂತ್ರ್ಯಕ್ಕೆ ಭಂಗಬಂದುದಕ್ಕಾಗಿ ಕೊರಗಿ ಚೀರುತ್ತ ಆಹಾರವನ್ನು ಕೂಡ ತೆಗೆದುಕೊಳ್ಳದೆ ಸತ್ತುಹೋಯಿತೇ ಹೊರತು ಉಲ್ಲಾಸದಿಂದ ಒಂದು ಸಲವೂ ಹಾಡಲಿಲ್ಲ.

ಉತ್ಸಾಹವೊಂದಿದ್ದರೆ ಯೋಗ್ಯತೆಯಲ್ಲಿ ಸ್ವಲ್ಪಮಟ್ಟಿಗೆ ನ್ಯೂನತೆಯಿದ್ದರೂ ಸರಿಮಾಡಿಕೊಳ್ಳಬಹುದು. ಉತ್ಸಾಹವೆಂದರೆ ಯಾವುದಾದರೊಂದು ವಿಷಯವನ್ನು ಕುರಿತು ಸುಮ್ಮನೆ ಆಲೋಚಿಸುತ್ತ ಹೀಗೆಹೀಗೆ ಮಾಡಿದರೆ ಹೀಗೆ ಹೀಗೆ ಆಗುವುದೆಂದು ಆನಂದಪಟ್ಟುಕೊಳ್ಳುತ್ತ ಕೆಲಸಕ್ಕೆ ಕೈಹಾಕದೆ ಪುಡಿಹಿಟ್ಟನ್ನು ಕುರಿತು ಯೋಚಿಸುತ್ತಿದ್ದ ಬ್ರಾಹ್ಮಣನಂತೆ ಸೋಮಾರಿಯಾಗಿ ಕುಳಿತಿರುವುದಲ್ಲ. ಕಷ್ಟಪಟ್ಟು ಕೆಲಸಮಾಡಿದರೇನೇ ಉತ್ಸಾಹಫಲವು ತೋರುವುದು. ಆದುದರಿಂದ ಆಲೋಚನೆಯನ್ನೂ ಅದಕ್ಕತಕ್ಕಂತೆ ಕೆಲಸವನ್ನೂ ಉತ್ಸಾಹದಿಂದ ಮಾಡಬೇಕು.

ನಮ್ಮ ಜೀವಮಾನವನ್ನು ಬರೀ ವರ್ಷಗಳಿಂದ ಎಣಿಸಕೂಡದೆಂದೂ ನಾವು ಉತ್ಸಾಹದಿಂದ ಎಷ್ಟು ಕೆಲಸಗಳನ್ನು ಹೇಗೆಮಾಡಿದೇವೆ, ಎಂಬುದರ ಮೇಲೆ ಪರಿಗಣಿಸಬೇಕೆಂದೂ ಒಬ್ಬ ವಿದ್ವಾಂಸನು ಹೇಳಿರುವನು. ಉತ್ಸಾಹವನ್ನು ಹುಮ್ಮಸ್ಸು ಎಂದೂ ಕರೆಯುವುದುಂಟು. ದೊಡ್ಡವರ ಜ್ಞಾನ

ಯಿಂದಲೂ ಇತರರ ಪ್ರೋತ್ಸಾಹದಿಂದಲೂ ಕೆಲಸಮಾಡುವುದಕ್ಕೆ ಉಲ್ಲಾಸವು ಹೆಚ್ಚುತ್ತದೆ. ಮೂರುನಾಲ್ಕುದಿನಗಳು ನಡೆಯುತಕ್ಕ ಒಂದಾನೊಂದು ಪರೀಕ್ಷೆಯಲ್ಲಿ ಒಬ್ಬ ವಿದ್ಯಾರ್ಥಿಯು ಮೊದಲನೆಯ ದಿನ ತಾನು ಬರೆದ ಉತ್ತರಗಳಲ್ಲಿ ಕೆಲವು ತಪ್ಪೆಂದೂ ಆದುದರಿಂದ ಆ ಭಾಗದಲ್ಲಿ ತೇರ್ಗಡೆಯಾಗುವುದಕ್ಕೆ ಬರಬೇಕಾದುದಕ್ಕಿಂತ ಕಡಿಮೆ ಅಂಕಗಳು ಬರಬಹುದಾಗಿಯೂ ಯೋಚಿಸಿ ಹೆದರಿಕೊಂಡು ಇನ್ನು ಮುಂದಿನ ದಿನಗಳಲ್ಲಿ ನಡೆಯುತಕ್ಕ ಪರೀಕ್ಷೆಗಳಿಗೆ ಸಂಬಂಧಪಟ್ಟ ಪಾಠಗಳನ್ನು ಓದಲಿಕ್ಕೂ ಪುನಃ ಪರೀಕ್ಷಾಮಂದಿರವನ್ನು ಪ್ರವೇಶಿಸಲಿಕ್ಕೂ ಕೂಡ ಮನಸ್ಸಿಲ್ಲದೆ ಹತಾಶನಾಗಿದ್ದನು. ಆ ವೇಳೆಗೆ ಮಾರ್ಗವಶಾತ್ ಅವನ ಉಪಾಧ್ಯಾಯರು ಅಲ್ಲಿಗೆ ಬಂದು ಅದನ್ನೆಲ್ಲಾ ತಿಳಿದು ಆ ವಿದ್ಯಾರ್ಥಿಗೆ ಧೈರ್ಯಹೇಳಿ ಇನ್ನು ಮುಂದಿನ ದಿನಗಳಲ್ಲಿಯೂ ಚೆನ್ನಾಗಿ ಉತ್ತರ ಬರೆದರೆ ಖಂಡಿತವಾಗಿಯೂ ತೇರ್ಗಡೆಯಾಗುವನೆಂದು ಭರವಸೆಹೇಳಲು ಆ ವಿದ್ಯಾರ್ಥಿಯು ಉತ್ಸಾಹಗೊಂಡು ಮುಂದಕ್ಕೆ ಸರಿಯಾಗಿ ವ್ಯಾಸಂಗಮಾಡಿ ತೃಪ್ತಿಕರವಾಗಿ ಉತ್ತರ ಬರೆದು ಕಡೆಗೆ ಪರೀಕ್ಷೆಯಲ್ಲಿ ಉತ್ತೀರ್ಣನಾಗಿಯೇ ಆದನು.

ಫುಟ್‌ಬಾಲ್ ಕ್ರಿಕೆಟ್ ಮೊದಲಾದ ಆಟಗಳನ್ನು ಆಡುತ್ತಿರುವಾಗಲೂ ಕುಸ್ತಿಗಳಲ್ಲಿಯೂ ಜನಗಳು ಅವರವರ ಪಕ್ಷದವರಿಗೆ ಉತ್ತೇಜಕವಾಗುವಂತೆ 'ಸೈ ಶಾಬಾಸ್' ಬೇಷ್ ಭಲಾಅಪ್ಪ ಎಂಬಂಥ ಮಾತುಗಳಿಂದಲೂ ಜಯಘೋಷಗಳಿಂದಲೂ ಹುರಿದುಂಬಿಸುವುದರಿಂದ ಆಟಗಾರರು ತಕ್ಕಷ್ಟು ಉತ್ಸಾಹಗೊಂಡು ಹೋರಾಡಿ ತಾವು ಗೆಲ್ಲುವುದರಲ್ಲಿ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸುವರು. ಆದುದರಿಂದ ಪ್ರೋತ್ಸಾಹವು ಉಲ್ಲಾಸವನ್ನೂ ತನ್ಮೂಲಕವಾಗಿ ಶಕ್ತಿಯನ್ನೂ ಹೆಚ್ಚಿಸುವುದೆಂದಾಯಿತು.

ಉತ್ಸಾಹವು ಈ ಮೇಲೆಹೇಳಿದ ಮಾರ್ಗಗಳಲ್ಲಿ ಹುಟ್ಟಿದರೆ ಮಾತ್ರ ಉತ್ತಮವೇ ಹೊರತು ಮಾದಕವಸ್ತುಗಳ ಸೇವನೆಯಿಂದಲಾದರೆ ಅನರ್ಥ

ಕಾರಿಯೂ ಅವಿವೇಕಿಗಳಾದ ಕೆಲವರು ಮದ್ಯ, ಬಂಗಿ, ಅಫೀಮು, ನಶ್ಯ, ಕಾಫಿ, ಟೀ ಮೊದಲಾದುವನ್ನು ಉಪಯೋಗಿಸಿಕೊಳ್ಳುವುದುಂಟು. ಇವುಗಳಿಂದ ಸದ್ಯಕ್ಕೆ ತಕ್ಕಮಟ್ಟಿಗೆ ಉತ್ಸಾಹವುಂಟಾಗಬಹುದಾದರೂ ನರಸಂಡಲದ ಮೇಲೆ ನಡೆಯುವ ಇವುಗಳ ಕಾರ್ಯದಿಂದ ಉಂಟಾಗುವ ಪರಿಣಾಮವು ಬಹಳ ಭಯಂಕರವಾದುದು. ಆದುದರಿಂದ ಈ ವಿಧವಾದ ಹೊರಗಣ ಸನ್ನಿವೇಶಗಳಿಂದ ಉತ್ಸಾಹವನ್ನು ಕಲ್ಪಿಸಿಕೊಳ್ಳುವುದಕ್ಕಿಂತಲೂ ಸ್ವಾಭಾವಿಕವಾಗಿ ಮನಸ್ಸನ್ನೇ ಸದಾ ಉತ್ಸಾಹದಲ್ಲಿಟ್ಟುಕೊಂಡು ಸಂತೋಷಶೀಲರಾಗಿ ಬಾಳತಕ್ಕದು ಶ್ರೇಯಸ್ಕರ.

## (10) ವಿಧೇಯತೆ.

ದೊಡ್ಡವರು ಹೇಳಿದಂತೆ ನಡೆಯುವುದೇ ವಿಧೇಯತೆ. ಇದಕ್ಕೆ ಅವರ ವಿಷಯವಾದ ಭಕ್ತಿ ಮತ್ತು ಗೌರವಜ್ಞಾನವು ಕಾರಣಗಳು. ಯಾರವಿಷಯದಲ್ಲಿ ನಾವು ಇವನ್ನು ಪಡೆದಿರುವುದಿಲ್ಲವೋ ಅಂಥವರಲ್ಲಿ ನಾವು ವಿಧೇಯರಾಗಿರುವುದು ಕಡಿಮೆ. ನಮಗಿಂತ ಮೇಲ್ಪಟ್ಟವರಿಗೆ ತಗ್ಗಿನಡೆವುದು ಎಷ್ಟೋ ದೊಡ್ಡಪುಣ್ಯವನ್ನು ಸಂಪಾದಿಸಿಕೊಂಡಂತೆ.

ನಮ್ಮನ್ನು ಸಾಕಿ ಸಲಹಿದ ತಾಯ್ತಂದೆಗಳು, ಸಂಬಳವನ್ನು ಕೊಟ್ಟು ಕಾಪಾಡುವ ದಣಿಗಳು ಜ್ಞಾನಗ್ರಾಸವನ್ನು ಕೊಟ್ಟು ಬುದ್ಧಿಯನ್ನು ಬೆಳೆಯಿಸಿದ ಉಪಾಧ್ಯಾಯರು, ನಮಗೆ ಹಿತವನ್ನು ಬಯಸುವ ಇತರಾವರ ದೊಡ್ಡವರು ಇಂಥವರಲ್ಲಿ ವಿಧೇಯರಾಗಿ ನಡೆವುದು ಮೇಲು. ತಾಯ್ತಂದೆಗಳು ಎಷ್ಟೋ ಕಷ್ಟಪಟ್ಟು ಸಾಕಿ ನಮ್ಮನ್ನು ಮುಂದಕ್ಕೆ ತಂದಿದ್ದಾರೆ. ಯಾವವಿಧದಲ್ಲೂ ನಾವು ಅವರ ಋಣವನ್ನು ತೀರಿಸುವುದಕ್ಕೆ ಆಗುವುದಿಲ್ಲ. ಕಡೆಗೆ ಅವರು ಹೇಳಿದಂತೆ ಕೇಳಿಕೊಂಡಿರುವುದರಿಂದಲಾದರೂ ಅವರ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿರುವುದು ಮೇಲಲ್ಲವೆ? ಇದು ನಮ್ಮಿಂದ ಆಗುವ ಅತ್ಯಲ್ಪವಾದ ಕೆಲಸ. ಆದರೂ ಇದರಿಂದ ಅವರಿಗೆ ಆಗುವ

ಆನಂದವೇನೋ ಅಪಾರವಾದುದು. ತಾಯ್ತಂದೆಗಳು ಯಾವಾಗಲೂ ನಮಗೆ ಒಳ್ಳೆಯದಾಗುವುದನ್ನೇ ಬಯಸುತ್ತಾರೆ. ಅವರಿಗಿಂತ ನಮಗೆ ಇನ್ನು ಯಾರೂ ಹಿತಚಿಂತಕರಿಲ್ಲ. ಅವರ ಮಾತನ್ನು ಕೇಳುವುದರಿಂದ ನಮಗೆ ಶ್ರೇಯಸ್ಸುಂಟಾಗುವುದು. ಹೀಗೆ ನಮ್ಮ ಹಿತಕ್ಕೋಸ್ಕರ ಅವರ ಮಾತಿನಂತೆ ನಡೆದರೆ ನಮಗೆ ಪ್ರಯೋಜನವೂ ಅವರಿಗೆ ಸಂತೋಷವೂ ಆಗುವುದರಮೂಲಕ ಉಭಯರಿಗೂ ಅನುಕೂಲವುಂಟು. ಹುಟ್ಟುತ್ತಲೆ ತಾಯ್ತಂದೆಗಳನ್ನು ಕಳೆದುಕೊಂಡು ಅನಾಥರಾಗಿರುವವರ ಪಾಡನ್ನು ನೋಡುವುದರಿಂದ ಅವರಿಗಿಂತ ನಾವು ಇಷ್ಟು ಸುಖವಾಗಿರುವುದಕ್ಕೆ ನಮ್ಮ ತಾಯ್ತಂದೆಗಳೇ ಕಾರಣರೆಂಬುದು ಸ್ಪಷ್ಟವಾಗಿ ತೋರದೆ ಇರದು. ನಾವು ಅವರಿಗೆ ಅವಿಧೇಯರಾಗಿ ನಡೆದರೆ ಚಳಿಯಿಂದ ನಡುಗಿ ಸಾಯುತ್ತಿದ್ದಾಗ ತನ್ನನ್ನು ಬೆಂಕಿಯಬಳಿಗೆ ತಂದುಬಿಟ್ಟು ಕಾಪಾಡಿದಂಥ ಮನುಷ್ಯನನ್ನು ಕುಟುಕಿದ ಚೇಳನಂತೆ ಕೃತಘ್ನರಾಗುವೆವು ನಿರ್ಬಂಧದಿಂದ ಶಠನೆಯಿಂದ ಅಥವಾ ಗೊಣಗಿಕೊಂಡು ಪೇಚಾಡುತ್ತ ವಿಧೇಯತೆಯನ್ನು ನಟಿಸುವುದಕ್ಕಿಂತ ಸಂತೋಷವಾಗಿಯೂ ಮನಃಪೂರ್ವಕವಾಗಿಯೂ ವಿಧೇಯರಾಗಿರುವುದು ಉತ್ತಮ.

ನಮಗೆ ಅನ್ನ ಬಟ್ಟೆ ಅಥವಾ ಸಂಬಳವನ್ನು ಕೊಟ್ಟು ಕಾಪಾಡುವ ದಣಿಗಳಲ್ಲೂ ವಿಧೇಯರಾಗಿರಬೇಕು. ನಮಗೇನಾದರೂ ಆಪತ್ಕಾಲವೊದಗಿದರೆ ಅವರು ಮರುಗುವುದು ಮಾತ್ರವಲ್ಲದೆ ಎಷ್ಟೋ ಸಹಾಯವನ್ನು ಮಾಡುವರು. ಮತ್ತು ಒಳ್ಳೆಯ ಸೇವಕರನ್ನು ದಣಿಗಳು ತಮ್ಮ ಮನೆಯವರೆಂದೇ ಭಾವಿಸಿ ಬಹಳ ವಾತ್ಸಲ್ಯದಿಂದ ಕಾಪಾಡುವರು. ನಮಗೇನಾದರೂ ತೊಂದರೆಗಳು ಸಂಭವಿಸುವಂತಾದರೆ ತಕ್ಕ ಬುದ್ಧಿವಾದಗಳಿಂದ ನಮ್ಮನ್ನು ತಿದ್ದುವರು. ಕೆಲಸಮಾಡುವುದನ್ನು ಚೆನ್ನಾಗಿ ಕಲಿಸುವರು. ಮತ್ತು ಸುಗುಣಗಳಿಗೆಲ್ಲಾ ತಾವು ಮೇಲ್ಪಂಕ್ತಿಯಾಗಿದ್ದು ಭೃತ್ಯರ ಏಳಿಗೆಗೆ

ಸಹಾ ಮಾಡುವರು. ನಮ್ಮ ಮೇಲ್ಪಟ್ಟವರಿಗೆ ನಾವು ವಿಧೇಯರಾಗಿದ್ದರೆ ನಮಗಿಂತ ಕೀಳಾದವರು ನಮಗೆ ವಿಧೇಯರಾಗಿರುವರು. ವಿಧೇಯತೆಯು ಕೃತಜ್ಞತೆಯ ಹೊಂಗಿನ ಹೆಗ್ಗುರುತು. ದೊರೆತನವನ್ನು ಕೂಡ ತೊರೆದು ತಂದೆಯಮಾತಿನಂತೆ ವನಪ್ರಯಾಣಮಾಡಿದ ಶ್ರೀರಾಮಚಂದ್ರನೂ, ಅಪ್ಪನ ಪ್ರಾಣೆಯನ್ನು ಎದುರುನೋಡುತ್ತಿರುವಾಗ ಅಗ್ನಿದೇವರಿಗೆ ಆಹಾರವಾಗಿ ಅಳಿದುಹೋದ ನಾವಿಕ ಬಾಲಕನಾದ ಕ್ಯಾಸಿಬಿಯಾಂಕನೂ ವಿಧೇಯತೆಗೆ ಮಾದರಿಯಾಗಿದ್ದಾರೆ.

ಗುರುವೂ ಒಬ್ಬ ತಂದೆಯೆಂದು ನಮ್ಮ ಶಾಸ್ತ್ರಗಳಲ್ಲಿ ಉದಾಹರಿಸಲ್ಪಟ್ಟಿರುವುದು. ಈತನು ಶಿಷ್ಯರಿಗೆಮಾಡುವ ಮಹೋಪಕಾರವು ಅಸಾಧಾರಣವಾದುದು. ವಿದ್ಯೆಯಿಲ್ಲದವನು ತಿಳವಳಿಕೆಯಿಲ್ಲದೆ ಪಶುವೆಂದೆನಿಸಿಕೊಳ್ಳುವನು. ಅಂಥವಿದ್ಯೆಯನ್ನು ಕಲಿಸಿ ಜ್ಞಾನಾರ್ಜನೆಗೆ ಅನುಕೂಲತೆಯನ್ನು ಕಲ್ಪಿಸಿಕೊಟ್ಟು ಪಶುತ್ವವನ್ನು ಹೋಗಲಾಡಿಸಿ ನಮ್ಮನ್ನು ಮನುಷ್ಯರೆಂದೆನಿಸುವಂತೆ ಮಾಡುವಗುರುವು ಪ್ರತ್ಯಕ್ಷದೇವರೆಂದರೂ ಅತ್ಯುಕ್ತಿಯಾಗದು. ಇಂಥವರಿಗೆ ವಿಧೇಯರಾಗಿರಬೇಕಾದುದು ಪ್ರತಿಯೊಬ್ಬರಿಗೂ ಕರ್ತವ್ಯ. ಗುರುಗಳ ಆಜ್ಞಾಧಾರಕರಾಗಿದ್ದು ಅವರ ಅನುಗ್ರಹದಿಂದ ಸಕಲಶಾಸ್ತ್ರವಿಶಾರದರಾದ ಉಪಮನ್ಯು ಮೊದಲಾದ ನಮ್ಮ ಆರ್ಯಮಹರ್ಷಿಕುಮಾರರೂ ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆದು ವಿಧೇಯತೆಯ ವಿಷಯದಲ್ಲಿ ಲೋಕಕ್ಕೆಲ್ಲಾ ಮೇಲ್ಪಂಕ್ತಿಯಾಗಿದ್ದಾರೆ.

## (11) ತಾಳ್ಮೆ.

ತನಗೆ ಏನೋ ತೊಂದರೆಯಾಯಿತು ಎಂಬ ಭಾವನೆಯಿಂದ ತಳಮಳಗೊಳ್ಳದೆ ಏಕರೀತಿಯಾಗಿರುವುದು ತಾಳ್ಮೆಯೆನಿಸುವುದು. ತಾಳ್ಮೆಯನ್ನು ಪಡೆಯಬೇಕಾದರೆ ಮನಸ್ಸು ತುಂಬ ದೃಢವಾಗಿರಬೇಕು. ಮನಸ್ಸು ದುರ್ಬಲವಾಗಿದ್ದರೆ ಹೆಚ್ಚು ಗಾಬರಿ ಹುಟ್ಟುವುದು. ಕೆಲವುವೇಳೆ ಕಾರ್ಯಗಳ

ಫಲಿತಾಂಶಗಳನ್ನು ಪಡೆಯಬೇಕಾದರೆ ದೀರ್ಘಕಾಲದವರೆಗೂ ತಾಳ್ಮೆಯಿಂದ ನಿರೀಕ್ಷಿಸಿಕೊಂಡಿರಬೇಕಾಗುವುದು. ನಟ್ಟ ಎಷ್ಟೋವರ್ಷಗಳನಂತರ ಫಲವನ್ನುಕೊಡುವ ತೆಂಗನ್ನು ಬೆಳೆಯಿಸುವ ತೋಟಗಾರರು ಇದಕ್ಕೆ ದೃಷ್ಟಾಂತವಾಗಿದ್ದಾರೆ.

ಯಾರೂ ಎಂಥ ಕಷ್ಟನಷ್ಟಗಳಲ್ಲಿಯೂ ದಣುಕಬಾರದು. ವಿಲ್ಬರ್ ಫೋರ್ಸ್ ಎಂಬಾತನು ಪಶ್ಚಿಮಇಂಡಿಯಾದ ಗುಲಾಮರ ವ್ಯಾಪಾರವನ್ನು ನಿಲ್ಲಿಸಲು ನಲವತ್ತುವರ್ಷಗಳು ಶ್ರಮಪಡಬೇಕಾಯಿತು. ಬರ್ನಾರ್ಡ್‌ಪ್ಯಾಲಸ್ಸಿ ಎಂಬಾತನು 16 ವರ್ಷ ಸಾಹಸಪಟ್ಟು ಎನಾಮಲ್‌ಮಾಡುವ ಕ್ರಮವನ್ನು ಕಂಡುಹಿಡಿದನು. ಐಸರ್‌ನ್ಯೂಟನ್ ಎಂಬಾತನು ತಾನು ಎಷ್ಟೋವರ್ಷಗಳಕಾಲ ಶ್ರಮಪಟ್ಟು ಬರೆದಿದ್ದ ಗ್ರಂಥವನ್ನು ಓದುವುದಕ್ಕೆಂದು ಎರವಾಗಿ ತೆಗೆದುಕೊಂಡುಹೋಗಿದ್ದ ಒಬ್ಬ ಸ್ನೇಹಿತನು ಅದನ್ನು ಅಕಸ್ಮಾತ್ತಾಗಿ ಕಳೆದುಬಿಟ್ಟರೂ ಬೇಸರಪಡದೆ ಪುನಃ ಅದನ್ನೆಲ್ಲಾ ಬರೆದನು.

ತಾಳ್ಮೆಯಿದ್ದಷ್ಟೂ ಕೆಲಸಮಾಡಬೇಕೆಂಬ ಶ್ರದ್ಧೆಯೂ ಹೆಚ್ಚುವುದು. ತಾಳ್ಮೆಯಜತೆಗೆ ಗಾಂಭೀರ್ಯವೂ ಅವಶ್ಯಕ. ಇಲ್ಲದಿದ್ದರೆ ಲೊಟಗುಟ್ಟುವುದು ಮೊದಲಾದ ದುರಭ್ಯಾಸಗಳುಂಟಾಗುವುವು. ನಾವು ಎಲ್ಲರ ವಿಷಯದಲ್ಲೂ ತಾಳ್ಮೆಯಿಂದಿರಬೇಕು. ಯಾವುದೊಂದು ಸಣ್ಣಪುಟ್ಟಮಾತಿಗೂ ರೇಗುವುದು ಸದಾಮುಖವನ್ನು ಗಂಟುಹಾಕಿಕೊಂಡು ಸಿಡುಕಿನಿಂದ ಮಾತಾಡುವುದು, ಇತರರನ್ನು ಗದ್ದರಿಸುವುದ ಇಂಥವುಗಳೆಲ್ಲಾ ತಾಳ್ಮೆಗೆ ವಿರುದ್ಧವಾದ ಕೆಟ್ಟನಡತೆಗಳು. ಇವುಗಳಿಂದ ನಮ್ಮ ಸ್ವಭಾವವೇ ಕೆಟ್ಟುಹೋದೀತು. ಅಲ್ಪಾಪರಾಧಕ್ಕೂ ಕೋಪಿಸಿಕೊಳ್ಳುತ್ತ ನಮಗಿಂತ ದುರ್ಬಲನನ್ನು ತೊಂದರೆಪಡಿಸುವುದು ಬಹಳ ನೀಚಕೃತ್ಯ. ದೇವರು ನಮಗೆ ಶಕ್ತಿಯನ್ನು ಕೊಟ್ಟಿರುವುದು ದುರ್ಬಲರಿಗೆ ಸಹಾಯಮಾಡುವುದಕ್ಕೇ ಹೊರತು ಅವರನ್ನು ತೊಂದರೆಪಡಿಸುವುದಕಲ್ಲ. ರೋಗಿಗಳು ಮುದುಕರು ಕೈಲಾಗದ

ವರು ಸರಳುತ್ತ ಅಥವಾ ಅರಿಚುತ್ತ ಇದ್ದರೆ ಅಂಥವರ ವಿಷಯದಲ್ಲಿ ನಾವು ಜುಗುಪ್ಸೆಪಡಬಾರದು. ನಮಗೆ ಬಂದುವೇಳೆ ರೋಗಬಂದರೂ ಇತರ ವಿಧವಾದ ಯಾತನೆಗಳು ಬಂದೊದಗಿದರೂ ಯಾವುವಾದರೂ ನಷ್ಟಗಳು ಸಂಭವಿಸಿದರೂ ಬಂಧುಗಳು ಆಪ್ತರು ಮೃತರಾದರೂ ಅಂಥವೇಳೆಗಳಲ್ಲಿ ಮತ್ತು ಇತರರು ನಮ್ಮ ಸ್ವಭಾವವನ್ನು ಪರೀಕ್ಷಿಸುವುದಕ್ಕೋಸ್ಕರ ಅಥವಾ ಕೇವಲ ವಿನೋದಕ್ಕೆಂದು ರೇಗಿಸಲು ಯತ್ನಿಸಿದಾಗಲೂ ನಾವು ಬಹಳ ತಾಳ್ಮೆಯಿಂದಿರಬೇಕು.

ದುಸ್ಸಹವಾದ ಕಷ್ಟಗಳು ಬಂದಾಗ ತಡೆದುಕೊಳ್ಳಲಾರದೆ ತಿಳಿಗೇಡಿಗಳಾದ ಕೆಲವುಜನರು ಆತ್ಮಹತ್ಯೆಕ್ಕೆ ಯತ್ನಿಸುವರು. ಅವರೇ ಸ್ವಲ್ಪವುಟ್ಟಿಗೆ ತಾಳ್ಮೆಯಿಂದ ತಡೆದು ಯೋಚಿಸಿದರೆ ತಮ್ಮ ತಪ್ಪಿತಕ್ಕೆ ತಾವೇ ಪಶ್ಚಾತ್ತಾಪಪಡದೆ ಇರಲಾರರು. ಮದ್ರಾಸಿನಲ್ಲಿ ಕೇವಲ ಕಷ್ಟವನ್ನು ಸಹಿಸಲಾರದೆ ತುಪಾಕಿಯಿಂದ ತನನ್ನು ತಾನೇ ಹೊಡೆದುಕೊಂಡರೂ ಏಟುತಗಲದೆ ಉಳಿದುಕೊಂಡು ಲಾರ್ಡ್ ಕ್ಲೈವನು--ದೇವರು ಇನ್ನೂ ಯಾವುದೋ ಒಂದು ಮಹಾಕಾರ್ಯಕ್ಕೋಸ್ಕರ ನನ್ನನ್ನು ರಕ್ಷಿಸಿದ್ದಾನೆ ಆದುದರಿಂದಲೇ ಮರಣವುನನ್ನಧೀನದಲ್ಲಿಲ್ಲ, ಎಂದುಕೊಂಡು ಸುಮ್ಮನಾದನಂತೆ. ಯಾವ ವಿಷಯದಲ್ಲಿಯೂ ದುಡುಕಿ ನಡೆಯಕೂಡದೆಂಬುದಕ್ಕೆ ಇದು ಒಂದು ಒಳ್ಳೆಯ ನಿದರ್ಶನವಾಗಿದೆ.

ಆಗಾಗ್ಗೆ ನಮಗೆಸಂಭವಿಸತಕ್ಕ ರೋಗ, ಶೋಕ, ಭಯ, ದಾರಿದ್ರ್ಯ ಮೊದಲಾದ ಎಷ್ಟೋ ವಿಧವಾದ ತೊಂದರೆಗಳುಂಟಷ್ಟೆ ಇವುಗಳಿಂದ ಕೂಡ ನಮಗೆ ಎಷ್ಟೋ ಪ್ರಯೋಜನಗಳುಂಟು. ಇವನ್ನೆಲ್ಲಾ ದೇವರು ನಮ್ಮ ಕೆಡಕಿಗೋಸ್ಕರವಾಗಿಮಾಡಿಲ್ಲ. ಇವುಗಳಿಂದ ನಮಗೆ ಧೈರ್ಯಸ್ಥೈರ್ಯಗಳು, ದೈವಭಕ್ತಿ, ಪಾಪಭೀತಿ, ದಯಾದಾಕ್ಷಿಣ್ಯಗಳು ಮೊದಲಾದ ಅನೇಕ ಸುಗುಣಗಳು ವೃದ್ಧಿಯಾಗುವುದಕ್ಕೆ ಬಹಳ ಸಹಾಯವಾಗುವುದು. ಆದುದರಿಂದ

ಇದಕ್ಕೆ ಎದೆಗುಂದದೆ ತಾಳ್ಮೆಯಿಂದ ತಡೆದುಕೊಳ್ಳತಕ್ಕವರು ಇಹದಲ್ಲಿ ಧೀರರಾಗುವರಲ್ಲದೆ ಪರಲೋಕದಲ್ಲಿಯೂ ಸದ್ಗತಿಯನ್ನು ಪಡೆಯುವರೆಂದು ಪ್ರಾಜ್ಞರು ಹೇಳಿರುವರು.

ಕೇವಲ ಸಂತೋಷದಿಂದ ಅತಿಯಾಗಿ ಹಿಗ್ಗುವುದು ಕೂಡ ತಪ್ಪು. ಒಬ್ಬಾನೊಬ್ಬ ಬಡವನು ಯಾವುದೋ ಒಂದು ಲಾಟರಿಯಲ್ಲಿ ತನಗೆ ಒಂದು ಲಕ್ಷರೂಪಾಯಿ ಬಂತೆಂಬ ಸುದ್ದಿಯನ್ನು ಕೇಳಿದ ಕೂಡಲೇ ಮೃತನಾದನಂತೆ! ಇದು ಮನಸ್ಸನ್ನು ಹದ್ದಿನಲ್ಲಿಟ್ಟುಕೊಳ್ಳಲಾರದುದರಿಂದ ಉಂಟಾದ ದುಷ್ಫಲವು.

ತಾಳ್ಮೆಯಿಲ್ಲದಿದ್ದರೆ ಯಾವ ಕೆಲಸವೂ ನಡೆಯುವುದಿಲ್ಲ. ಏನಾದರೂ ಅಚಾತುರ್ಯವು ನಡೆದುಹೋದರೆ ಅದನ್ನೇ ನೆನಸಿಕೊಂಡು ಸರ್ವದಾ ಹಲುಬುತ್ತಿರಬಾರದು ಮೀರಿಹೋದುದಕ್ಕೆ ಅಥವಾ ಅಸಾಧ್ಯವಾದುದಕ್ಕೆ ಚಿಂತಿಸಿಫಲವೇನು? ಯಾವಕಾಲಕ್ಕೆ ಏನುನಡೆಯುವುದೋ ಅದನ್ನು ಸಹಿಸಿಕೊಳ್ಳದೆ ಕೋಪತಾಪಗಳಿಗೆ ಒಳಗಾಗಿನಡೆದರೆ—' ಕೋಪತಾಪತಂದೀತು, ತಾಪಬ್ರಹ್ಮಹತ್ಯ ತಂದೀತು' ಎಂಬಂತೆ ಅನೇಕ ಅನರ್ಥಗಳು ನಡೆದಾವು. ಇತರರಿಗೂ ಬಹಳ ಹಿಂಸೆಯಾದೀತು. ಆದುದರಿಂದ ಯಾರೂ ನಮ್ಮ ಹತ್ತಿರ ಸೇರುವುದಿಲ್ಲ. ಮತ್ತು ಎಲ್ಲರೂ ನಮ್ಮನ್ನು ದ್ವೇಷಿಸುವರು

## (12) ಸತ್ಯ.

ನಡತೆಯೆಂಬ ಕಟ್ಟಡಕ್ಕೆ ಸತ್ಯವೇ ಮೂಲಾಧಾರವಾದ ಅಸ್ತಿವಾರವು. ಇದೊಂದಿಲ್ಲದಿದ್ದರೆ ಯಾವ ಇತರ ಸುಗುಣಗಳಿದ್ದರೂ ವ್ಯರ್ಥವೇ ಆಗಿ ಲೋಕದಲ್ಲಿ ಬಾಳುವುದೇಕಷ್ಟವಾಗುವುದು. ಇದ್ದುದನ್ನು ಇದ್ದಂತೆಯೇ ಹೇಳತಕ್ಕುದೇ ಸತ್ಯವೆನಿಸುವುದು. ಆಡಿದಮಾತು ಬರೆದುಕೊಟ್ಟ ಪತ್ರಕ್ಕಿಂತಲೂ ಮುಖ್ಯ ಕಂಡದುದನ್ನು ಕಂಡಂತೆಯೇ ಹೇಳಬೇಕಾದಾಗ ಸ್ವಲ್ಪಭಾಗ ನಿಜವನ್ನುಹೇಳಿ ಉಳಿದಭಾಗವನ್ನು ಮರೆಮಾಚುವುದು ಕೂಡ ಅಸತ್ಯವೇ.

ಇಷ್ಟೇ ಅಲ್ಲ, ಇದು ಸುತರಾಂ ಸುಳ್ಳು ಹೇಳುವುದಕ್ಕಿಂತಲೂ ಕೆಟ್ಟದು. ಕಣ್ಣು ಕೈ ಮುಂತಾದುವುಗಳ ಸಂಜ್ಞೆಗಳಿಂದ ಅಥವಾ ಸಮಯದಲ್ಲಿ ಸುಮ್ಮನಿರುವುದರಿಂದ ನಿಜಸ್ಥಿತಿಯನ್ನು ಮರೆಮಾಚುವುದು ಕೂಡ ಅಸತ್ಯವೇ.

ನಮಗೆ ಎಷ್ಟೋ ತೊಂದರೆಗಳು ಬಂದರೂ ಆಡಿದ ಮಾತಿಗೂ ಕೊಟ್ಟ ಭಾಷೆಗೂ ತಪ್ಪಬಾರದು. ಇಲ್ಲದ ಅಪರಾಧಗಳನ್ನು ಇತರರ ಮೇಲೆ ಹೊರಿಸುವುದು ಚಾಡಿಹೇಳುವುದು ಒಂದು ಪಾಲು ನಡೆದಿದ್ದರೆ ಲಕ್ಷ ಪಾಲೆಂದೂ ನರಿಯು ಹೋಗಿದ್ದರೆ ಹುಲಿಯು ಹೋಯಿತೆಂದೂ ಮಿತಿಮೀರಿದ ಅತಿಶಯೋಕ್ತಿಯಾಡುವುದು, ಅಪಸಾಕ್ಷಿಯನ್ನು ನುಡಿಯುವುದು, ಕೇಳುವವರ ಮನಸ್ಸಿಗೆ ಕೇವಲ ಗಾಬರಿಯಾಗುವ ರೀತಿಯಲ್ಲಿ ಎರಡರ್ಥಗಳು ತೋರುವಂತೆ ಮಾತಾಡಿ ಅವರನ್ನು ತಪ್ಪುದಾರಿಗೆಳೆಯುವುದು, ಕಡೆಗೆ ಇತರರಿಗೆ ಒಳ್ಳೆಯದಾಗಲಿ ಎಂದು ಸುಳ್ಳು ಹೇಳುವುದು, ಇಂತವುಗಳೆಲ್ಲಾ ಸತ್ಯಕ್ಕೆ ವಿರುದ್ಧವಾದ ಕೆಟ್ಟ ನಡತೆಗಳು. ನಾವು ಯಾವಾಗಲೂ--ಕಡೆಗೆ ಹುಡುಗಾಟದಲ್ಲಿ ಕೂಡ—ಸುಳ್ಳು ಹೇಳಬಾರದು. ಹಾಗೆ ಹೇಳುವವರು ಕುರುಬರ ಹುಡುಗನ ಗತಿಗೆ (II ಬಾಲಬೋಧೆಯಲ್ಲಿರುವ ಕಥೆ) ಸಮಾನವಾದ ಶಿಕ್ಷೆಯನ್ನು ಅನುಭವಿಸುವರು.

ಮನೆಯಲ್ಲಿ, ಪಾಠಶಾಲೆಯಲ್ಲಿ, ಸರ್ವತ್ರ, ಸರ್ವದಾ ಸತ್ಯವನ್ನೇ ನುಡಿಯಬೇಕು. ಮುಖ್ಯವಾಗಿ ಯಾರು ಹೆಚ್ಚಾಗಿ ಹರಟುವರೋ ಅವರು ಸುಳ್ಳು ಹೇಳುತ್ತಾರೆ. ಆದುದರಿಂದಲೇ ಮಿತವಾಗಿ ಮಾತಾಡುವುದು ಯಾವಾಗ್ಯೂ ಒಳ್ಳೆಯದು. ಯಾವಾಗಲೂ ಇದ್ದುದನ್ನು ಇದ್ದಂತೆಯೇ ಹೇಳಬೇಕೇ ವಿನಾ ತನಗೆ ತೋರಿದುದನ್ನೆಲ್ಲಾ ಬೆರಸಿ ಹೇಳಬಾರದು.

ಇತರರನ್ನು ಮೆಚ್ಚಿಸುವುದಕೋಸ್ಕರ ಕೆಲವರು ಸುಳ್ಳು ಹೇಳುವರು. ಇದು ಅಯುಕ್ತವಾದ ಮುಖಸ್ತುತಿ. ಈ ವಿಷಯದಲ್ಲಿ ಕೆನ್ಯೂಟನ ಕಥೆಯು ಉತ್ತಮವಾದ ದೃಷ್ಟಾಂತವಾಗಿದೆ. ಯೂರೋಪಿನ ಒಂದು

ದೇಶದಲ್ಲಿ ಕೆನ್ಯೂಟ್ ಎಂಬ ಒಬ್ಬ ರಾಜನಿದ್ದನು. ಅನೇಕರು ಅತನಿಂದ ಬಹುಮಾನಗಳನ್ನು ಪಡೆಯಬೇಕೆಂಬ ಆಶೆಯಿಂದ ಸದಾ ಆತನನ್ನು ಇಂದ್ರ ಚಂದ್ರ ದೇವೇಂದ್ರ ಎಂದು ಸುಮ್ಮನೆ ಹೊಗಳುತ್ತಿದ್ದರು. ಇದು ಅತನಿಗೆ ಇಷ್ಟವಿರಲಿಲ್ಲ. ಒಂದು ದಿನ ರಾಜನು ಸಭಿಕರೊಡನೆ ಸಮುದ್ರ ತೀರ ದಲ್ಲಿ ಕುಳಿತು ಮಾತನಾಡುತ್ತಿದ್ದಾಗ ಅವರಲ್ಲಿ ಕೆಲವರು - ಎಲೈ ಮಹಾ ರಾಜನೆ, ನಿನ್ನ ಅಧಿಕಾರವು ಲೋಕೋತ್ತರವಾದುದು. ಈ ಸಮುದ್ರವು ಕೂಡ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಯುವುದು ಎಂದರು ಆಗ ದೊರೆಯು ಇವರ ಅವಿವೇಕವನ್ನು ತಿದ್ದಬೇಕೆಂದು ಯೋಚಿಸಿ 'ಅಯ್ಯ ಸಮುದ್ರವೆ, ನಿನ್ನ ಅಲೆಗಳು ಇನ್ನು ಮುಂದಕ್ಕೆ ಬರಕೂಡದು, ಎಂದನು. ಆದರೂ ಒಂದೆರಡು ನಿಮಿಷಗಳಲ್ಲಿ ಸಮುದ್ರದ ಅಲೆಗಳು ಮುಂದಕ್ಕೆ ನುಗ್ಗಿ ಬರುತ್ತ ಇವರು ಕುಳಿತಿದ್ದ ಸ್ಥಳವನ್ನು ನೆನೆಯಿಸತೊಡಗಿದವು. ಆ ದೊರೆಯು ತನ್ನನ್ನು ಹೊಗಳಿದವರನ್ನು ಕುರಿತು ಅಯ್ಯ ಏಕೆ ಸಮುದ್ರವು ನನ್ನ ಅಪ್ಪಣೆಯಂತೆ ನಡೆಯುವುದಿಲ್ಲ ? ಇಲ್ಲದ ಗುಣಗಳನ್ನು ಆರೋಪಿಸಿ ವೃಥಾ ಮನುಷ್ಯರನ್ನು ಏತಕ್ಕೆ ಹೊಗಳುವಿರಿ ? ಇದಕ್ಕೆ ಬದಲಾಗಿದೇವ ರನ್ನು ಸ್ತೋತ್ರಮಾಡಿ ಎಂದು ಹೇಳಿದನಂತೆ

ನಿಜವನ್ನು ಹೇಳಿದರೆ ತಮಗೇನಾದರೂ ತೊಂದರೆಯಾಗಬಹುದೆಂದು ಮರೆಮಾಚುವುದು ಹೇಡಿತನವು ಸುಳ್ಳು ಹೇಳುವುದರಿಂದ ಪಡೆದ ಸ್ವ ಪ್ರಯೋಜನವು ಅನ್ಯಾಯಾರ್ಜಿತವಾದುದರಿಂದ ಶ್ರೇಯಸ್ಕರವಲ್ಲ. ಆದುದ ರಿಂದಲೇ ಹಾಗೆ ಪ್ರಯೋಜನವನ್ನು ಅನುಗ್ರಹಿಸುವುದು ಈಶ್ವರನಿಗೂ ಅಸಮ್ಮತವಾದುದು. ಅಪಹಾಸ್ಯವಾದೀತು ಮಾನ ಹೋದೀತು ಇತ್ಯಾದಿ ಶಂಕೆಗಳಿಂದೂ ಕೆಲವರು ಸುಳ್ಳುಹೇಳುವರು. ಇದೂ ಅಯುಕ್ತವೇ. ಮನ ಸ್ಸಿಗೆ ಗಾಬರಿಯಾಗಿದ್ದಾಗ ಅಕಸ್ಮಾತ್ತಾಗಿ ಸುಳ್ಳು ಹೊರಡುವ ಸಂಭವ ವುಂಟು. ಒಂದು ವೇಳೆ ಅಂಥ ಅಚಾತುರ್ಯವು ನಡೆದರೆ ಅನಂತರವಾದರೂ

ಅದನ್ನು ತಿದ್ದಿಕೊಳ್ಳಬೇಕು. ಕೆಲವು ವೇಳೆ ಅಕಸ್ಮಾತ್ತಾಗಿ ನಮ್ಮಿಂದ ತಪ್ಪಿತವು ನಡೆದುಹೋದರೂ ಕೂಡ ಶಿಕ್ಷೆಯನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ಸುಳ್ಳು ಹೇಳಬಾರದು. ಈ ವಿಷಯದಲ್ಲಿ ದೊರೆ ಮತ್ತು ಬಂದೀವಾನರು. ಎಂಬ ಕಥೆಯು (ಕನ್ನಡ I ನೆಯ ಪುಸ್ತಕದಲ್ಲಿದೆ) ಒಳ್ಳೆಯ ದೃಷ್ಟಾಂತವಾಗಿದೆ. ಸತ್ಯವನ್ನು ಹೇಳತಕ್ಕವರಿಗೆ ಚಿತ್ತಶುದ್ಧಿಯಿರುವುದರಿಂದ ಮನಸ್ಸಿನೊಳಗೆ ಅಳುಕು ಇರುವುದಿಲ್ಲ. ಮುಖವು ಪೆಚ್ಚುಬೀಳುವ ಸಂಭವವಿಲ್ಲ. ಅವರನ್ನು ಸತ್ಯಸಂಧರೆಂದು ಎಲ್ಲರೂ ಹೊಗಳುವರು. ಮತ್ತು ದೇವರೂ ಮೆಚ್ಚುವನು.

### (13) ಪ್ರಾಮಾಣಿಕತೆ.

ಮಾತಿನಲ್ಲಿ ಮಾತ್ರವಲ್ಲದೆ ಸಕಲ ವಿಷಯಗಳಲ್ಲೂ ದಿಟವಾಗಿ ನಡೆಯುವುದೇ ಪ್ರಾಮಾಣಿಕತೆ. ಕಳ್ಳತನ, ಮನಸ್ಸಿನಲ್ಲೊಂದಿದ್ದರೆ ಹೊರಗೆ ಬೇರೊಂದನ್ನು ನಟಿಸುವುದು ಸುಳ್ಳು ಅಳತೆತೂಕಗಳನ್ನೂ ನ್ಯಾಣ್ಯಗಳನ್ನೂ ಉಪಯೋಗಿಸಿ ಅಥವಾ ಕಡಿಮೆ ಕ್ರಯಕ್ಕೆ ಕೊಂಡು ಕೊಂಡು ಇತರರಿಗೆ ಮೋಸಮಾಡುವುದು. ಇತರರ ಸ್ವತ್ತನ್ನು ಅಪಹರಿಸಿ ತಾವು ಸಾಧುಗಳೆಂದು ತೋರ್ಪಡಿಸಿ ಕೊಳ್ಳುವುದು. ಲೆಕ್ಕ ಪತ್ರಗಳನ್ನು ಸುಳ್ಳಾಗಿ ತಿದ್ದಿ ಮೊದಲು ಇದ್ದುದೇ ಹೀಗೆಂದು ಸಾಧಿಸುವುದು. ಇಂಥವುಗಳೆಲ್ಲಾ ಪ್ರಾಮಾಣಿಕತೆಗೆ ವಿರುದ್ಧವಾದದುರ್ಗುಣಗಳು.

ಯಾವದಾದರೊಂದು ಸ್ವತ್ತು ಅಕಸ್ಮಾತ್ತಾಗಿ ಸಿಕ್ಕಿದರೆ ಅದರ ಮಾಲೀಕರಿಗೆ ತಲಪಿಸಬೇಕು. ಹಾಗೆ ಅವರನ್ನು ಹುಡುಕುವುದಕ್ಕೆ ತನಗೆ ಸಾಧ್ಯವಿಲ್ಲದಿದ್ದರೆ ಹಾಗೆ ಮಾಡಲು ಸರ್ಕಾರದಿಂದ ನಿಯಮಿತರಾಗಿರತಕ್ಕ ಪೋಲೀಸ್ ಅಧಿಕಾರಿಗಳ ವಶಕ್ಕಾದರೂ ಕೊಟ್ಟು ಅವರಿಂದ ಕ್ರಮವಾದ ರಶೀತಿಯನ್ನು ಪಡೆಯಬೇಕು. ಮಾತು ಮಾತಿಗೂ ಆಣೆಭಾಷೆಯ ನುಡಿಗಳನ್ನಾಡುತ್ತ ತಾವು ಕೇವಲ ಸತ್ಯವಂತರೆಂದೆನಿಸಿ ಕೊಳ್ಳಬೇಕೆಂಬುವ

ರೆಲ್ಲಾ ಅಪ್ರಮಾಣಿಕರೇಸರಿ. ಜಂಬ ಬಡಿದುಕೊಳ್ಳುವುದೂ ಒಂದು ವಿಧವಾದ ಅಪ್ರಮಾಣಿಕತೆಯೇ. ಯಾರೇ ಆಗಲಿ ಪ್ರಾಮಾಣಿಕತೆಯಿಂದ ನಡೆಯಬೇಕಾದರೆ 'ಹಾಸಿಗೆಯಿದ್ದಷ್ಟು ಕಾಲುಚಾಚಿಕೊಳ್ಳಬೇಕು.' ಎಂಬ ಗಾದೆಯನ್ನು ಮರೆಯದೆ ನಡೆಯಬೇಕು. ಹಾಗಿಲ್ಲದೆ ನಮ್ಮ ಶಕ್ತಿಗೆ ಮೀರಿದುದು ಮಾಡಿದರೆ ಸಾಲಗಾರರ ಕೈಗೆ ಸಿಕ್ಕಿಬಿದ್ದು, ಅದನ್ನು ತೀರಿಸುವುದಕ್ಕೆ ಯತ್ನವಿಲ್ಲದುದರಿಂದ ಅಪ್ರಾಮಾಣಿಕತೆಗೆ ಬೀಳಬೇಕಾಗುತ್ತದೆ. ಸಾಲಮಾಡಿದರೆ ಮುಂದಕ್ಕೆ ಅದನ್ನು ತೀರಿಸುವುದಕ್ಕೆ ಯತ್ನವುಸಾಗುವುದಿಲ್ಲವೆಂದು ತಿಳಿದಿದ್ದರೂ ಕೂಡ ಧೋರಣೆಯಿಂದ ಕೆಲವರು ಸಾಲಮಾಡುವರು. ಇದು ಸುತರಾಂನಿಷಿದ್ಧ. ಎಷ್ಟೋ ವೇಳೆಗಳಲ್ಲಿ ಇತರರು ನಮ್ಮನ್ನು ನಂಬಿ ಅವರ ಸ್ವತ್ತನ್ನೇ ನಮ್ಮವಶಕ್ಕೆ ಕೊಟ್ಟಿರುವರು. ಅದನ್ನು ನಾವು ಸ್ವತಃ ಅಪಹರಿಸದಿರುವುದು ಮಾತ್ರವಲ್ಲದೆ ಇತರರಿಂದಲೂ ಅಂಥ ಮೋಸಕ್ಕೆ ಅವಕಾಶವಿಲ್ಲದಂತೆ ನೋಡಿಕೊಳ್ಳುವುದೂ ಆವಶ್ಯಕ. ಸಣ್ಣ ಪುಟ್ಟ ವಸ್ತುಗಳನ್ನು ಅಪಹರಿಸುವುದರಿಂದ ಅದನ್ನು ಕಳೆದುಕೊಳ್ಳತಕ್ಕವರಿಗೇನೂ ನಷ್ಟವಾಗದೆಂದೂ ಆದುದರಿಂದ ಅವನ್ನು ಕದಿಯಬಹುದೆಂದೂ ಕೆಲವರು ಹೇಳಿಕೊಳ್ಳುವರು, ಇದೂ ತಪ್ಪು. ವಸ್ತುವು ಸಣ್ಣದಾದಮಾತ್ರಕ್ಕೆ ಅದನ್ನು ಕದ್ದ ತಪ್ಪೇನೂ ಸಣ್ಣದಾಗಲಾರದು.

ಇತರರ ಸ್ವತ್ತನ್ನು ಕದಿಯದಿದ್ದರೆ ಸರಿ, ಅದನ್ನು ಇನ್ನೇನುಬೇಕಾದರೂ ಮಾಡಬಹುದು ಎಂದು ತಿಳಿಯಬಾರದು. ಯಾವ ವಿಧದಲ್ಲಿಯಾದರೂ ಅದನ್ನು ಕೆಡಿಸುವುದೂ ಅಧರ್ಮವೇ ಸರಿ, ಬೇಕೆಂದು ಚರಂಡಿಗಳನ್ನು ಅಡ್ಡಗಟ್ಟುವುದು, ಬೀದಿಯ ಲಾಂದ್ರಗಳನ್ನೊಡೆಯುವುದು, ಇತರರ ಮನೆಗಳ ಕಿಟಕಿಗಳ ಕನ್ನಡಿಗಳನ್ನೊಡೆಯುವುದು, ಇತರರ ಗಿಡಗಳನ್ನು ಕಿತ್ತೆಸೆಯುವುದು ಇಂಥವುಗಳಿಂದ ನಷ್ಟಪಟ್ಟವರು ಪೇಚಾಡುತ್ತಿದ್ದರೆ ತಾವು ಏನೂ ಅರಿಯದವರಂತೆ ಸುಮ್ಮನಿರುವುದು ಇಂಥದ್ದೆಲ್ಲಾ ಅನ್ಯಾಯ. ಅಕಸ್ಮಾ

ಶ್ತಾಗಿ ಬಂದುವೇಳೆ ತನ್ನಿಂದ ಇಂಥ ಅಚಾತುರ್ಯವು ನಡೆದುಹೋದರೆ ತಾನಾಗಿ ಒಪ್ಪಿಕೊಂಡು ತಕ್ಕಷ್ಟು ದಂಡವನ್ನಾದರೂ ತೆತ್ತುಬಿಡುವುದು ಯೋಗ್ಯವಾದ ಮಾರ್ಗವು.

ಪ್ರಾಮಾಣಿಕತೆಯು ಸತ್ಯಕ್ಕೂ ಮೂಲಭೂತವಾದುದಾದ್ದರಿಂದ ಇದೊಂದಿಲ್ಲದಿದ್ದರೆ ಇತರ ಯಾವ ಸುಗುಣಗಳಿದ್ದರೂ ಫಲವಿಲ್ಲ. ಪ್ರಾಮಾಣಿಕನಾದವನು ಅಗ್ಗಿ ತಿನ್ನುವುದಕ್ಕೆ ಗತಿಯಿಲ್ಲದಷ್ಟು ಕಡುಬಡವನಾದರೂ ದೇವರು ಅವನನ್ನು ಚೆನ್ನಾಗಿಯೇ ಪ್ರೀತಿಸುವನು. ಇತರರ ಸ್ವತ್ತು ಚೆನ್ನಾಗಿರುವುದೆಂದು ಭಾವಿಸಿ ಆಸೆಪಡುವುದು, ಇತರರಿಗೆ ಮನಃಪೂರ್ವಕವಾಗಿ ಕೆಡಕನ್ನು ಮಾಡಬೇಕೆಂಬದುರುದ್ದೇಶ, ಇತರರ ಎಲ್ಲಾ ವಸ್ತುಗಳೂ ತನಗೇ ಆಗಬೇಕೆಂಬ ದುರಾಶೆ, ಇಂಥವುಗಳಿಂದ ಜನರು ಅಪ್ರಾಮಾಣಿಕರಾಗುವ ಸಂಭವವುಂಟು.

ಅಧಿಕಾರಿಗಳಲ್ಲಿ ಕೆಲವರು ತಮಗೆ ದೊರೆಯುವ ಸಂಬಳವು ಜೀವನಕ್ಕೆ ಸಾಲದೆಂಬ ನೆಪದಿಂದ ಲಂಚಕ್ಕೆ ಕೈಯೊಡ್ಡಿ ಅನ್ಯಾಯಮಾಡುವರು. ಆದರೂ ಮೇಲ್ಪಟ್ಟವರ ಕಣ್ಣಿಗೇನೋ ಗೋಮುಖ ವ್ಯಾಘ್ರದಂತೆ ಸೌಮ್ಯವಾಗಿ ತೋರುವರು. ತಮಗೆ ಆಪ್ತರಾದವರಾದರೂ ಈ ವಿಷಯವಾಗಿ ಕೇಳಿದರೆ ಲಂಚಾಕೊಟ್ಟವರಿಗೆ ಪ್ರತಿಫಲವಾಗಿ ತಾವು ಪರಮೋಪಕಾರ ಮಾಡಿದಂತೆ ಜಂಭ ಬಡಿದುಕೊಳ್ಳುವರು. ನಿಜವಾಗಿ ನೋಡಿದರೆ ಇದು ಉಪಕಾರವಲ್ಲ. ದಣಿಗೆ ಮಾಡುವ ಪರಮದ್ರೋಹವು, ಲಂಚವನ್ನು ಪಡೆದವರು ಮಾತ್ರವಲ್ಲದೆ ಅದನ್ನು ಕೊಟ್ಟವರೂ ಅಪ್ರಾಮಾಣಿಕರೇ. ತಮಗೆ ಆಗಬೇಕಾದ ಕಾರ್ಯವು ನ್ಯಾಯವಾದುದಾದರೇ ತಾನಾಗಿಯೇ ಆಗುವುದು, ಹೀಗಿರುವಲ್ಲಿ ಲಂಚವನ್ನು ಕೊಡಬೇಕಾದುದೇತಕ್ಕೆ ? ಅನ್ಯಾಯವೆಂದು ತಾನು ತಿಳಿದಿರುವುದರಿಂದಲೇ ಅದನ್ನು ನ್ಯಾಯದಂತೆ ತೋರ್ಪಡಿಸಬೇಕೆಂದಲ್ಲವೆ? ಹೀಗೆ ಮಾಡುವುದು! ಅನುಭವವಿಲ್ಲದವರು ವೈದ್ಯಮಾಡಲೆಳಸು

ವುದೂ ಲಾಯರು ಕಕ್ಷಿಗಾರರನ್ನು ಪ್ರೇರಿಸುವುದೂ ವರ್ತಕರು ಕೆಟ್ಟ ವಸ್ತುಗಳನ್ನು ಒಳ್ಳೆಯುವೆಂದು ಮಾರುವುದೂ ಇವೆಲ್ಲಾ ಅನರ್ಥಕಾರಿಗಳಾದ ಅಪ್ರಾಮಾಣಿಕತೆಯ ಕೆಲಸಗಳು. ಅಪ್ರಾಮಾಣಿಕರನ್ನು ಯಾರೂ ನಂಬುವುದಿಲ್ಲ. ಎಲ್ಲಿಯೂ ಅವರಿಗೆ ಗೌರವವು ನಡೆಯುವುದಿಲ್ಲ. ಮತ್ತು ತಕ್ಕ ಶಿಕ್ಷೆಯೂ ಆಗುತ್ತದೆ.

## (14) ನಿಗರ್ವಿತ್ವ.

ನಿಗರ್ವಿತ್ವವು ಲೋಕೋತ್ತರವಾದ ಸುಗುಣವೆಂದು ಅಷ್ಟು ಸುಪ್ರಸಿದ್ಧವಲ್ಲದಿದ್ದರೂ ಮನುಷ್ಯರಲ್ಲಿ ಶ್ಲಾಘ್ಯವಾದ ನಡತೆಗಳನ್ನುಂಟುಮಾಡುವುದಕ್ಕೇನೋ ಇದು ಅತ್ಯಾವಶ್ಯಕವಾದುದು. ಒಬ್ಬರ ನಡತೆಯು ಘನತೆಯುಳ್ಳದೆಂಬುದಕ್ಕೆ ನಿಗರ್ವಿತ್ವವು ಹೆಗ್ಗುರುತು. ಇದನ್ನು ಪುಷ್ಪಪರಿಮಳಕ್ಕೆ ಹೋಲಿಸಬಹುದು. ಇದು ಕಣ್ಣಿಗೆ ಕಾಣಿಸದಿರತಕ್ಕುದಾದರೂ ಅನುಭವವೇದ್ಯವಾಗಿರುವುದು. ನಿಗರ್ವಿತ್ವದ ಸಂಗಡ ಆತ್ಮಗೌರವ ಮರ್ಯಾದೆ ಇವು ಇದ್ದೇ ಇರುತ್ತವೆ.

ಪ್ರತಿಯೊಬ್ಬರೂ ನಿಗರ್ವಿಗಳಾಗಿರಬೇಕು. ದೊಡ್ಡ ಪದವಿಗಳನ್ನನುಭವಿಸತಕ್ಕವರಲ್ಲಂತು ನಿಗರ್ವಿತ್ವವು ಅತ್ಯಂತ ಮುಖ್ಯವೂ ಆವಶ್ಯಕವೂ ಆದುದರಿಂದ ಇದ್ದೇತೀರಬೇಕು. ಇಲ್ಲದಿದ್ದರೆ, ಇತರರೆಲ್ಲರಿಗಿಂತಲೂ ತಾವೇ ಹೆಚ್ಚೆಂಬ ದುರಭಿಮಾನವು ಹುಟ್ಟಿ ಅನೇಕ ಅನರ್ಥಗಳನ್ನು ನಡೆಯಿಸುವುದಕ್ಕೆ ಅವಕಾಶವಾಗುವುದು. ಮತಸ್ಥಾಪಕರಾದ ಅನೇಕ ಜನ ಮಹಾತ್ಮರುಗಳು ಕೂಡ ನಿಗರ್ವಿಗಳಾಗಿಯೇ ಇದ್ದರು. ಯಾರೂ ನಿಗರ್ವಿಗಳಾಗಿರಬೇಕಾದುದಿಲ್ಲವೆಂಬುದಕ್ಕೆ ಏನೂ ಕಾರಣವಿಲ್ಲ. ಯಾರೂ ಇತರರಿಗಿಲ್ಲದಂತೆ ಸುಗುಣಗಳನ್ನೂ ಅದೃಷ್ಟಗಳನ್ನು ಬಟ್ಟು ಗುತ್ತಿಗೆಗೆ ಪಡೆದುಕೊಂಡಿಲ್ಲ. ಆದುದರಿಂದ ಲೋಕದಲ್ಲಿ ಸರ್ವೋತ್ತಮರೂ ಸರ್ವಜ್ಞರೂ ಆದವರು ಯಾರೂ ಇಲ್ಲ. ಒಬ್ಬರನ್ನೊಬ್ಬರು ಮೀರಿಸಿಯೇ ಇರುತ್ತಾರೆ.

ನಾವು ಯಾವುದಾದರೊಂದು ವಿಷಯದಲ್ಲಿ ಬಬ್ಬರಿಗಿಂತ ಮೇಲಾಗಿದ್ದರೆ ಇನ್ನೊಬ್ಬರು ಅದೇ ವಿಷಯದಲ್ಲಿ ಅಥವಾ ಬೇರೆ ವಿಷಯದಲ್ಲಾದರೂ ನಮಗಿಂತಲೂ ಮೇಲಾಗಿರುವುದುಂಟು.

ನಿರ್ಗರ್ವಿತ್ವದ ಜತೆಯಲ್ಲಿ ಒಳ್ಳೆಯ ತಿಳವಳಿಕೆಯೂ ಇದ್ದೇ ಇರುತ್ತದೆ. ತನ್ನನ್ನು ಮೀರಿಸಿದವರು ಅನೇಕರಿರಬಹುದು ಎಂಬ ಜ್ಞಾನವೇ ಇದಕ್ಕೆ ದೃಷ್ಟಾಂತವಾಗಿದೆ. ತಿಳಿಗೇಡಿಗಳಾದವರು ತಮಗಿಂತ ಕೀಳಾಗಿರುವವರನ್ನು ನೋಡಿ ತಾವೇ ಮೇಲೆಂದು ಹಿಗ್ಗಿಕೊಳ್ಳುತ್ತ ಅಹಂಕಾರಪಡುವರು. ಮತ್ತು ತಮಗೆ ತಕ್ಕ ಕಾಲದಲ್ಲಿ ದೊರೆತಿರುವ ಅನುಕೂಲ್ಯಕ್ಕಾಗಿ ಸಂತೋಷಪಡುವರೇ ಹೊರತು ಮುಂದೆ ಯಾವರೀತಿಯಲ್ಲಿ ನಡೆದರೆ ಇನ್ನೂ ಅಭಿವೃದ್ಧಿಗೆ ಬರಬಹುದು ಎಂಬ ಯೋಚನೆಯನ್ನೇ ಮಾಡುವುದಿಲ್ಲ. ತಾವು ಮುಂದೆ ಇನ್ನೂ ತಿಳಿಯಬೇಕಾದದು ಎಷ್ಟೋ ಉಂಟು ಎಂದು ಭಾವಿಸಿ ನಡೆಯುವುದೇ ನಿಗರ್ವಿತ್ವವು. ಸರ್ ಐಸಕ್ ನ್ಯೂಟನ್ ಎಂಬಾತನೂ ವರಕವಿಯಾದ ಕಾಳಿದಾಸನೂ ನಿಗರ್ವಿಗಳೆಂಬುದಕ್ಕೆ ಅವರ ಗ್ರಂಥಗಳಲ್ಲಿರತಕ್ಕ ಅಂಶಗಳೇ ಸಾಕ್ಷಿಯಾಗಿವೆ.—ಮೂರ್ಖನಾದ ನಾನು ಒಳ್ಳೆಯ ಕವಿಯೆಂಬ ಖ್ಯಾತಿಯನ್ನು ಪಡೆಯಬೇಕೆಂದು ಯತ್ನಿಸುತ್ತಿರುವುದು, ಎತ್ತರವಾದವನಿಗೆ ಎಟುಕಿಸತಕ್ಕ ಹಣ್ಣಿಗೆ ಒಬ್ಬ ಕುಳ್ಳನು ಆಸೆಪಟ್ಟು ಕೈಯೆತ್ತಿಕೊಂಡು ಅಪಹಾಸ್ಯಕ್ಕೆ ಗುರಿಯಾಗುವಂತಿದೆ ಎಂದು ಕಾಳಿದಾಸನು ರಘುವಂಶ ಗ್ರಂಥದಲ್ಲಿ ಹೇಳಿ ತನ್ನ ನಿಗರ್ವಿತ್ವವನ್ನು ವ್ಯಕ್ತಪಡಿಸಿಕೊಂಡಿರುವನು. ಹಿಂದೆ ಫ್ರೆಂಚ್ ದಳಪತಿಯಾಗಿದ್ದ ನೆಪೋಲಿಯನ್ನಿಗೂ ಇಂಗ್ಲೀಷರಿಗೂ ಘೋರ ಯುದ್ಧವು ನಡೆದಾದ ಇಂಗ್ಲೀಷರ ನಾವಿಕ ಸೈನ್ಯಾಧಿಪತಿಯಾಗಿ ಅದ್ಭುತವಾದ ಸಾಹಸವನ್ನು ಮಾಡಿ ಕಡೆಗೆ ಗುಂಡಿನ ಏಟಿನಿಂದ ಸಾಯುವಾಗ—ನನ್ನ ಕರ್ತವ್ಯವನ್ನು ನಾನು ಮಾಡಿದ್ದೇನೆ-ಎಂದು ನೆಲ್ಸನ್‌ನು ಹೇಳಿರುವುದೂ ಕೇವಲ ಶ್ಲಾಘ್ಯವಾಗಿದೆ.

ತುಂಬಿದ ಕೊಡವು ತುಳುಕುವದಿಲ್ಲವೆಂಬಂತೆ ನಿಜವಾಗಿಯೂ ಯೋಗ್ಯರಾದವರು ನಿಗರ್ವಿಗಳಾಗಿಯೇ ಇರುವರು. ನಿಗರ್ವಿತ್ವದಲ್ಲಿ ನಿಜವಾದುದು ಕಪಟವಾದುದು ಎಂದು ಎರಡು ವಿಧಗಳುಂಟು. ನಿಷ್ಕಪಟವಾದುದರಲ್ಲಿ ಮೌನವೂ ಶಾಂತಿಯೂ ತುಂಬಿರುವುವು. ಕಪಟಯುಕ್ತವಾದ ನಿಗರ್ವಿತ್ವದಲ್ಲಿ ಜಂಬವೂ ಹರಟೆಯೂ ಹೆಚ್ಚು. ಇತರರಲ್ಲಿರುವ ಗುಣವನ್ನು ಗ್ರಹಿಸುವುದು, ಸ್ವಸ್ವರೂಪ ಪರಿಜ್ಞಾನ, ಯೋಗ್ಯವಾದ ತಿಳುವಳಿಕೆ, ಇಂಥವುಗಳ ಮೂಲಕ ನಿಗರ್ವಿತ್ವವನ್ನು ಪಡೆಯಬಹುದಲ್ಲದೆ ಅದನ್ನು ಸುಲಭವಾಗಿ ವೃದ್ಧಿಪಡಿಸಿಕೊಳ್ಳಲೂ ಬಹುದು.

(15) ದಯೆ—

ಇತರರಿಗೆ ಒಳ್ಳೆಯದನ್ನು ಮಾಡಬೇಕೆಂಬುದೇ ದಯೆಯು. ಇದು ಕ್ರೌರ್ಯಕ್ಕೆ ವಿರುದ್ಧವಾದದರ್ಮ. ಯಾವಾಗಲೂ ದಯೆಯ ಜತೆಯಲ್ಲಿ ಪ್ರೀತಿಯಿದ್ದೇ ಇರುವುದು. ತಾನೇ ಹೆಚ್ಚು ಎಂಬದುರಭಿಮಾನ ಎಲ್ಲವೂ ತನಗೇ ಆಗಬೇಕೆಂಬ ಸ್ವಾರ್ಥಪರತೆ, ದ್ವೇಷ, ಹೊಟ್ಟೇಕಿಚ್ಚು ಇಂತಹ ದುರ್ಗುಣಗಳಿರುವವರಲ್ಲಿ ಈ ದಯಾಗುಣವು ಹುಟ್ಟುವುದು ಕಡಿಮೆ. ಆದುದರಿಂದ ದಯೆಯಿರುವ ಮನುಷ್ಯರಲ್ಲಿ ಪ್ರಾಯಶಃ ಈ ಕೆಟ್ಟ ಗುಣಗಳಿರುವುದಿಲ್ಲ. ಅನ್ಯಾಯದಿಂದ ಇತರರಿಗೆ ಏನಾದರೂ ಕೇಡಾಗುತ್ತಿರುವುದನ್ನು ಕಣ್ಣಾರೆ ನೋಡಿದರೂ ಅದನ್ನು ತಪ್ಪಿಸುವುದಕ್ಕೆ ಯತ್ನಿಸದಿರುವುದು ಕೂಡ ನಿರ್ದಯೆಯೆನಿಸುವುದು. ಇದು ಕಠಿಣಹೃದಯವನ್ನು ಸೂಚಿಸುವುದು, ತಾವು ಇತರರಿಗೆ ಕೆಡಕು ಮಾಡದಿದ್ದರೆ ದಯೆಯಿಂದ ನಡೆದಂತೆಯೇ ಆಗುವುದೆಂದು ಕೆಲವರು ಹೇಳುವರು. ಇದು ತಿಳಗೇಡಿತನದಿಂದ ಉಂಟಾದ ದುರಭಿಪ್ರಾಯವು.

ದಯೆಗೆ ಪ್ರೀತಿಯೇ ಮುಖ್ಯ ಕಾರಣವು. ಆದುದರಿಂಗಲೇ ಬಾಲ್ಯದಿಂದಲೂ ತಾಯ್ತಂದೆಗಳು ಒಡಹುಟ್ಟಿದವರು ಇಂಥವರನ್ನು ಪ್ರೀತಿಸುತ್ತ ಬರುವುದರಿಂದ ಮುಂದಕ್ಕೆ ಎಲ್ಲರನ್ನೂ ಪ್ರೀತಿಸುವ ಅಭ್ಯಾಸವುಂಟಾಗು

ವುದು. ಇತರರಲ್ಲಿ ದಯೆಯಿಡುವುದೆಂದರೆ ಕೇವಲ ದೊಡ್ಡ ಕೆಲಸಗಳನ್ನೇ ಮಾಡಿ ಮರುಕವನ್ನು ತೋರಿಸಬೇಕೆಂಬುದೇನೂ ಇಲ್ಲ. ದಯೆಯಿಂದ ಎಂಥ ಸಣ್ಣ ಪುಟ್ಟ ಕೆಲಸಗಳನ್ನಾದರೂ ಮಾಡಬಹುದು. ಅದಿಲ್ಲದೆ ದೊಡ್ಡದೊಡ್ಡ ಕೆಲಸಗಳನ್ನೇ ಮಾಡಿ ದಯಾಗುಣವನ್ನು ತೋರಿಸೋಣ ವೆಂದು ನಾವು ಎದುರುನೋಡುತ್ತಿದ್ದರೆ ದಯೆಯಿಂದ ಮಾಡಬಹುದಾದ ಹಲವು ಸಣ್ಣ ಪುಟ್ಟ ಕೆಲಸಗಳನ್ನು ನಡೆಯಿಸಲಿಕ್ಕೆ ಆಗದೆಹೋದೀತು. ಆದುದರಿಂದ ಯಾವ ಅಲ್ಪಕಾರ್ಯವನ್ನೇ ಆದರೂ ದಯೆಯಿಂದ ಮಾಡುತ್ತಾ ಬಂದರೆ ಅದರಿಂದ ಬರುವ ಪುಣ್ಯವೂ ಹೆಚ್ಚಾಗಿಯೇ ಇರುವುದು, ಒಂದು ದೊಡ್ಡ ಕ್ಷಾಮ ಬಂದರೆ ಆಗ ಬಡವರಿಗೆ ಸಹಾಯ ಮಾಡೋಣವೆಂದು ನಿರೀಕ್ಷಿಸಿಕೊಂಡು ಈಗ ಸುಮ್ಮನಿರುವುದಕ್ಕೆ ಬದಲಾಗಿ ಬಾಯಾರಿದವರಿಗೆ ನೀರು ಕೊಡುವುದು, ಹಸಿದವಂಗೆ ಅನ್ನವನ್ನಿಡುವುದು, ರೋಗಿಗಳನ್ನುಪ ಚರಿಸುವುದು, ಸಂಕಟಪಡುತ್ತಿರುವವರಿಗೆ ಸಹಾಯುಮಾಡುವುದು, ಪ್ರಬಲ ದಿಂದ ದುರ್ಬಲರಿಗೆ ಆಗುವ ಹಿಂಸೆಯನ್ನು ತಪ್ಪಿಸುವುದು, ವ್ಯಸನಪಡುತ್ತಿರು ವವರಿಗೆ ಸಮಾಧಾನ ಹೇಳುವುದು ಇಂಥ ಸಣ್ಣ ಪುಟ್ಟ ಕೆಲಸಗಳಿಂದಲಾ ದರೂ ನಮ್ಮ ದಯೆಯನ್ನು ತೋರಿಸುವುದು ಮೇಲಲ್ಲವೆ?

ದಯೆಯನ್ನು ತೋರ್ಪಡಿಸುವುದರಲ್ಲಿ ಎರಡು ಮಾರ್ಗಗಳುಂಟು— (೧) ದಯಾಮಯವಾದ ಕಾರ್ಯಗಳನ್ನು ಮಾಡಿಕೊಟ್ಟು ಸಹಾಯಮಾಡು ವುದು, (೨) ದಯಾಸೂಚಕಗಳಾದ ಮಾತುಗಳನ್ನಾದರೂ ಆಡಿ ಮರುಗು ವುದು. ಇವೆರಡನ್ನೂ ನಮಗಿಂತ ಮೇಲ್ಪಟ್ಟವರಲ್ಲೂ ಸರಿಸಮಾನಸ್ಕಂಧ ರಲ್ಲೂ ತೋರಿಸಿದಾಗ ಇದಕ್ಕೆ ಉಪಚಾರವೆಂಬ ಹೆಸರು ಬರುವುದು. ನಮ ಗಿಂತ ದುರ್ಬಲರಲ್ಲಿ ಉಪಯೋಗಿಸಿದಾಗ ಮಾತ್ರ ದಯೆಯೆಂಬ ಹೆಸರು ಬರುವುದು ಆದರೆ ಹೀಗೆ ಹೆಸರುಗಳು ಬದಲಾಯಿಸಿದರೂ ಇದರಿಂದ ಆಗತಕ್ಕ ಫಲವೇನೋ ಒಂದೇ.

ಕೆಲಸಗಳಲ್ಲಿ ಸ್ವತಃ ಸಹಾಯ ಮಾಡಿಕೊಟ್ಟು ದಯೆಯನ್ನು ತೋರ್ಪಡಿಸುವುದಕ್ಕೆ ತಕ್ಕ ಚೈತನ್ಯವಿಲ್ಲದವರು ವಾಗ್ರೂಪದಿಂದಲಾದರೂ ಇದನ್ನು ತೋರಿಸಬಹುದು, ದಯೆಯು ಯಾವರೂಪದಲ್ಲಿ ತೋರಬೇಕಾದರೂ ಹೃದಯವು ಒಳ್ಳೆಯದಾಗಿರಬೇಕು. ನಾವು ಏಕೆ ದಯಾಳುಗಳಾಗಿರಬೇಕು ? ಈ ಪ್ರಶ್ನೆಗೆ ಉತ್ತರ ಹೇಳುವುದು ಅಷ್ಟೇನೂ ಕಷ್ಟವಲ್ಲ. ಲೋಕದಲ್ಲಿ ಪ್ರತಿಯೊಬ್ಬರಿಗೂ ರೋಗ, ಶೋಕ, ಭಯ ಮೊದಲಾದವುಗಳಲ್ಲಿ ಯಾವುದೊಂದು ತೊಂದರೆಯಾದರೂ ಇದ್ದೇ ಇರುವುದಷ್ಟೆ ಹೊರಗೆ ನೋಡಿದರೆ ಎಷ್ಟೋ ಸುಖಿಗಳಾಗಿ ನಮ್ಮ ಕಣ್ಣಿಗೆ ಕಾಣತಕ್ಕ ಎಂಥವರಿಗೂ ಯಾವುದಾದರೊಂದು ಬಗೆಯ ಮನೋವ್ಯಥೆಯಾದರೂ ಇಲ್ಲದೆ ಇರುವುದಿಲ್ಲ. ಅಂಥವರು ನಮಗೆ ಗೋಚರವಾದ ಬಳಿಕ ನಾವು ಅವರ ವಿಷಯದಲ್ಲಿ ಕಾರ್ಯದಿಂದ ನಡೆಯದೆ ಅನುತಾಪವನ್ನು ತೋರಿಸಬೇಕಾದುದು ನಮ್ಮ ಕರ್ತವ್ಯ. ಆದರೆ ಯಾರಾರಿಗೆ ಏನೇನು ವ್ಯಥೆಯಿರುವುದೆಂಬುದು ಎಷ್ಟೋವೇಳೆ ನಮಗೆ ಗೋಚರವಾಗದೆಯೇ ಇರುವುದೂ ಉಂಟು. ಆದುದರಿಂದ ನಾವು ನಮ್ಮ ಸ್ವಭಾವವನ್ನೇ ದಯಾಮಯವನ್ನಾಗಿ ಮಾಡಿಕೊಂಡಿದ್ದರೆ ಇತರರಿಗೆ ಸರ್ವದಾ ಹಿತವನ್ನೇ ಆಚರಿಸಲು ಅನುಕೂಲವಾಗುವುದು. ಹಾಗಿಲ್ಲದೆ ನಾವು ಕ್ರೂರಸ್ವಭಾವವನ್ನು ಪಡೆದಿದ್ದು ಇತರರ ವ್ಯಥೆಯು ನಮಗೆ ಗೊತ್ತಾಗದೆಯೂ ಇದ್ದಾಗ ನಾವೇನಾದರೂ ದುಡುಕಿ ಮಾತಾಡಿದರೆ ಹಸಿಯ ಹುಣ್ಣಿನಮೇಲೆ ಉಪ್ಪುನೀರು ಚಿಮುಕಿಸಿದಂತೆ ಆಗಿ ಅವರ ಮನೋವ್ಯಥೆಯು ನಮ್ಮ ಕ್ರೌರ್ಯದಿಂದ ಮತ್ತಷ್ಟು ಹೆಚ್ಚುವ ಸಂಭವವುಂಟು. ದಯೆಯಿಂದ ನುಡಿಯುವ ನುಡಿಯೂ ಕೂಡ ಇತರರಿಗೆ ಮನಶ್ಶಾಂತಿಯನ್ನೂ ತೃಪ್ತಿಯನ್ನೂ ಉಂಟುಮಾಡಿ ಅವರ ಖೇದವನ್ನು ತಗ್ಗಿಸುವುದು. ಸಮಯದಲ್ಲಿ ಆಡಿದ ' ಅಯ್ಯೋ ಪಾಪ ' ಎಂದು ಅನುತಾಪವನ್ನು ಸೂಚಿಸುವ ಒಂದು ಮೃದುವಾದ ಮಾತೂ ಇತರರಿಗೆ ಎಷ್ಟೋ

ಸಂತೋಷವನ್ನುಂಟುಮಾಡುವುದು. ಈ ಪ್ರಕಾರವು ಕೂಡ ಕತ್ತಲೆಯಲ್ಲಿರತಕ್ಕವರಿಗೆ ದೀಪವನ್ನೊದಗಿಸಿಕೊಟ್ಟಂತೆ ಸಹಾಯಕವಾಗುವುದು. ದಯಾಮಯವಾದ ಮಾತುಗಳನ್ನು ಯಾರಿಗೆ ಬೇಕಾದರೂ ಹೇಳಬಹುದು. ಆದರೆ ದಯೆಯನ್ನು ಕಾರ್ಯರೂಪದಲ್ಲಿ ತೋರಿಸುವಾಗಲೇನೋ ಬಲು ಎಚ್ಚರಿಕೆಯಿಂದಿರಬೇಕು. ಇಲ್ಲದಿದ್ದರೆ ದಯೆಯು ಅಪಾತ್ರದಲ್ಲಿ ವಿನಿಯೋಗವಾಗುವುದರಿಂದ ಎಷ್ಟೋವೇಳೆ ಬಹಳ ಅನರ್ಥಗಳಿಗೆ ಅವಕಾಶವುಂಟಾಗುವುದು. ಕೊಲೆಪಾತಕಿಯನ್ನು ಕನಿಕರದಿಂದ ಶಿಕ್ಷಿಸದೆ ಬಿಟ್ಟುಬಿಡುವುದು, ದೇಹಶಕ್ತಿಯುಳ್ಳ ಸೋಮಾರಿಗಳಿಗೆ ಸುಖಜೀವನಮಾಡಿಸುವುದು. ಇಂಥವು ಲೋಕಕಂಟಕವಾದ ಕಾರ್ಯಗಳು. ದಯಾಮಯವಾದ ಕಾರ್ಯಗಳನ್ನು ಮಾಡುವುದಕ್ಕೆ ಎಷ್ಟೋ ಸಂದರ್ಭಗಳು ದೊರೆಯುವುವು. ಇತರರು ಹೊತ್ತಿರುವ ಹೊರೆಯನ್ನಿಳಿಯಿಸುವುದು, ತಾಯ್ತಂದೆಗಳಿಗೂ ಇತರ ವೃದ್ಧರಿಗೂ ಸಹಾಯಮಾಡುವುದು, ಪರಸ್ಥಳದವರಿಗೆ ದಾರಿಯನ್ನು ತೋರಿಸುವುದು, ಓದುಬರಹ ಬಾರದವರಿಗೆ ಕಾಗದವನ್ನು ಓದಿ ಹೇಳುವುದು, ಅಥವಾ ಬರೆದುಕೊಡುವುದು, ರೈಲ್ವೆ ಸ್ಟೇಷನ್ನಿನಲ್ಲಿರುವಾಗಲಾದರೆ ಅಶಕ್ತರಿಗೆ ಟಿಕೆಟ್ ತಂದುಕೊಡುವುದು, ಅಕಸ್ಮಾತ್ತಾಗಿ ಯಾರಿಗಾದರೂ ಪೆಟ್ಟಾದರೆ ತನ್ನಿಂದ ಆಗುವಷ್ಟು ಸಹಾಯಮಾಡುವುದು, ಎಡವಿ ಬಿದ್ದವರನ್ನು ನೋಡಿ ನಗದೆ ಮೇಲಕ್ಕೆತ್ತುವುದು, ಕೈಲಾಗದಿದ್ದರೆ ಅನುತಾಪ ಸೂಚಕವಾದ ಒಂದು ಮಾತನ್ನಾದರೂ ಆಡುವುದು. ನಿರಾಶರಾದವರನ್ನು ಪ್ರೋತ್ಸಾಹಿಸಿ ಹುರಿದುಂಬಿಸುವುದು, ಇಂಥವುಗಳೆಲ್ಲಾ ದಯೆಯ ಕೆಲಸಗಳೇ. ಅಂತು ನಮ್ಮಿಂದ ಇತರರಿಗೆ ದೈಹಿಕ ಅಥವಾ ಮಾನಸಿಕವಾದ ಯಾವ ವೇದನೆಯೂ ಆಗಕೂಡದಲ್ಲದೆ ಸಾಧ್ಯವಾದ ಮಟ್ಟಿಗೂ ಏನಾದರೂ ಸಹಾಯ ಮಾಡಬೇಕು.

ಮೂಕಪ್ರಾಣಿಗಳನ್ನು ಹೆಚ್ಚಾಗಿ ದುಡಿಸುವುದು, ಸರಿಯಾಗಿ ಪೋಷಿಸದಿರುವುದು, ವ್ಯಥಾ ಗಾಬರಿಮಾಡಿ ಹೆದರಿಸುವುದು, ವಿನೋದ, ಸ್ವಪೌರುಷ

ಪ್ರಕಾಶ, ಇಂಥ ಉದ್ದೇಶಗಳಿಗಾಗಿ ಯಾವ ವಿಧದಿಂದಲಾದರೂ ಅವನ್ನು ನೋಯಿಸುವುದು, ಇಂಥವುಗಳೆಲ್ಲಾ ಬಲು ಹೀನಾಯವಾದ ಹೇಡಿ ಕೆಲಸಗಳು. ಅನೇಕ ಮೂಕಪ್ರಾಣಿಗಳು ನಮಗೆ ಎಷ್ಟೋ ಸಹಾಯಮಾಡುತ್ತಿರುವುವು. ಅವಕ್ಕೆ ನಾವು ಎಷ್ಟು ಕೃತಜ್ಞರಾಗಿದ್ದರೂ ಸಾಲದು. ಲೋಕದಲ್ಲಿ ಮನುಷ್ಯನಿಗೆ ಸಂಪತ್ತು ಹೆಚ್ಚುವುದಕ್ಕೆ ಜೀವರತ್ನಗಳಾದ ಪಶುಗಳೇ ಮುಖ್ಯ ಸಹಾಯಕಗಳೆಂದು ಒಬ್ಬ ವಿದ್ವಾಂಸನು ಹೇಳಿರುವನು. ಅವನ್ನು ನಾವು ದಯೆಯಿಂದ ಕಾಣುತ್ತಿದ್ದರೆ ಅವೂ ನಮ್ಮಲ್ಲಿ ಪ್ರೀತಿಯನ್ನೂ ಸ್ವಾಮಿಭಕ್ತಿಯನ್ನೂ ತೋರಿಸುವುವು. ಭೂತದಯೆಯಿಂದ ನಮ್ಮ ಯೋಗ್ಯತೆಯೂ ನಡತೆಯೂ ಹೆಚ್ಚುಗೌರವವನ್ನು ಪಡೆವುವು. ಅವು ನಮಗಿಂತಲೂ ಕೀಳು ಎಂದುತಿರಸ್ಕರಿಸಿ ತೊಂದರೆ ಪಡಿಸಬಾರದು. ಇದಕ್ಕೆ ಬದಲಾಗಿ ಅವುಗಳಲ್ಲಿ ಕನಿಕರವಿಡಬೇಕು. ದೇವರ ಸೃಷ್ಟಿಯಲ್ಲಿ ಎಲ್ಲಾ ಪ್ರಾಣಿಗಳೂ ಸಮಾನವೇ. ಹೀಗಿರುವಲ್ಲಿ ಅವುಗಳಲ್ಲೊಬ್ಬನಾಗಿ ಕೊಂಚ ವಿಚಾರಶಕ್ತಿಯುಳ್ಳ ಮನುಷ್ಯನು ಅವುಗಳನ್ನು ಹಿಂಸಿಸಿದರೆ ದೇವರಿಗೆ ಕೋಪಬರುವುದಿಲ್ಲವೆ? ಕೆಲವರುಮಾಂಸಾಹಾರ ದೇಹಾಲಂಕಾರ ಇಂಥ ಸ್ವಾರ್ಥಗಳಿಗಾಗಿ ಪ್ರಾಣಿಗಳನ್ನು ಕೊಲ್ಲುವರು. ಇದೂ ಅಧರ್ಮವೇ. ಪ್ರಾಣಿಹಿಂಸೆಗೆ ಸಂಬಂಧಪಟ್ಟ ಕ್ರೂರವಾದ ಕಥೆಗಳನ್ನೂ ಕೂಡ ಮಕ್ಕಳ ಮುಂದೆ ಹೇಳದಿರುವುದು ಒಳ್ಳೆಯದು.

ದಯಾಳುಗಳಾದವರು ಇತರ ವಿಷಯವಾಗಿ ಯಾವ ತುಚ್ಛವಾದ ಮಾತುಗಳನ್ನೂ ಆಡುವುದಿಲ್ಲ. ಮತ್ತು ಈ ಮಾತುಗಳನ್ನಾಡಿದರೆ ಇವರೇನೆಂದುಕೊಳ್ಳುವರೋ ಎಂದು ಯೋಚಿಸಿ ಬಲು ಎಚ್ಚರಿಕೆಯಿಂದ ಮಾತಾಡುವರು. ದಯಾಳುವಾದ ಮನುಷ್ಯನು ಸತ್ತುಹೋದರೂ ಜನಗಳು ಆತನ ದಯಾಗುಣವನ್ನು ಮರೆಯದೆ ಚಿರಕಾಲ ಕೊಂಡಾಡುವರು.

ದಯೆಯು ಕ್ರೌರ್ಯಕ್ಕೆ ವಿರುದ್ಧವಾದುದೆಂದು ಮೊದಲೇ ಹೇಳದೆಯಷ್ಟೆ. ಆ ಕ್ರೌರ್ಯದ ವಿಷಯವಾಗಿಯೂ ಸ್ವಲ್ಪ ತಿಳಿಯೋಣ—ಯಾರೇ

ಆಗಲಿ ಕ್ರೌರ್ಯದಿಂದ ನಡೆಯುವುದಕ್ಕೆ ಸಾಮಾನ್ಯವಾಗಿ ತಿಳವಳಿಕೆ ಸಾಲದಿರುವುದೇ ಮುಖ್ಯವಾದ ಕಾರಣವು. ಅಸೂಯೆ, ಸಿಡುಕು, ಕೋಪತಾಪಗಳು, ಇಂಥವುಗಳಿಗೆ ಮನಸ್ಸಿನಲ್ಲಿ ಅವಕಾಶಕೊಡಬಾರದು. ಏಕೆಂದರೆ—ಇವು ಕ್ರೂರ ಬುದ್ಧಿಯನ್ನು ಹುಟ್ಟಿಸುವುವು ಇತರರು ಸಹಜವಾಗಿ ಮಾಡಿದುದನ್ನು ಕೂಡ ತಪ್ಪಾಗಿ ಎಣಿಸುವುದು, ಅಪ್ರಸನ್ನತೆ, ಚೇಷ್ಟೆ, ದ್ರೋಹಚಿಂತೆ, ಪರದೂಷಣೆ, ಜಗಳ ಇಂಥವುಗಳೆಲ್ಲಾ ಕ್ರೌರ್ಯದ ವರ್ಗಕ್ಕೇ ಸೇರಿದುವುಗಳು. ಇತರರು ತಮಗಿಂತಲೂ ದುರ್ಬಲರೆಂದು ತಿಳಿದು ತಿಳಿದೂ ಉದ್ದೇಶ ಪೂರ್ವಕವಾಗಿ ಅವರನ್ನು ಹೊಡೆದು, ಬೈದು, ಅಥವಾ ಕುಚೇಷ್ಟೆ ಮೊದಲಾದುವನ್ನು ಮಾಡಿ ನೋಯಿಸುವುದು ಬಹಳ ಪಾಪಕೃತ್ಯವು. ಒಬ್ಬ ಮನುಷ್ಯನು ಮತ್ತೊಬ್ಬನನ್ನು ಪ್ರತ್ಯಕ್ಷವಾಗಿ ಹೊಡೆಯದೆಯೇ ಇದ್ದರೂ ಇತರ ವಿಧಗಳಲ್ಲಿ ಅವನಿಗುಂಟುಮಾಡುವ ಯಾತನೆಯು ಅನಿರ್ವಚನೀಯವಾಗಿರಬಹುದು ದೇವರು ಇತರರಿಗಿಂತ ಮೇಲಾದ ಶಕ್ತಿಗಳನ್ನು ಕೊಟ್ಟಿರುವುದು ಆ ದುರ್ಬಲರನ್ನು ನೋಯಿಸುವುದಕ್ಕಲ್ಲ ನಮ್ಮ ಕೈಲಾದ ಮಟ್ಟಿಗೂ ಅವರಿಗೆ ಸಹಾಯಮಾಡುವುದಕ್ಕೆ ಎಂಬುದನ್ನರಿತು ನಡೆಯಬೇಕು.

## 16 ಮೈತ್ರಿ.

ಲೋಕದಲ್ಲಿ ಸ್ನೇಹಕ್ಕೆ ಮೀರಿದ ಬಾಂಧವ್ಯವೇ ಇಲ್ಲವೆನ್ನುವರು. ಎಷ್ಟೋ ಸಂದರ್ಭಗಳಲ್ಲಿ ತಾಯ್ತಂದೆಗಳಿಗಿಂತಲೂ ಪತ್ನೀ ಪುತ್ರರಿಗಿಂತಲೂ ಮಿತ್ರರೇ, ಪರಮಾಪ್ತರು ಎಂದು ಭಾವಿಸಿರುವುದಕ್ಕೆ ಎಷ್ಟೋ ಉದಾಹರಣೆಗಳುಂಟು. ತತ್ರಾಪಿ ಕಷ್ಟಕಾಲದಲ್ಲಿ ಇತರರೆಲ್ಲರೂ ಕೈಬಿಟ್ಟಾಗ ನಿಜವಾದ ಸ್ನೇಹಿತರೇನೋ ಎಂದಿಗೂ ಕೈಬಿಡುವುದಿಲ್ಲ. ಮೈತ್ರಿಯೆಂಬ ಚಿನ್ನದ ಯೋಗ್ಯತೆಯನ್ನು ಬಡತನವೆಂಬ ಒರೆಗಲ್ಲಿನಿಂದ ಪರೀಕ್ಷಿಸಬೇಕೆಂಬ ಗಾದೆಯೇ ಉಂಟು.

ಉತ್ತಮರ ಸ್ನೇಹವು ಶುಕ್ಲಪಕ್ಷದ ಚಂದ್ರನಂತೆಯೂ ಮಧ್ಯಾಹ್ನೋತ್ತರದ ನೆರಳಿನಂತೆಯೂ ಕಾಲಕ್ರಮೇಣ ಬೆಳೆಯುತ್ತ ಬರುವುದಲ್ಲದೆ ಕನ್ನಡಿಯಂತೆ ಪ್ರಕಾಶವಾಗಿ ಸೌಜನ್ಯವನ್ನು ಪ್ರತಿಫಲಗೊಳಿಸುವುದು. ಅಧಮರ ಸ್ನೇಹವಾದರೋ ಕೃಷ್ಣಪಕ್ಷದ ಚಂದ್ರನಂತೆಯೂ ಪ್ರಾತಃಕಾಲದ ನೆರಳಿನಂತೆಯೂ ಕಾಲಕ್ರಮೇಣ ಕ್ಷೀಣಿಸುತ್ತಲೂ ಮಸಿಯು ಓಡಿನಂತೆ ಕೊಳಕುತನದಿಂದ ಕೂಡಿಯೂ ಇರುವುದು. ಪರಸ್ಪರ ಪ್ರೀತಿಸುವುದು ನಂಬುವುದು, ದಯೆಯಿಂದ ನಡೆದು ಕೊಳ್ಳುವುದು ಇಂಥವುಗಳೆಲ್ಲಾ ಮೈತ್ರಿಯ ಕಾರ್ಯಗಳು.

ನಿಜವಾದ ಮೈತ್ರಿಯು ಸುಖಕಾಲದಲ್ಲಿ ಸಂತೋಷವನ್ನು ಹೆಚ್ಚಿಸುವುದು. ಹೇಗೆಂದರೆ—ನಾವು ಸುಖಪಡುತ್ತಿರುವಾಗ ನಮ್ಮನ್ನು ನೋಡಿ ಮೆಚ್ಚತಕ್ಕವರಿದ್ದರೆ ನಮ್ಮ ಮನೋಲ್ಲಾಸವು ಇನ್ನೂ ಹೆಚ್ಚುವುದು. ಮತ್ತು ಮನುಷ್ಯರು ಇನ್ನು ಯಾವ ವಿಧಗಳಲ್ಲಿಯೂ ಅನುಭವಿಸಲಾರದಂಥ ಶುದ್ಧವಾದ ಸಂತೋಷವು ಸತ್ಪುರುಷರ ಮೈತ್ರಿಯಿಂದ ಲಭಿಸುವುದು. ಇತರ ವಿಧಗಳಿಂದ ಉಂಟಾಗುವ ಸಂತೋಷವಾದರೋ ಯಾವುದಾದರೂ ಒಂದು ಬಗೆಯ ಕಳಂಕದಿಂದ ಬೆರೆದೇ ಇರುವುದು. ಮೈತ್ರಿಯಿಂದ ಆಗುವ ಸಂತೋಷದಲ್ಲಿ ಅಂಥನ್ಯೂನತೆಯಿಲ್ಲದಿರುವುದರಿಂದಲೇ ಅದು ಶುದ್ಧವಾದುದೆನ್ನುವರು. ಅಲ್ಲದೆ ಮೈತ್ರಿಯು ಕಷ್ಟಕಾಲದಲ್ಲಿ ಉಂಟಾಗುವ ದುಃಖವನ್ನು ತಗ್ಗಿಸುವುದು. ಹೇಗೆಂದರೆ:—ಮಿತ್ರರಾದವರು ನಮ್ಮ ದುಃಖದಲ್ಲಿ ಒಂದು ಭಾಗವನ್ನು ತಾವು ಹೊತ್ತುಕೊಂಡು, ಅದರ ಭಾರವು ನಮಗೆ ಕಡಮೆಯಾಗುವಂತೆ ಮಾಡುತ್ತಾರೆ. ಅಂಥ ಸಮಯಗಳಲ್ಲಿ ಮಿತ್ರರ ಸಮಾಧಾನೋಕ್ತಿಗಳಿಂದ ನಮಗೆ ಈ ಪ್ರಪಂಚದಲ್ಲಿ ಪುನಃ ಆಸೆಯು ಹುಟ್ಟುವುದು. ಸ್ನೇಹಿತರ ಬುದ್ಧಿವಾದದಂತೆ ನಡೆಯುವುದರಿಂದ ಪ್ರಾಪ್ತವಾದ ಅಥವಾ ಆಗಬಹುದಾದ ಎಷ್ಟೋ ಅಪಾಯಗಳನ್ನು ತಪ್ಪಿಸಿ

ಕೊಳ್ಳಬಹುದು. ಗೆಳೆಯರು ಆಪತ್ಕಾಲಗಳಲ್ಲಿ ನಮ್ಮನ್ನು ಧೈರ್ಯಗೊಳಿಸಿ ಹುರಿದುಂಬಿಸುವುದರಿಂದ ಎಂಥ ಶತ್ರುಗಳನ್ನಾದರೂ ಗೆಲ್ಲಬಲ್ಲ ಹುಮ್ಮಸ್ಸುಂಟಾಗುವುದು. ಆದುದರಿಂದಲೇ ಯೋಗ್ಯರಾದ ಕೆಲವು ಮಿತ್ರರನ್ನು ಪಡೆದಿದ್ದರೂ ಸಮಯದಲ್ಲಿ ಹಲವು ಶತ್ರುಗಳನ್ನಾದರೂ ಸೋಲಿಸಬಹುದೆನ್ನುವರು. ಮೈತ್ರಿಯುಮರುಕ ಮೊದಲಾದ ಇತರ ಸುಗುಣಗಳಿಗೂ ಮನಸ್ಸಿನಲ್ಲಿ ಅವಕಾಶವನ್ನು ಕಲ್ಪಿಸಿರುವುದರಿಂದ ಜೀವನಿಗೆ ಒಳ್ಳೆಯ ಸಂಸ್ಕಾರವನ್ನುಂಟುಮಾಡುವುದು. ಪರೋಪಕಾರ ಬುದ್ಧಿಯನ್ನು ಹೆಚ್ಚಿಸಿ ಲೋಕದಲ್ಲಿ ಎಲ್ಲರೂ ಪರಸ್ಪರ ಸಹಾಯಕರಾಗಿ ಬಾಳುವುದಕ್ಕೆ ತಕ್ಕ ಅನುಕೂಲ್ಯವನ್ನು ಕಲ್ಪಿಸುವುದು. ಮತ್ತು ಲೋಕದಲ್ಲಿ ಬದುಕಿರುವುದೇ ಬೇಸರವೆಂಬ ಭಾವನೆಗೆ ಅವಕಾಶವನ್ನು ಕೊಡದೆ ಜೀವಮಾನದಲ್ಲಿ ಹಿತಾಚರಣೆಯನ್ನೇ ಉಂಟುಮಾಡುತ್ತಲಿರುವುದು.

ಅನೇಕರು ಸ್ನೇಹಿತರಂತೆ ನಟಿಸುತ್ತಾರೆ. ಆದರೆ ನಿಜವಾದ ಸ್ನೇಹಕ್ಕೆ ಉದಹರಿಸಲ್ಪಡಬಹುದಾದಂಥ ಮಿತ್ರರ ಸಂಖ್ಯೆಯು ಅತಿವಿರಳ. ರಾಮಸುಗ್ರೀವರು, ಕೃಷ್ಣಕುಚೇಲರು, ಕರ್ಣದುರ್ಯೋಧನರು, ಅಮಾತ್ಯರಾಕ್ಷಸಚಂದನದಾಸರು ಇಂಥವರು ಸ್ನೇಹಕ್ಕೆ ಉತ್ಕೃಷ್ಟವಾದ ಮಾದರಿಯಾಗಿದ್ದಾರೆ. ಜನರಸ್ಥಿತಿ, ಅವರಗುಣ, ನಡೆನುಡಿಗಳು ಇವುಗಳ ಮೇಲೆ ಅಂಥವರ ಸ್ನೇಹದ ಯೋಗ್ಯತೆಯು ಎಷ್ಟುಮಟ್ಟಿನದೆಂಬುದನ್ನು ನಿರ್ಧರಿಸಬಹುದು. ಮೈತ್ರಿಯು ನಿಜವಾಗಿಯೂ ಶಾಶ್ವತವಾಗಿಯೂ ಇರಬೇಕಾದರೆ ಕೆಲವು ಅಂಶಗಳು ಆವಶ್ಯಕ.—ಮಿತ್ರರಾಗತಕ್ಕವರಲ್ಲಿ ಕುಲ, ಶೀಲ, ರೂಪ, ವಯಸ್ಸು, ಅಧಿಕಾರ, ಐಶ್ವರ್ಯ ಇಂಥವುಗಳಲ್ಲೆಲ್ಲಾ ಒಂದು ವಿಧವಾದ ಸಮತೆಯಿರಬೇಕು. ಕಡೆಗೆ ಇವುಗಳೊಳಗೆ ಕೆಲವು ಅಂಶಗಳಲ್ಲಾದರೂ ಸಮತೆಯಿರಬೇಕು. ಇದಕ್ಕೆ ಹಲವು ಪ್ರತಿಷೇಧಗಳೂ ಇದ್ದಾವು. ಆದರೆ ಅಸಮತೆಯಿದ್ದರೆ ಒಬ್ಬರಿಂದ ಮತ್ತೊಬ್ಬರಿಗೆ ತೊಂದರೆಯಾಗುವುದೇ ಹೆಚ್ಚು.

ದ್ರೋಣ ದ್ರುಪದರ ಮೈತ್ರಿಯು ಇದಕ್ಕೆ ದೃಷ್ಟಾಂತವಾಗಿದೆ. ಇತರರು ತಮಗೆ ಸ್ನೇಹಿತರಾಗಿರಬೇಕೆನ್ನುವರು ತಾವೂ ಸ್ನೇಹಪರರಾಗಿರಬೇಕು. ಮತ್ತು ಸ್ನೇಹಿತರಿಂದ ಅಕಸ್ಮಾತ್ತಾಗಿ ನಡೆದುಹೋದ ಅಚಾತುರ್ಯವನ್ನು ಪರಿಗಣಿಸಕೂಡದು. ಔದಾರ್ಯವೂ ತಾಳ್ಮೆಯೂ ನಿಜವಾದ ಮೈತ್ರಿಗೆ ಮುಖ್ಯ ಸಹಾಯಕಗಳು. ಮಿತ್ರರೊಡನೆ ಮರ್ಯಾದೆಯಿಂದ ವರ್ತಿಸಬೇಕಾದುದೂ ಮುಖ್ಯ. ಎಷ್ಟೋ ಜನರು ಈ ವಿಷಯವನ್ನು ತಾತ್ಸಾರಮಾಡಿ ಅಯೋಗ್ಯ ವಾದ ಮಾತುಗಳಿಂದ ಪರಸ್ಪರ ವಿನೋದಕ್ಕೆಂದು ಬೈದಾಡುವರು. ಇದು ಮರ್ಯಾದೆಗೆ ವಿರುದ್ಧ. ಮೈತ್ರಿಯಿದ್ದಮಾತ್ರಕ್ಕೇ ಒಳ್ಳೆಯ ನಡತೆಗೆ ವಿರುದ್ಧ ವಾಗಿ ಅಮರ್ಯಾದೆಯಿಂದ ನಡೆಯಬಹುದೆಂದು ತಿಳಿಯಬಾರದು. ಮರ್ಯಾದೆ ಯನ್ನು ಮತ್ತೂ ಚೆನ್ನಾಗಿ ಆಚರಿಸಬೇಕಲ್ಲವೆ? ವಾಕ್ಯುದ್ಧಿ ಸಾಲದವರನೇ ಕರು ಮೈತ್ರಿಯನ್ನೇ ಕಳೆದುಕೊಳ್ಳಬೇಕಾದೀತು.

ಮೈತ್ರಿಯು ನಿಷ್ಕಪಟವಾಗಿರದೆ ಸಹಜವಾಗಿ ಇರಬೇಕು. ಹಾಗಿಲ್ಲದೆ ಯಾವುದಾದರೊಂದು ಪ್ರಯೋಜನೋದ್ದೇಶದಿಂದ ಮಾತ್ರ ಉಂಟಾಗಿದ್ದರೆ ಅದು ಕಾಲಕ್ರಮದಲ್ಲಿ ನಾಶವಾಗುವುದಲ್ಲದೆ ವಿರಸಕ್ಕೂ ಆಸ್ಪದವನ್ನುಂಟುಮಾಡೀತು. ಕೆಲವರ ಮೈತ್ರಿಯು ಕಾಲ, ಸಂದರ್ಭ, ಅನನುಕೂಲತೆ ಇಂಥ ಕಾರಣಗಳಿಂದ ಹಿಂದಿನವರಲ್ಲಿ ಕಡಿಮೆಯಾಗುತ್ತ ಮುಂದಿನವರಲ್ಲಿ ಬೆಳೆಯುತ್ತ ಬರುವುದೂ ಉಂಟು. ಕೆಲವರಿಗೆ ಅನೇಕ ಸ್ನೇಹಿತರನ್ನು ಪಡೆದಿರಬೇಕೆಂಬುದು ಇಷ್ಟ. ಮಿತ್ರರು ಅನೇಕರಿದ್ದರೆ ಹೆಚ್ಚು ಕಾಲ ಕಳೆಯಬೇಕಾಗುವ ಸಂಭವವುಂಟು. ಆದುದರಿಂದ ಮನುಷ್ಯನು ಎಲ್ಲರಲ್ಲಿಯೂ ಒಳ್ಳೆಯವನಾಗಿರುವುದಕ್ಕೆ ಯತ್ನಿಸಬೇಕು. ಆಪ್ತಮಿತ್ರರು ಕೆಲವರು ಮಾತ್ರ ಇದ್ದರೂ ಸಾಕು ಎಂದು ಹಲವರು ಅಭಿಪ್ರಾಯ ಪಡುವರು. ಮಿತ್ರರ ಸಂಖ್ಯೆಯು ಕಡಿಮೆಯಾಗಿದ್ದರೆ ಪರಸ್ಪರ ಪ್ರೀತಿಯು ಅವಿಚ್ಛಿನ್ನವಾಗಿ ಹೆಚ್ಚುವುದು. ಆದರೆ ಅತ್ಯಲ್ಪ ಸಂಖ್ಯೆಯುಳ್ಳ ಮಿತ್ರರನ್ನು

ಮಾತ್ರ ಪಡೆದಿರುವುದರಿಂದ ಕೆಲವು ತೊಂದರೆಗಳೂ ಉಂಟು. ಆದುದರಿಂದ ಕಾಲಾನುಸಾರವಾಗಿ ಸ್ನೇಹಿತರ ಸಂಖ್ಯೆಯು ಹೆಚ್ಚಲೂ ಬಹುದೆಂಬುದು ಇನ್ನು ಕೆಲವರಮತವು. ಆದರೆ ಹೀಗೆ ಹೊಸಹೊಸ ಸ್ನೇಹಿತರುಗಳನ್ನು ಪಡೆಯುತ್ತ ಬರುವುದರಿಂದ ಹಳಬರ ಮೈತ್ರಿಗೆ ಯಾವ ಕೊರತೆಯೂ ಉಂಟಾಗಬಾರದು. ಮತ್ತು ಹೊಸಸ್ನೇಹಿತರುಗಳನ್ನು ಪಡೆಯುವುದರಲ್ಲಿ ಹಳಬರಾದ ಮಿತ್ರರು ಯಾವ ಆಕ್ಷೇಪಣೆಯನ್ನೂ ಮಾಡಕೂಡದು. ಒಂದು ವೇಳೆ ಹಾಗೆ ಆಕ್ಷೇಪಿಸುವವರಾದರೆ ಅವರು ನಿಜವಾದ ಮಿತ್ರರೇ ಅಲ್ಲ. ಅಂಥವರನ್ನು ತೊರೆಯುವುದೇ ಮೇಲು. ನ್ಯಾಯವಾಗಿ ನೋಡುವಲ್ಲಿ ಮಿತ್ರರ ಸಂಖ್ಯೆಯು ಹೆಚ್ಚುವುದರಿಂದ ಹಿಂದಿನವರಿಗೆ ಯಾವತೊಂದರೆಯೂ ಇಲ್ಲ. ಒಂದು ದೀಪದಿಂದ ಮತ್ತೊಂದು ದೀಪವನ್ನೂ ಅದರಿಂದ ಇನ್ನೊಂದನ್ನೂ ಹೀಗೆ ಎಷ್ಟು ದೀಪಗಳನ್ನು ಹೊತ್ತಿಸಿದರೂ ಅವಕ್ಕೆ ಪರಸ್ಪರವಾಗಿ ಯಾವ ಉಪಹತಿಯಾದರೂ ಉಂಟೆ? ಆದರೂ ಒಟ್ಟಿನಲ್ಲಿ ನೋಡಿದರೆ ಸ್ನೇಹಿತರ ಸಂಖ್ಯೆಯು ಮಿತಿಮಿರಾರದಿರುವಂತೆ ನೋಡಿಕೊಳ್ಳುವುದೇ ಉಚಿತವು.

## 17. ಸ್ಪರ್ಧೆ.

'ನೆರೆನೋಡಿ ಬಾಳೋ ನಿರ್ಭಾಗ್ಯವುರುವ' ಎಂದು ಲೋಕದಲ್ಲಿ ಗಾದೆಯೇ ಉಂಟು. ಇತರರು ಕೆಲಸಮಾಡುತ್ತಿರುವುದನ್ನು ಕಂಡು ತಾನೂ ಅವರನ್ನು ಮೀರಿಸಬೇಕೆಂದೋ ಅಥವಾ ಅವರಿಗಿಂತ ತಾನು ಕಡಮೆಯಾಗಕೂಡದೆಂದೋ ಹೋರಾಡತಕ್ಕುದೇ ಸ್ಪರ್ಧೆಯೆನಿಸುವುದು. ಒಬ್ಬರಂತೆ ತಾನೂ ಆಗಬೇಕೆಂಬ ಆಸೆಯಿರುವುದೇ ಇದಕ್ಕೆ ಕಾರಣವು. ಇತರರನ್ನು ನೋಡಿ ಅವರಂತೆ ಆಚರಿಸುವುದರಲ್ಲಿ ಎರಡು ವಿಧಗಳುಂಟು ಅವರಂತೆ ನಾವೂ ಆಗಬೇಕೆಂದು ಮನಃಪೂರ್ವಕವಾಗಿ ಯತ್ನಿಸಿ ಶ್ರದ್ಧೆಯಿಂದ ಆಚರಿಸತಕ್ಕದು ಮೊದಲನೆಯ ವಿಧ. ಈ ರೀತಿಯಾಗಿ ಮಾಡತಕ್ಕವರಿಗೆ ಮಾದರಿಯಾಗಿರುವವರಲ್ಲಿ ಗೌರವ ಬುದ್ಧಿಯಿರುವುದು. ದೊಡ್ಡವರಂತೆ ನಡೆಯಲು

ತನಗೆ ಯೋಗ್ಯತೆಯಿಲ್ಲದಿದ್ದರೂ ಡಂಬಕ್ಕಾಗಿ ತನ್ನ ಶಕ್ತಿಗೆ ಮೀರಿದ ಸಾಹಸಮಾಡುವುದು ಎರಡನೆಯ ವಿಧವು. ಕೇವಲ ಬಡವನು ಸಾಹುಕಾರ ನಂತೆ ಕಾಣಿಸಿಕೊಳ್ಳಬೇಕೆಂದು ತನ್ನಲ್ಲಿದ್ದುದನ್ನೆಲ್ಲಾ ಮಾರಿ ಬೆಲೆಯಾದ ಉಡುಪುಗಳನ್ನು ಧರಿಸುವುದು ಇದಕ್ಕೆ ಉದಾಹರಣೆ. ಆದರೆ ಈ ಮೇಲೆ ಹೇಳಿದಂಥ ಎರಡುವಿಧವಾದ ನಡೆವಳಿಕೆಗಳೂ ಸ್ಪರ್ಧೆಯಿಂದ ಹುಟ್ಟಿದವುಗ ಳಲ್ಲವೆಂದು ಕೆಲವರು ಹೇಳುವರು.

ಬಬ್ಬರಿಗಿಂತ ತಾವು ಕಡಿಮೆಯಾಗಕೂಡದೆಂಬ ಜೋಡಿಯಿಂದ ಸರಿ ಸಮಾನಸ್ಕಂದರು ಮಾತ್ರ ಹೋರಾಡತಕ್ಕುದೇ ನಿಜವಾದ ಸ್ಪರ್ಧೆಯು. ಸ್ಪರ್ಧೆಯಲ್ಲಿ ತಾನೂ ಮೇಲ್ಮೆಯನ್ನು ಪಡೆಯಬೇಕೆಂಬುದು ಮಾತ್ರ ಮು ಖ್ಯೋದ್ದೇಶವಾಗಿರಬೇಕೇ ವಿನಾ ಇತರರ ಏಳಿಗೆಯಲ್ಲಿ ಅಸೂಯೆಪಟ್ಟು ತನಗೆ ಏನೂ ಫಲವಿಲ್ಲದಿದ್ದರೂ ಅಥವಾ ಅಲ್ಪಸ್ವಲ್ಪ ಫಲವಾಗುವ ಸಂಭವ ವಿದ್ದರೂ ಅವರನ್ನು ನಾಶಮಾಡಬೇಕೆಂಬ ಉದ್ದೇಶವಿರಬಾರದು.

ನ್ಯಾಯವಾದಸ್ಪರ್ಧೆಯೊಂದಿದ್ದರೆ ಎಂಥ ದುರ್ಬಲರಿಗೂ ಕೆಲಸ ಮಾಡುವುದಕ್ಕೆ ಉಲ್ಲಾಸವು ಹುಟ್ಟಿ ಬಲವು ಹೆಚ್ಚುತ್ತದೆ. ಹಿಡಿದ ಕೆಲಸ ವನ್ನು ಬಿಡದೆ ಸಾಧಿಸಲೇ ಬೇಕೆಂಬ ದೃಢಸಂಕಲ್ಪವು ಹುಟ್ಟುತ್ತದೆ. ಮತ್ತು ಇತರರಿಗಿಂತ ಹಿಂದೆ ಬಿದ್ದು ನಗೆಗೀಡಾದೇವಲ್ಲಾ ಎಂಬ ಭೀತಿಯು ಹುಟ್ಟುತ್ತದೆ. ಇಂಥ ಗುಣಗಳೆಲ್ಲಾ ಮನುಷ್ಯಗೆ ಶ್ರೇಯಸ್ಸಾಧಕಗಳು. ಲೋಕದಲ್ಲಿ ಒಬ್ಬರನ್ನು ನೋಡಿ ಒಬ್ಬರು ಸ್ಪರ್ಧೆಯಿಂದ ಕೆಲಸಮಾಡುವ ರೂಢಿಯಿಲ್ಲದಿದ್ದಲ್ಲಿ—ಎಲ್ಲರೂ—'ಆದಷ್ಟಾಗಲಿ ಹೋದಷ್ಟುಹೋಗಲಿ'— ಎಂದು ಉದಾಸೀನರಾಗಿಯೇ ಇದ್ದು ಬಿಡುತ್ತಿದ್ದುದರಿಂದ ಪ್ರಪಂಚ ವ್ಯಾಪಾರ ಗಳಲ್ಲಿ ಯಾವುದೂ ಈಗಿರುವ ಮಟ್ಟಿಗೆ ಮುಂದಕ್ಕೆ ಬರುತ್ತಲೇ ಇರಲಿಲ್ಲ. ಸ್ಪರ್ಧೆಯೊಂದಿಲ್ಲದಿದ್ದರೆ ನಾಗರಿಕತೆಯು ಇಷ್ಟು ಮಟ್ಟಿಗೆ ತಲೆಯೆತ್ತುವುದ ಕ್ಕಾಗುತ್ತಿದ್ದಿತೆ?

ಸ್ಪರ್ಧೆಯು ಸಮಸ್ತ ವಿಷಯಗಳಲ್ಲೂ ಅತ್ಯಾವಶ್ಯಕವಾದ ಸಾಧನವೇ ಆದರೂ ಇದರ ಮಹಿಮೆಯು ಈ ಮುಂದೆ ಹೇಳುವಂಥ ಕೆಲವು ಅಂಶಗಳಲ್ಲೇನೋ ಸ್ಪಷ್ಟವಾಗಿ ತೋರುವುದು. (1) ಗ್ರಂಥರಚನೆ—ಗ್ರಂಥಗಳನ್ನು ರಚಿಸುವುದರಲ್ಲಿ ಜನಗಳು ಬಹಳ ಮಟ್ಟಿಗೂ ಒಬ್ಬರನ್ನು ನೋಡಿ ಮತ್ತೊಬ್ಬರು ಹೋರಾಡುತ್ತ ಬಂದುದರಿಂದ ಅನೇಕ ಗ್ರಂಥಗಳು ಹುಟ್ಟಿ ಲೋಕದಲ್ಲಿ ಎಷ್ಟೋ ವಿಧವಾದ ತಿಳವಳಿಕೆಯು ಹೆಚ್ಚುವುದಕ್ಕೆ ಅವಕಾಶವಾಯಿತು. ಮತ್ತು ಅನೇಕ ಗ್ರಂಥಕರ್ತರೂ ಒಳ್ಳೆಯ ಕವಿಗಳಾಗಿ ಶಾಶ್ವತವಾದ ಕೀರ್ತಿಯನ್ನು ಪಡೆದರು.

## 2. ವ್ಯಾಪಾರ.

ವ್ಯಾಪಾರದಲ್ಲಿಯೂ ಸ್ಪರ್ಧೆಯು ಬಲು ಮುಖ್ಯ. ಇದರಲ್ಲಿ ಸ್ಪರ್ಧೆ ಹುಟ್ಟಿದರೆ ಪದಾರ್ಥಗಳು ಕೇವಲ ಅಗ್ಗವಾಗಿ ಅಥವಾ ತಗ್ಗಾಗಿ ಆಗದೆ ಕಾಲ ದೇಶ ಉತ್ಪತ್ತಿ ಇತ್ಯಾದಿಗಳಿಗೆ ತಕ್ಕ ಹಾಗೆ ಒಂದು ಸರಿಯಾದ ಬೆಲೆಗೆ ದೊರೆಯುವುವು. ಮತ್ತು ಪದಾರ್ಥಗಳ ಯೋಗ್ಯತೆಯೂ ಹೆಚ್ಚಬೇಕಾಗುವುದು. ಒಂದು ಬಡಕಲು ಕುದುರೆಯನ್ನೂ ಒಂದು ಒಡಕಲು ಬಂಡಿಯನ್ನೂ ಇಟ್ಟುಕೊಂಡಿರತಕ್ಕವನೊಬ್ಬನು ಘಂಟೆಗೆ ಒಂದು ರೂಪಾಯಂತೆ ಬಾಡಿಗೆಯನ್ನು ಕೊಡಬೇಕೆಂದು ಕೇಳುತ್ತಿರುವಾಗ ಬಲವಾದ ಕುದುರೆಯನ್ನೂ ಒಳ್ಳೆಯ ಬಂಡಿಯನ್ನೂ ಪಡೆದಿರತಕ್ಕವನೂ ಕೂಡ ಅದೇ ದರದಂತೆ ಬಾಡಿಗೆಗೆ ಬರುತ್ತೇನೆಂದರೆ ಜನಗಳು ಈ ಎರಡನೆಯವನ ಬಂಡಿಗೇ ಹೋಗುವರು ಆಗ ಮೊದಲನೆಯವನು ತನ್ನ ವ್ಯಾಪಾರವನ್ನುಳಿಸಿಕೊಳ್ಳುವುದಕ್ಕೋಸ್ಕರ ತಾನೂ ಒಳ್ಳೆಯಗಾಡಿ ಕುದುರೆಗಳನ್ನಿಡಲೇಬೇಕಾಗುವುದು. ಇದರ ಪರಿಣಾಮವು ಪ್ರಯಾಣಿಕರಿಗೆ ಅನುಕೂಲವಾಗುವುದು. ವ್ಯಾಪಾರದಲ್ಲಿ ಹೀಗೆ ಸ್ಪರ್ಧೆಯಿಲ್ಲದೆ ಸ್ವೇಚ್ಛಾಪ್ರವರ್ತನೆಯೇ ಇರುತ್ತಿದ್ದರೆ ಹೇಳದುದೇ ಕ್ರಯವಾಗಿ ವಸ್ತುಗಳನ್ನು ಕೊಳ್ಳುವವರಿಗೆ ಅಥವಾ ಉತ್ಪತ್ತಿ

ಮಾಡುವವರಿಗೆ ತುಂಬನಷ್ಟವಾಗಬೇಕಾಗುತ್ತಿದ್ದಿತು. ಪೂರ್ವದಲ್ಲಿ ಇಂಡಿಯಾದೇಶದ ಹೊರವ್ಯಾಪಾರವೆಲ್ಲಾ ಫೋರ್ಚುಗೀಸರ ಕೈಯಲ್ಲೇ ಇದ್ದಾಗಲೂ ಅಲ್ಲಿಂದೀಚೆಗೆ ನಮ್ಮ ಇಂಡಿಯಾ ದೇಶದ ರಾಜರುಗಳು ಹೊರದೇಶಗಳವರ ಕಂಪೆನಿಗೆ ವ್ಯಾಪಾರವನ್ನು ಬಿಟ್ಟುಗುತ್ತಿಗೆಗೆ ಕೊಡುತ್ತಿದ್ದಾಗಲೂ ಹೀಗೆಯೇ—ಅಂದರೆ—ಅವರು ಹೇಳಿದುದೇ ಕ್ರಯವಾಗುತ್ತಿದ್ದಿತು. ಮತ್ತು ಅವರು ಎಂಥ ಕೀಳ್ತರದ ಪದಾರ್ಥಗಳನ್ನೇ ತಂದು ಒದಗಿಸಿದರೂ ಬೇರೆ ಮಾರ್ಗವಿಲ್ಲದುದರಿಂದ ಅವನ್ನೇ ಕೊಂಡುಕೊಳ್ಳಬೇಕಾಗಿರುತಿದ್ದಿತು. ಈಗಲಾದರೋ ಈ ನಮ್ಮ ಇಂಡಿಯಾದೇಶದ ಸಂಗಡ ಯಾರುಬೇಕಾದರೂ ವ್ಯಾಪಾರವಮಾಡಬಹುದೆಂದು ಆಗಿರುವುದರಿಂದ ಎಲ್ಲಾದೇಶಗಳ ವ್ಯಾಪಾರಿಗಳೂ ಇತರರು ತಯಾರಿಸುವ ವಸ್ತುಗಳಿಗಿಂತ ತಮ್ಮವೇ ಮೇಲಾಗಿರಬೇಕೆಂದು ಇತರರಿಗಿಂತಲೂ ಅಗ್ಗವಾಗಿಮಾರಿ ಹೆಚ್ಚು ಗಿರಾಕಿಗಳನ್ನೂ ಸಂಪಾದಿಸಬೇಕೆಂದೂ ಚಕೋರಿಯಿಂದ ಹೋರಾಡುತ್ತಿರವರು.

3. ಕೈಗಾರಿಕೆಗಳು ಅಭಿವೃದ್ಧಿಗೆ ಬರುವುದಕ್ಕೂ ಸ್ಪರ್ಧೆಯು ಸಹಾಯಕಾರಿಯು ಹೇಗೆಂದರೆ—ಅನೇಕರು ನಿರ್ಮಿಸಿದ ವಸ್ತುಗಳನ್ನೆಲ್ಲಾ ತರಿಸಿ ಒಂದುಕಡೆಗೆಸೇರಿಸಿ ಪರಸ್ಪರ ಹೋಲಿಸಿ ಮೇಲಾದ ಪದಾರ್ಥಗಳನ್ನು ತಯಾರಿಸಿದವರಿಗೆ ಬಹುಮಾನ ಮೊದಲಾದುವುಗಳನ್ನು ಕೊಡುವುದರ ಮೂಲಕ ಪ್ರೋತ್ಸಾಹವನ್ನುಂಟುಮಾಡುತ್ತ ಬಂದರೆ ಸ್ಪರ್ಧೆಯು ಹುಟ್ಟಿ ಕಸಬುದಾರರೆಲ್ಲಾ ಮೇಲಾದ ವಸ್ತುಗಳನ್ನೇ ಹೆಚ್ಚಾಗಿ ತಯಾರಿಸಲು ಅನುಕೂಲವಾಗುವುದು. ಈ ವಿಧವಾದ ವಸ್ತುಪ್ರದರ್ಶನಕ್ಕೆ ಇಂಗ್ಲಿಷಿನಲ್ಲಿ ಎಗ್ಸಿಬಿಷನ್ ಎಂದು ಹೆಸರು. ಇದನ್ನು 1851 ನೆಯ ಇಸವಿಯಲ್ಲಿ ಶ್ರೀಮನ್ಮಹಾರಾಜ್ಞಿಯವರಾಗಿದ್ದ ವಿಕ್ಟೋರಿಯ ಚಕ್ರವರ್ತಿನಿಯವರು ಹೊಸದಾಗಿ ಏರ್ಪಡಿಸಿದರು. ಅಲ್ಲಿಂದೀಚೆಗೆ ಅನೇಕರು ಹಲವು ಬಗೆಯ ಯಂತ್ರಗಳು ಮೊದಲಾದುವನ್ನು ಹೊಸಹೊಸದಾಗಿ ಕಂಡುಹಿಡಿಯುತಬಂದರು. ಇದರಿಂದ

ಅಂಥವರಿಗೆಲ್ಲಾ ಬಹುಮಾನಗಳು ದೊರೆಯುತ್ತ ಬಂದುದಲ್ಲದೆ ಲೋಕಕ್ಕೂ ದೊಡ್ಡ ಉಪಕಾರವಾಯಿತು.

4. ವಿದ್ಯಾಭ್ಯಾಸವಿಚಾರದಲ್ಲಂತು ಸ್ಪರ್ಧೆಯ ಮಹಿಮೆಯು ಇಷ್ಟಿಷ್ಟೆಂದು ಹೇಳಲಾಗದು. ಒಳ್ಳೆಯ ಚಟುವಟಿಕೆಯುಳ್ಳ ಮತ್ತು ಪಟುವಾದ ಒಬ್ಬ ಬಾಲಕನಿಗೆ ಶಕ್ತರಾದ ಒಬ್ಬರು ಅಥವಾ ಅನೇಕ ಉಪಾಧ್ಯಾಯರುಗಳನ್ನು ನೇಮಿಸಿ ಮನೆಯಲ್ಲಿಯೇ ಆ ಒಬ್ಬನಿಗೆ ಮಾತ್ರ ಪಾಠಹೇಳಿಸೋಣ. ಈ ಹುಡುಗನನ್ನು ಒಂದು ಪಾಠಶಾಲೆಯಲ್ಲಿ ಅನೇಕರೊಡನೆಸೇರಿ ವಿದ್ಯಾಭ್ಯಾಸ ಮಾಡುತ್ತಲಿರುವ ಸಾಮಾನ್ಯ ಬುದ್ಧಿಯುಳ್ಳ ಮತ್ತೊಬ್ಬ ಹುಡುಗನೊಡನೆ ಹೋಲಿಸಿ ನೋಡಿದರೆ ಮನೆಯಲ್ಲಿ ಓದುವ ಹುಡುಗನಿಗಿಂತಲೂ ಪಾಠಶಾಲೆಯಲ್ಲಿ ಓದತಕ್ಕವನೇ ಎಷ್ಟೋಮೇಲಾಗಿರುತ್ತಾನೆ. ಅವನ ಮೇಲ್ಮೆಗೆ ಸ್ಪರ್ಧೆಯೇ ಕಾರಣವು. ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳೂ ಒಬ್ಬರನ್ನು ನೋಡಿ ಒಬ್ಬರು ಸ್ಪರ್ಧೆಯಿಂದ ಕೆಲಸಮಾಡುವುದೇ ಆ ಎಲ್ಲಾ ಬಾಲಕರೂ ಅಭಿವೃದ್ಧಿಗೆ ಬರುವುದಕ್ಕೆ ಅವಕಾಶವಾಗುವುದು. ಅದರೆ ಉಪಾಧ್ಯಾಯರು ಅಯೋಗ್ಯರಾದರೆ ಬಾಲಕರಲ್ಲಿ ಪರಸ್ಪರ ಸ್ಪರ್ಧೆಯು ಹುಟ್ಟುವುದಕ್ಕೆ ಬದಲಾಗಿ ಅಸೂಯೆಯು ರೂಢಮೂಲವಾಗುವುದು.

ಮೇಲೆಹೇಳಿದ ವಿಷಯಗಳಲ್ಲಿ ಮಾತ್ರವಲ್ಲದೆ ಇನ್ನೂ ಇತರ ಎಷ್ಟೋ ವಿಷಯಗಳಲ್ಲಿ ಕೂಡ—ಕಡೆಗೆ ತಿರ್ಯಗ್ಜಂತುಗಳಲ್ಲಿ ಕೂಡ ಇದು ಬಹುಮಟ್ಟಿಗೂ ಕಾರ್ಯಕಾರಿಯಾಗಿರುವುದು. ಬಂಡಿಯನ್ನೆಳೆಯುವ ಎತ್ತುಗಳು, ಜೂಜಿನಕುದುರೆಗಳು ಕಾಳಗದ ಹುಂಜಗಳು, ಇಂಥವುಗಳು ಕೂಡ ಸ್ಪರ್ಧೆಯಿಂದ ಬಹುಮಟ್ಟಿಗೂ ಪಟ್ಟುಪಡುತ್ತವೆ. ಇಂಥ ಇತರ ಪ್ರಾಣಿಗಳಲ್ಲಿ ಕೂಡ ಸ್ಪರ್ಧೆಯು ಇಷ್ಟುಮಟ್ಟಿಗೆ ಕಾರ್ಯಕಾರಿಯಾಗಿರುವಲ್ಲಿ ಅನ್ಯಾದೃಶವಾದ ಬುದ್ಧಿಬಲವುಳ್ಳ ಮನುಷ್ಯರಿಗೆ ಇದರಿಂದ ಉಂಟಾಗತಕ್ಕ ಪ್ರಯೋಜನಗಳನ್ನು ಇಷ್ಟಿಷ್ಟೆಂದು ಹೇಳಲಾಗದು.

## (18) ಅಸ್ವಾರ್ಥಪರತೆ.

ಪ್ರಪಂಚದಲ್ಲಿ ದೊರೆಯುವ ಒಳ್ಳೆಯದೆಲ್ಲಾ ತನಗೊಬ್ಬನಿಗೇ ಆಗಬೇಕೆಂದು ಆಸೆಪಟ್ಟು ಅದಕ್ಕಾಗಿ ಪ್ರಯತ್ನಿಸತಕ್ಕವರೇ ಸ್ವಾರ್ಥಪರರು. ಇವರು ತಮ್ಮ ಸೌಖ್ಯವೊಂದೇ ಮುಖ್ಯವಾದುದೆಂದು ನೋಡುವರೇ ಹೊರತು ಅದರಿಂದ ಇತರರಿಗೆ ಎಷ್ಟು ಕಷ್ಟನಷ್ಟಗಳು ಸಂಭವಿಸುವುವೆಂಬುದನ್ನು ಸ್ವಲ್ಪವೂ ಮನಸ್ಸಿಗೆ ಹತ್ತಿಸಿಕೊಳ್ಳುವುದಿಲ್ಲ. ತನ್ನ ಮನೆಯವರು ಹೇಗಾದರೂ ಇರಲಿ ತಾನುಮಾತ್ರ ಸುಖವಾಗಿದ್ದರೆ ಸರಿ ಎನ್ನತಕ್ಕವನು ಪರಮನೀಚನು. ಇತರರು ಏನಾದರೂ ಆಗಿಹೋಗಲಿ ತನ್ನ ಮನೆಯವರೂ ತಾನೂಮಾತ್ರ ಸುಖವಾಗಿದ್ದರೆ ಸರಿಯೆನ್ನತಕ್ಕವನು ಮೊದಲನೆಯವನಿಗಿಂತ ಎಷ್ಟೋ ಮೇಲು. ಇತರ ಎಲ್ಲಾ ರಾಜ್ಯಗಳಗಿಂತಲೂ ತಮ್ಮ ರಾಜ್ಯವು ಉತ್ತಮಸ್ಥಿತಿಯಲ್ಲಿರಬೇಕೆನ್ನುವನು ಮೇಲಿನ ಇಬ್ಬರಿಗಿಂತಲೂ ಉತ್ತಮ.

ಹೀಗೆಯೇ ಸ್ವಾರ್ಥಪರತೆಯು ಬುದ್ಧಿಯು ಕ್ರಮೇಣ ಕಡಿಮೆಯಾಗುತ್ತಲೂ ದಯಾಮಯವಾದ ಪರೋಪಕಾರಬುದ್ಧಿಯು ಅದರ ಸ್ಥಳವನ್ನು ಆಕ್ರಮಿಸುತ್ತಲೂ ಬಂದಂತೆಲ್ಲಾ ಮನುಷ್ಯರು ಹೆಚ್ಚು ಹೆಚ್ಚಾಗಿ ಊರ್ಜಿತಸ್ಥಿತಿಗೆ ಬರುವರು. ಹಾಗಿಲ್ಲದೆ ತನ್ನ ಸುಖವೇ ಲೋಕಸುಖವೆಂದೂ ತನ್ನ ದಾರಿದ್ರ್ಯವೇ ಲೋಕದಾರಿದ್ರ್ಯವೆಂದೂ ಭಾವಿಸುವ ಮನುಷ್ಯನು ಅನುತಾಪವೇ ಇಲ್ಲದೆ ತನ್ನ ಜಾತಿಯ ಮೃಗಗಳನ್ನೇ ತಿಂದು ತೇಗುವಂಥ ತೋಳನಿಗಿಂತಲೂ ಕಡೆಯಾಗುವನು. ಹೇಗೆಂದರೆ ತೋಳನು ತಿಳುವಳಿಕೆಯಿಲ್ಲದ ಸ್ವಾಭಾವಿಕವಾಗಿ ಕ್ರೂರಬುದ್ಧಿಯುಳ್ಳ ತಿರ್ಯಗ್ಜಂತುವು. ಆದರೂ ಅದು ತಾನಾಗಿ ಸತ್ತ ಅಥವಾ ಇತರ ಮೃಗಗಳಿಂದ ಕೊಲ್ಲಲ್ಪಟ್ಟ ತೋಳವನ್ನು ಮಾತ್ರ ತಿನ್ನುವುದು. ಮನುಷ್ಯನಾದರೋ ಪ್ರಾಣಿಗಳೊಳಗೆಲ್ಲಾ ಶ್ರೇಷ್ಠನೆನಿಸಿಕೊಂಡು ಸರ್ವಾತಿಶಯವಾದ ಬುದ್ಧಿಶಕ್ತಿಯನ್ನೂ ವಿಚಾರಶಕ್ತಿಯನ್ನೂ

ಪಡೆದಿದ್ದರೂ ಬರೀಸ್ವಾರ್ಥಪರತೆಯಿಂದ ಇತರರನ್ನು ತೊಂದರೆಪಡಿಸುವಂಥ ದುಷ್ಪ್ರವರ್ತನೆಗೆ ಮನಸ್ಸು ಕೊಡುವುದು ಎಷ್ಟು ಹೀನಾಯ !

ಸ್ವಾರ್ಥಪರತೆಯು ಇಷ್ಟು ಕೆಟ್ಟದಾದರೂ ಈ ಮರ್ಮವನ್ನರಿಯದೆ ಎಷ್ಟೋ ಜನರು ಆಶಾಪಾಶಕ್ಕೆ ಸಿಲುಕಿಬಿದ್ದು ಲೋಕದಲ್ಲಿ ತಾವೇ ಶಾಶ್ವತವಾಗಿರುವೆವೆಂಬ ಭರವಸೆಯನ್ನಿಟ್ಟುಕೊಂಡು ತಾವು ಯಾರ ಸಹಾಯದಿಂದ ವೃದ್ಧಿಗೆ ಬಂದಿರುವರೋ ಅಂಥವರನ್ನು ಕೂಡ ತುಳಿದು ನಾಶಮಾಡಿ ಮುಂದಕ್ಕೆ ಬರಬೇಕೆಂದು ಯತ್ನಿಸಿರುವುದಕ್ಕೆ ಹಲವು ಉದಾಹರಣೆಗಳಿರುವುವು. ಅಕ್ಬರನಿಗೆ ಸೋದರಮಾವನಾದ ಬೈರಾಂಖಾನನು ಸೋದರಳಿಯ ಬಾಲ್ಯಕಾಲದಲ್ಲಿ ತಾನೇ ರಾಜ್ಯಭಾರಮಾಡುತಿದ್ದುದರಿಂದ ಅಧಿಕಾರದ ರುಚಿಯನ್ನು ಕಂಡು ಅಕ್ಬರನನ್ನೇ ಮೂಲೋತ್ಪಾಟನೆಮಾಡಬೇಕೆಂದು ಯತ್ನಿಸಿದನು ! ಹೈದರನು ತನ್ನನ್ನು ಸಿಪಾಯಿತನದಿಂದ ದಳಪತಿಯ ಪದವಿಯವರೆಗೂ ತಂದು ಅಭಿವೃದ್ಧಿಗೊಳಿಸಿದ ನಂಜರಾಜಯ್ಯನನ್ನು ಮತ್ತು ಮಹಾರಾಜರನ್ನೂ ಕೂಡ ಮೂಲೆಗೊತ್ತರಿಸಿ ಸ್ವಾರ್ಥಪರತೆಯಿಂದ ರಾಜ್ಯವನ್ನು ಆಕ್ರಮಿಸಿಕೊಂಡನು. ಸುರಾಜುದೌಲ, ಮೀರ್‌ಸಾದಕ್ ಮೊದಲಾದವರು ಎಷ್ಟೋವರ್ಷಗಳಾದರೂ ಅಪಕೀರ್ತಿಶರೀರದಿಂದ ಸಶ್ಲರಾಗಿ ಸರ್ವರ ನಿಂದೆಗೂ ಪಾತ್ರರಾಗುತ್ತಲೇ ಇದ್ದಾರೆ. ಕೆಲವರು ಎಳೆಯಮಕ್ಕಳು ಎದುರಿಗೆ ಬಂದುನಿಂತು ಕಣ್ಣುಕಣ್ಣು ಬಿಟ್ಟುಕೊಂಡು ನೋಡುತ್ತ ಇದ್ದರೂ ಅವರಿಗೆ ಸ್ವಲ್ಪವನ್ನು ಕೊಡದೆ ತಾವುಮಾತ್ರ ರುಚಿರುಚಿಯಾದ ಬಗೆಬಗೆಯ ಪದಾರ್ಥಗಳನ್ನು ಕಬಳಿಸುವರು ಅಯ್ಯೋ ಅವರಿಗೆ ಇದಕ್ಕೆ ಮನಸ್ಸು ಹೇಗೆಬರುವುದೊ !

ಮತ್ತೆ ಕೆಲವರು ತಮ್ಮಜತೆಯಲ್ಲಿ ಕುಳಿತಿರುವವರಿಗೆ ಕದಾನ್ನವನ್ನು ಹಾಕಿಸಿ ತಾವುಮಾತ್ರ ಮೃಷ್ಟಾನ್ನವನ್ನು ಗದಕುವರು. ಈ ಪಂತಿಭೇದಕ್ಕೂ ಸ್ವಾರ್ಥಪರತೆಯೇ ಕಾರಣವು. ಹಿರಿಯರು ಸತ್ತರೆ ತನಗೆ ಆಸ್ತಿಯು

ಹಕ್ಕು ಬಂದೀತಲ್ಲಾ ಎಂದು ಯೋಚಿಸುವಂಥ ಮಗನೂ ಕ್ಷಾಮ ಬಂದರೆ ತನ್ನ ಧಾರಣೆ ಹೆಚ್ಚುವುದರಿಂದ ತಾನು ಹಣಗಾರನಾಗಬಲ್ಲೆನೆಂದು ಹಾರೈಸುವ ವರ್ತಕ ಅಥವಾ ರೈತನೂ ಸ್ವಾರ್ಥ ಪರರೇ ಸರಿ ಯಾರಿಗೂ ದೇಹವುಕೂಡ ಸ್ಥಿರವಲ್ಲದಿರುವಲ್ಲಿ ಯಾವ ಸುಖವು ತಾನೆ ಈ ಪ್ರಪಂಚದಲ್ಲಿ ಶಾಶ್ವತವಾಗಿ ದೊರೆಕೀತು? ಇಷ್ಟಾದರೂ ಜನರು ಅಲ್ಪಕಾಲಿತವಾದ ಇಂಥಸುಖಕ್ಕೆ ಆಸೆಪಟ್ಟು ಇಂದ್ರಿಯುಪರವಶರಾಗುವದರಿಂದ ತಮ್ಮ ನಿರಂತರ ಸುಖವನ್ನೇ ಕಳೆದುಕೊಳ್ಳುವರು. ಪಂತಿಭೇದದಿಂದ ಪಾಪವನ್ನು ಪಡೆದು ಮರಣಾನಂತರ ತನ್ನ ಶವವನ್ನು ತಾನೇ ತಿನ್ನುತಿದ್ದ ಶ್ವೇತರಾಜನು ಇದಕ್ಕೆ ಒಳ್ಳೆಯ ದೃಷ್ಟಾಂತವಾಗಿದ್ದಾನೆ.

ಸ್ವಾರ್ಥಪರನು ಒಳ್ಳೆಯದೆಲ್ಲಾ ತನಗೇ ಆಗಬೇಕೆನ್ನುವನಾದುದರಿಂದ ಇತರರಿಗೆ ಸಲ್ಲಬೇಕಾದುದು ಕೂಡ ತನಗೇ ಸಲ್ಲಬೇಕೆಂದು ಹೇಳಿದಂತೆಯೇ ಆಯಿತು. ಆದುದರಿಂದ ಇವನ ಸ್ವಂತಸುಖಕ್ಕಾಗಿ ಇತರರಿಗೆ ತೊಂದರೆಯನ್ನು ಕೊಡದೆ ಇರಲಾರನು. ಇಂಥವರ ಸುಖಕ್ಕೋಸ್ಕರ ತಾವು ಕಷ್ಟವನ್ನು ಅನುಭವಿಸಬೇಕಾದ ಇತರರು ಈ ಸ್ವಾರ್ಥಪರರಾದ ಪ್ರಬಲರ ನಿರ್ಬಂಧಕ್ಕೆ ಒಳಪಟ್ಟು ಹೆದರಿಕೆಯಿಂದ ಯಾವ ಎದರುಮಾತನ್ನು ಆಡದೆ ಒಂದುವೇಳೆ ಸುಮ್ಮನಿದ್ದರೂ ಮನಸ್ಸಿನಲ್ಲೇನೋ ನೊಂದುಕೊಳ್ಳದೆ ಇರುವುದೇ ಇಲ್ಲ. ಈರೀತಿಯಾದ ಅವರ ಸಂತಾಪವು ಈ ಸ್ವಾರ್ಥಪರವನ್ನು ಇಹದಲ್ಲಿಯೇ, ಅಥವಾ ಕಡೆಗೆ ಪರದಲ್ಲಿಯಾದರೂ ಅಧೋಗತಿಗೆ ತರದೆ ಇರಲಾರದು.

ಅಸ್ವಾರ್ಥಪರವಶರಾದ ಮನುಷ್ಯರಾದರೊ ಸಮಯ ಸಂದರ್ಭಗಳು ದೊರೆತಾಗ ತಮ್ಮ ಕೈಯಿಂದ ಆಗುವ ಮಟ್ಟಿಗೂ ಇತರರಿಗೆ ಸಹಾಯವನ್ನು ಮಾಡಿಯೇ ಮಾಡುವರು. ಇದರಿಂದ ಅವರ್ಗಿಗೆ ಎರಡುವಿಧವಾದ ಸಂತೋಷವುಂಟು. ಒಂದನೆಯದು—ತಾವು ಇತರರಿಗೆ ಸಹಾಯಮಾಡಿ ಕೃತಾರ್ಥ

ರಾದವಲ್ಲಾ ಎಂಬತೃಪ್ತಿ. ಎರಡನೆಯದು—ತಮ್ಮಿಂದ ಉಪಕಾರವನ್ನು ಪಡೆದವರು ಅನುಭವಿಸುವ ಸುಖವನ್ನು ನೋಡುವುದರಿಂದ ಉಂಟಾಗುವ ಆನಂದ ಸ್ವಾರ್ಥಪರನಾದ ಮನುಷ್ಯನಿಗೆ ಎಂದಿಗಾದರೂ ಇಂಥಸುಖಸಂತೋಷಗಳು ದೊರತಾವೆ? ಯಾರೂಸ್ವಾರ್ಥಪರವಶರಾಗಿರಕೂಡದೆಂಬ ನೀತಿಯನ್ನು ನಾವು ಕಾಗೆಯಿಂದ ನೋಡಿ ತಿಳದುಕೊಳ್ಳಬಹುದು. ಕಾಗೆಯು ಎಲ್ಲಿ ಏನು ಒಂದು ಅಗುಳನಷ್ಟು ತಿಂಡಿಯು ದೊರೆಯುವಂತಿದ್ದರೂ 'ಕಾ ಕಾ' ಎಂದು ಕಡೆಪಕ್ಷ ಒಂದೆರಡುಸಲವಾದರೂ ತನ್ನ ಗುಂಪಿನ ಪ್ರಾಣಿಗಳನ್ನೆಲ್ಲಾ ಕೂಗಿ ಕರೆಯದೆ ಅದು ತಾನುಮಾತ್ರವೇ ಆ ತಿಂಡಿಗೆ ಎಂದಿಗೂ ಎರಗುವುದಿಲ್ಲ. ಆಹಾ! ಇದೆಂಥ ಒಳ್ಳೆಯಗುಣವು! ಯಾವಜನಾಂಗದಲ್ಲಿ ಸ್ವಾರ್ಥಪರತೆಯು ಬೇರೂರಿರುವುದೋ ಅದರಲ್ಲಿ ಎಂದಿಗೂ ಐಕಮತ್ಯವು ಹುಟ್ಟುವುದಿಲ್ಲವಾಗಿ ಎಂದಿಗೂ ಅದು ಊರ್ಜಿತಸ್ಥಿತಿಗೆ ಬರುವುದಿಲ್ಲ. ಸ್ವಾರ್ಥಪರತೆಯನ್ನು ಬಿಟ್ಟುಕೆಲಸಮಾಡಿದರೆ ಜಗದ್ವಿಖ್ಯಾತರಾಗಿ ಬಾಳಬಹುದೆಂಬುದಕ್ಕೆ ಇಂಗ್ಲಿಷ್ ಜನಾಂಗವು ಆದರ್ಶಪ್ರಾಯವಾಗಿರುವುದು. ಸ್ವಾರ್ಥಪರರನ್ನು ಯಾರೂ ಪ್ರೀತಿಸುವುದಿಲ್ಲ. ಎಲ್ಲರೂ ಅಂದರೆ ಹೊರಗಿನವರು ಮಾತ್ರವಲ್ಲದೆ ಮನೆಯವರು ಕೂಡ ಇವರನ್ನುಕಂಡರೆ ಬೇಸರಪಡುವರು. ಎಲ್ಲರೂ ಪ್ರೀತಿಸುವುದಕ್ಕೆ ಬದಲಾಗಿ ಹೆಚ್ಚಾಗಿ ದ್ವೇಷಿಸುವರು. ಮತ್ತು ನಿರ್ದಯೆಯಿಂದ ಕಾಣುವರು. ಸಂಘದವರಂತು ಇವರನ್ನು ಮೂಲೆಗೊತ್ತರಿಸುವರು ಆದುದರಿಂದ ಯಾರೂ ಸ್ವಾರ್ಥಪರರಾಗದೆ ಪರೋಪಕಾರಬುದ್ಧಿಯಿಂದ ನಡೆಯುವುದು ಶ್ರೇಯಸ್ಕರವು.

## 19 ಕೃತಜ್ಞತೆ.

ಇತರರು ನಮಗೆ ಮಾಡಿದ ಸಹಾಯಕ್ಕಾಗಿ ಸರ್ವದ ಅವರನ್ನು ಸ್ಮರಿಸಿಕೊಳ್ಳುವುದು ಕೃತಜ್ಞತೆಯೆನಿಸುವುದು. ಇದರಿಂದ ಉಪಕಾರಿಗಳ ಮನಸ್ಸು ಸಂತೋಷಪಡುವುದು. ಲೋಕದಲ್ಲಿ ಪ್ರತಿಯೊಬ್ಬರಲ್ಲಿಯೂ

ಕೃತಜ್ಞತೆಯೆಂಬ ಈ ಸದ್ಗುಣವು ಇದ್ದೇ ಇರಬೇಕು. ಪ್ರತಿಯೊಬ್ಬ ಮನುಷ್ಯನೂ ಆಹಾರ, ಉಡುವು, ವಾಸ, ತಿಳವಳಿಕೆ ಇಂಥ ಸಮಸ್ತ ವಿಷಯಗಳಲ್ಲೂ ಅನೇಕರಿಂದ ಪರಿಪರಿಯಾದ ಪ್ರಯೋಜನಗಳನ್ನು ಪಡೆಯಬೇಕಾಗಿರುವುದರಿಂದ ಯಾವ ವಿಧದಲ್ಲಿ ಯಾದರೂ ಅವನಿಗೆ ಇತರರ ಹಂಗು ಇದ್ದೇ ಇರುವುದು. ಆದುದರಿಂದ ಅವನು ಉಪಕಾರಿಗಳಿಗೆ ಕೃತಜ್ಞನಾಗಿರಲೇ ಬೇಕಾಗಿದೆ. ಈಗುಣವಿಲ್ಲದವನ ಜನ್ಮವು ವ್ಯರ್ಥ.

ನಾವು ಯಾರಿಂದ ಯಾವ ಸಹಾಯವನ್ನು ಪಡೆದರೂ ಸರಿಯಾದ ಸಂದರ್ಭ ದೊರೆತಾಗ ಅವರಿಗೆ ಏನಾದರೆ ಇಂದು ಪ್ರತ್ಯುಪಕಾರವನ್ನು ಮಾಡಬೇಕಾದುದು ನಮ್ಮ ಕರ್ತವ್ಯವು. ಆದರೆ ಹಾಗೆ ನಾವು ಪ್ರತ್ಯುಪಕಾರ ಮಾಡಿದ ಮಾತ್ರದಿಂದಲೇ ಹಂಗು ಹರಿಸಿಕೊಂಡಂತೆ ಆಗುವುದಿಲ್ಲ. ಹೇಗೆಂದರೆ—ನಾವು ಎಷ್ಟೇ ಪ್ರತ್ಯುಪಕಾರಗಳನ್ನು ಮಾಡಿದರೂ ಕೆಲವುವೇಳೆ ನಾವು ಪಡೆದ ಸಹಾಯದ ಶಾಲೆಯಲ್ಲಿ ಬಂದು ಕೋಟ್ಯಂಶಕ್ಕೂ ಎಣೆಯಾಗದೆ ಹೋಗುವುದುಂಟು. ಉದಾಹರಣೆಗಾಗಿ ತಾಯ್ತಂದೆಗಳ ವಿಷಯವನ್ನು ತೆಗೆದುಕೊಳ್ಳೋಣ.—ತಾಯಿಯು ಹತ್ತು ತಿಂಗಳವರೆಗೂ ನಮ್ಮನ್ನು ಗರ್ಭದಲ್ಲಿ ಹೊತ್ತು, ಬಳಿಕ ಹಾಲು ಕುಡಿಸಿ, ನೀರೆರೆದು, ಉಡಿಗೆಗಳನ್ನು ಡಿಸಿ, ತೊಡಿಗೆಗಳನ್ನು ತೊಡಿಸಿ ಮುದ್ದಾಡುತ್ತ ಎಷ್ಟೋ ಅಕ್ಕರೆಯಿಂದ ಸಾಕುವಳು. ತಂದೆಯು ದೇಹಶ್ರಮದಿಂದ ಅಥವಾ ಬುದ್ಧಿಶ್ರಮದಿಂದ ದುಡಿದು ಸಂಪಾದಿಸಿ ಅನ್ನವಸ್ತ್ರಗಳನ್ನು ತಂದು ಒದಗಿಸುವನು. ಅಲ್ಲದೆ ತನ್ನಿಂದ ಸಾಧ್ಯವಾಗುವ ಮಟ್ಟಿಗೂ ಒಳ್ಳೆಯ ನಡೆನುಡಿಗಳನ್ನು ಕಲಿಸಿ ವಿದ್ಯಾಭ್ಯಾಸವನ್ನು ಮಾಡಿಸುವನು. ಮತ್ತು ಮಕ್ಕಳು ಆರೋಗ್ಯಶಾಲಿಗಳೂ ಒಳ್ಳೆಯ ನಡತೆವಂತರೂ ಬುದ್ಧಿಶಾಲಿಗಳೂ ಆಗಿದ್ದರೆ ತಾಯ್ತಂದೆಗಳು ಅವರನ್ನು ನೋಡಿನೋಡಿ ಹಿಗ್ಗುವರು. ಮಕ್ಕಳಿಗೇನಾದರೂ ವ್ಯಾಧಿ ಸಂಭವಿಸಿ ಅವರು ನರಳುತ್ತಿರುವುದನ್ನು ಕಂಡರೆ ತಾಯಿ ತಂದೆಗಳು ಆ ವ್ಯಾ

ಧಿಯುಂತವುಗೇ ಸಂಭವಿಸಿದ್ದರೆ ಹೇಗೋ ಅದಕ್ಕಿಂತಲೂ ಹೆಚ್ಚಾಗಿ ಸಂಕಟ ಪಡುವರು. ಪುತ್ರಶೋಕವನ್ನು ತಾಳಲಾರದೇ ಧಶರಥ ಮೊದಲಾದ ಎಷ್ಟೋ ಜನರು ಪ್ರಾಣವನ್ನು ಕೂಡ ಕಳೆದುಕೊಂಡಿರುವರು. ಹೀಗೆ ಮಾತಾಪಿತೃಗಳಿಗೆ ಮಕ್ಕಳ ವಿಷಯದಲ್ಲಿರುವ ಪ್ರೀತಿಯುರುಣವನ್ನು ಮಕ್ಕಳು ಎಂಥ ಪ್ರತ್ಯುಪಕಾರಗಳಿಂದ ತಾನೆ ತೀರಿಸುವುದಕ್ಕೆ ಸಾಧ್ಯವಾದಿತು! ಆದರೆ ಹೀಗೆಂದು ಏನೂಮಾಡದೆ ಸುಮ್ಮನಿರಬಹುದೆ? ನಮ್ಮಿಂದ ಆಗುವಮಟ್ಟಿಗೂ ಭಕ್ತಿಶ್ರದ್ಧೆಗಳಿಂದ ಸೇವೆಸತ್ಕಾರಗಳನ್ನು ಮಾಡುತ್ತ ವಿನಯವಿಧೇಯತೆಗಳಿಂದ ಕಾಣುತ್ತಿರಬೇಕಲ್ಲದೆ ಮುಖ್ಯವಾಗಿ ಅವರನ್ನು ಮುಪ್ಪಿನಲ್ಲಿ ಚೆನ್ನಾಗಿ ಆದರಿಸಬೇಕು. ಮತ್ತು ಅವರಿಂದ ನಮಗೆ ಉಂಟಾಗಿರತಕ್ಕ ಉಪಕಾರಗಳನ್ನು ಸರ್ವದಾ ಸ್ಮೃತಿಪಥದಲ್ಲಿಟ್ಟುಕೊಂಡಿರಬೇಕು.

ಹೀಗೆಯೇ ವಿದ್ಯಾಗುರುಗಳು ವಿದ್ಯಾರ್ಥಿಗಳ ಕೃತಜ್ಞತೆಗೆ ಅರ್ಹರು. ಇವರು ಶಿಷ್ಯರಿಗೆ ಉತ್ತಮವಾದ ತಿಳವಳಿಕೆಯನ್ನುಂಟುಮಾಡುತ್ತ ಬುದ್ಧಿಶಕ್ತಿಗಣನ್ನು ಹೆಚ್ಚಿಸಿ ಅವರ ಅಜ್ಞಾನವನ್ನು ತೊಲಗಿಸಲು ವಿಶೇಷವಾಗಿ ಶ್ರಮಪಡುವರು. ಮತ್ತು ಅವರಿಗೆ ಮೇಲಾದ ಶಿಕ್ಷಣವನ್ನೂ ಕೊಟ್ಟು ಅವರ ನಡತೆಯನ್ನು ತಿದ್ದಿ ಕ್ರಮಪಡಿಸುವವು. ಹೀಗೆ ಇವರು ಮಾಡಿಕೊಟ್ಟ ಸಂಸ್ಕಾರವು ಶಿಷ್ಯನ ಜೀವಮಾನದಲ್ಲೆಲ್ಲಾ ಅವನಿಗೂ ಮತ್ತು ಅವನಿಂದ ಇತರರಿಗೂ ಫಲಕಾರಿಯಾಗುವದಲ್ಲದೆ ಅನಂತರವೂ ಅವನ ಆತ್ಮಕ್ಕೆ ಕೂಡ ಸದ್ಗತಿಯನ್ನುಂಟುಮಾಡಿಕೊಡುವುದು. ಹೀಗೆ ಇಹಪರಗಳೆರಡರಲ್ಲಿಯೂ ನಮ್ಮ ಶ್ರೇಯಸ್ಸಿಗೆ ಕಾರಣಭೂತರಾದ ಗುರುಗಳಲ್ಲಿ ಕೃತಜ್ಞರಾಗಿರಬೇಕಾದುದೇನತಿಶಯ ! ಇದರಂತೆಯೇ ಇತರ ಉಪಕಾರಿಗಳೆಲ್ಲರ ವಿಷಯದಲ್ಲಿಯೂ ಕೃತಜ್ಞತೆಯಿಂದ ನಡೆಯಬೇಕಾದುದು ಅತ್ಯಾವಶ್ಯಕ.

ಮನಸ್ಸಿನಲ್ಲಿಮಾತ್ರ ಕೃತಜ್ಞತಾಭಾವವನ್ನು ಪಡೆದುಕೊಂಡಿರುವುದಕ್ಕಿಂತಲೂ ಅದನ್ನು ಪ್ರಕಟಗೊಳಸುವುದು ಮೇಲು. ಹಾಗೆ ವ್ಯಕ್ತಪಡಿಸದಿದ್ದರೆ ಒರಟುತನವೆನ್ನುತ್ತಾರೆ. ಉಪಕಾರಮಾಡಿದವರಲ್ಲಿ ನಮಗೆ ಇರತಕ್ಕ ಪ್ರೀತಿಯನ್ನು ಅಥವಾ ಭಕ್ತಿಯನ್ನು ಪ್ರಕಟಿಸುವುದಕ್ಕೋಸ್ಕರ ಮನಃಪೂರ್ವಕವಾಗಿ ಅವರನ್ನು ವಂದಿಸುವದು. ಸಾಧ್ಯವಾದಮಟ್ಟಿಗೂ ಪ್ರತ್ಯುಪಕಾರಮಾಡುವುದು. ಹೀಗೆ ಯಾವುದಾದರೊಂದು ಅಥವಾ ಹಲವು ವಿಧಗಳಲ್ಲಿ ಅವರಿಗೆ ಹಿತವನ್ನು ಆಚರಿಸುವುದು ಕೃತಜ್ಞತೆಯ ಕಾರ್ಯಗಳು. ಮನಸ್ಸಿನಲ್ಲಿನೆಲೆಗೊಂಡ ಕೃತಜ್ಞತೆಯನ್ನು ಮೇಲೆಕಂಡಂಥ ಕಾರ್ಯಗಳ ಅಥವಾ ಮಾತುಗಳ ಮೂಲಕವಾದರೂ ವ್ಯಕ್ತಪಡಿಸದೆ ತಟಸ್ಥರಾಗಿರುವುದು ಒಳ್ಳೆಯದಲ್ಲ.

ಕಡೆಗೆ ಯಾರೊಬ್ಬರಿಂದ ಯಾವುದೊಂದು ಅಲ್ಪಸಹಾಯವು ದೊರೆತರೂ ಅವರಿಗೆ ಒಂದು ಉಪಚಾರೋಕ್ತಿಯನ್ನಾದರೂ ಸಮರ್ಪಿಸಬೇಕು. ಪಾಶ್ಚಾತ್ಯರಲ್ಲಿ ಸರ್ವತ್ರ ಈ ವಿಷಯವು ಚೆನ್ನಾಗಿಯೂ ಹೆಚ್ಚಾಗಿಯೂ ಬಳಕೆಯಲ್ಲಿದೆ. ಯಾವ ಅಲ್ಪಮನುಷ್ಯನು ಎಂಥ ಸಣ್ಣ ಸಹಾಯವನ್ನೇ ಮಾಡಿದರೂ ಅವನಿಗೆ ಅದಕ್ಕಾಗಿ ಥ್ಯಾಂಕ್ಸ್ (Thanks) ಎಂಬ ಒಂದು ಉಪಚಾರದ ನುಡಿಯನ್ನಾದರೂ ಆಡದೆ ಇರುವುದಿಲ್ಲ. ಕರ್ಣನು ತನ್ನೊಡೆಯನಾದ ದುರ್ಯೋಧನನಿಗೂ ಬಹಮನೀರಾಜ್ಯಸ್ಥಾಪಕನಾದ ಮಹಮ್ಮದೀಯನುತನ್ನ ದಣಿಯಾದ ಬ್ರಾಹ್ಮಣರಿಗೂ ಎಷ್ಟು ಮಟ್ಟಿಗೆ ಕೃತಜ್ಞನಾಗಿದ್ದರೆಂಬುದು ಜಗತ್ಪ್ರಸಿದ್ಧವಾಗಿಯೇಇದೆ. ಯುದ್ಧದಲ್ಲಿ ಜಯಶೀಲರಾದರಾಜಪುತ್ರರೂ ಕಾಳಿದಾಸಮೊದಲಾದಕವಿಶಿರೋಮಣಿಗಳೂ ಮನು ಯಾಜ್ಞವಲ್ಕ್ಯ ಮೊದಲಾದ ಶಾಸ್ತ್ರಕಾರರೂ ಪ್ರಜೆಗಳ ಸ್ವಾತಂತ್ರ್ಯಕ್ಕೂ ನ್ಯಾಯಕ್ಕೂ ಹೊಡೆದಾಡಿದ ಇತರ ಮಹಾನುಭಾವರುಗಳೂ ನಮ್ಮ ಹಿಂದೂ ದೇಶದ ಸಮಸ್ತ ಜನಗಳ ಕೃತಜ್ಞತೆಗೂ ಅರ್ಹರು. ಕೃತಜ್ಞತೆಯು ವಾಕ್ಯ ಕರ್ಮಗಳಿಂದ ಮಾ

ತ್ರವಲ್ಲದೆ ನೋಟದಿಂದ ಕೂಡ ವ್ಯಕ್ತಪಡುವುದುಂಟು. ಒಂದಾನೊಂದು ಘೋರಯುದ್ಧದಲ್ಲಿ ಸಿಡ್ನಿ ಎಂಬ ದಳಪತಿಯು ಮರಣದಾಹಪೀಡಿತನಾಗಿದ್ದು ನೀರನ್ನು ಕುಡಿಯಬೇಕೆಂದು ಕೈಯೆತ್ತಿದಾಗ ಇನ್ನೊಬ್ಬ ಯೋಧನೂ ತನ್ನಂತೆಯೇ ತಲ್ಲಣಿಸುತ್ತಿದ್ದುದನ್ನು ಕಂಡು ಆ ನೀರನ್ನು ಅವನಿಗೇ ಕೊಟ್ಟುಬಿಡಲು ಆ ಯೋಧನು ಇನ್ನು ಯಾವುದಕ್ಕೂ ಚೈತನ್ಯವಿಲ್ಲದುದರಿಂದ ದೃಷ್ಟಿಯಿಂದಲೇ ಸಿಡ್ನಿಗೆ ತನ್ನ ಕೃತಜ್ಞತೆಯನ್ನು ತೋರಿಸಿದನಂತೆ !

ಉಪಕಾರಿಗಳ ಜೀವಿತ ಕಾಲಾನಂತರವೂ ಅವರಿಗೆ ಕೃತಜ್ಞತೆಯನ್ನು ತೋರಿಸುವುದಕ್ಕೆ ಅಥವಾ ಅವರಲ್ಲಿ ತಮಗಿರತಕ್ಕ ಕೃತಜ್ಞತಾ ಭಾವವನ್ನು ವ್ಯಕ್ತಪಡಿಸುವುದಕ್ಕೆ ಅನೇಕರು ಶಾಸನಗಳನ್ನು ಬರೆಯಿಸಿರುವರು. ಹಲವರು ಅವರ ಹೆಸರಿನ ಮೇಲೆ ಕಟ್ಟಡಗಳನ್ನು ಕಟ್ಟಿಸಿರುವರು.

ನಾವು ಕೃತಜ್ಞತೆಯನ್ನು ಕಲಿತುಕೊಳ್ಳಬೇಕಾದರೆ ದೈವ ಸೃಷ್ಟಿಯಲ್ಲಿ ಇನ್ನೂ ಎಷ್ಟೋ ನಿದರ್ಶನಗಳವೆ. ತಿರ್ಯಗ್ಜಂತುಗಳುಕೂಡ ತಮಗೆ ಉಪಕಾರಮಾಡಿದವರನ್ನು ಮರೆಯುವುದಿಲ್ಲ. ದಣಿಯ ಗಂಟನ್ನುಳಿಸಲು ಯತ್ನಿಸಿ ಪೆಟ್ಟುತಿಂದು ಸತ್ತದ್ದು. ಸಮುದ್ರದಲ್ಲಿ ಬಿದ್ದವನನ್ನು ಎತ್ತಿ ಬದುಕಿಸಿದುದು, ಯಜಮಾನನ ಸ್ವತ್ತನ್ನು ಕಾಯುವುದು. ಇಂಥ ವಿಷಯದಲ್ಲಿ ನಾಯಿಯೂ, ಹಾವನ್ನುಕೊಂದು ಮಗುವನ್ನುಳಿಸಿದುದರಲ್ಲಿ ಮುಂಗಸಿಯೂ ಒಳ್ಳೆಯ ದೃಷ್ಟಾಂತವಾಗಿವೆ. ಹೀಗೆಯೇ ಸಿಂಹ ಇಲಿಗಳ ಕಥೆಯಲ್ಲಿ ಪಾರಿವಾಳವೂ ಇನ್ನೂ ಇತರವಾದ ಹಲವು ವಿಷಯಗಳಲ್ಲಿ ಇಲಿಯೂ ಇರುವೆ ಪಾರಿವಾಳಗಳ ಕಥೆಯಲ್ಲಿ ಕುದುರೆ ಹಸು ಮೊದಲಾದ ಬೇರೆ ಕೆಲವು ಮೂಕಪ್ರಾಣಿಗಳೂ ಸಹ ಕೃತಜ್ಞತೆಗೆ ಆದರ್ಶಪ್ರಾಯವಾಗಿವೆ. ತೆಂಗು ಬತ್ತ ಮೊದಲಾದ ಸಸ್ಯಗಳೂ ಕೂಡ ಕೇವಲ ಕೃತಜ್ಞತೆಯುಳ್ಳವುಗಳೆಂದು ಕವಿಗಳು ಬಲು ಚಮತ್ಕಾರವಾಗಿ ವರ್ಣಿಸಿದ್ದಾರೆ.

ಕೃತಜ್ಞತೆಗೆ ವಿರುದ್ಧವಾದ ದುರ್ಗುಣವೇ ಕೃತಘ್ನತೆ. ಪಡೆದ ಉಪಕಾರವನ್ನೂ ಉಪಕಾರಿಗಳನ್ನೂ ಮರೆತುಬಿಡುವುದೇ ಇದರ ಸ್ವರೂಪವು. ಮನುಷ್ಯನು ಇನ್ನು ಯಾವ ಪ್ರಾಣಿಗಳಿಗೂ ಇಲ್ಲದಂಥ ಅನ್ಯಾದೃಶವಾದ ಬುದ್ಧಿಶಕ್ತಿಯನ್ನೂ ನೀತಿಯ ತಿಳವಳಿಕೆಯನ್ನೂ ಪಡೆದಿದ್ದರೂ ಕೂಡ ಅವಿವೇಕದಿಂದ ಎಷ್ಟೋವೇಳೆ ಕೃತಘ್ನನಾಗುವುದುಂಟು. ಇದರಿಂದ ಉಪಕಾರ ಮಾಡಿದವರ ಮನಸ್ಸು ಕೆಟ್ಟು ಹೋಗುವ ಸಂಭವವೂ ಉಂಟು. ಇದನ್ನು ಅರಿತವರು ಯಾರೂ ಈ ಕೃತಘ್ನನ ವಿಷಯದಲ್ಲಿ ಅಯ್ಯೋ ಪಾಪ ಎಂದು ಕೂಡ ಮರುಗದೆ ಹೋದಾರು. ಕೃತಘ್ನತೆಗೆ ಇಹದಲ್ಲಿ ಈ ರೀತಿಯಾದ ಶಿಕ್ಷೆಯಾದರೆ ಪರದಲ್ಲಿಯೂ ಮತ್ತೊಂದು ವಿಧವಾದ ಶಿಕ್ಷೆಯುಂಟೆಂದು ನಮ್ಮಲ್ಲಿ ಶಾಸ್ತ್ರಜ್ಞರು ಹೇಳುವರು. ಬುದ್ಧಿಶಕ್ತಿಯಲ್ಲಿ ಹಿಂದಾಗಿಯೂ ವಿಚಾರಶಕ್ತಿಯೂ ಸುತರಾಂ ಇಲ್ಲದೆಯೂ ಇರತಕ್ಕ ತಿರ್ಯಗ್ಜಂತುಗಳು ಕೂಡ ಉಪಕಾರಿಗಳ ವಿಷಯದಲ್ಲಿ ಅಷ್ಟುಮಟ್ಟಿಗೆ ಕೃತಜ್ಞತೆಯುಳ್ಳವುಗಳಾಗಿರುವಲ್ಲಿ ಸರ್ವೋತ್ತಮವಾದ ಬುದ್ಧಿಯೂ ಮತ್ತು ತಿಳವಳಿಕೆಯೂ ಉಳ್ಳ ಮನುಷ್ಯರು ಉಪಕಾರಿಗಳ ವಿಷಯದಲ್ಲಿ ಎಷ್ಟುಮಟ್ಟಿಗೆ ಕೃತಜ್ಞರಾಗಿರಬೇಕೆಂಬುದನ್ನು ಹೇಳಬೇಕಾದುದೇ ಇಲ್ಲ.

### 20 ಕೀರ್ತಿಪರತೆ

ತಾನು ಕೀರ್ತಿಶಾಲಿಯಾಗಬೇಕೆಂಬ ಆಶೆಯು ಲೋಕದಲ್ಲಿ ಸಾಮಾನ್ಯವಾಗಿ ಪ್ರತಿಯೊಬ್ಬ ಮನುಷ್ಯನಿಗೂ ಇದ್ದೇಇರುವುದು ಆದುದರಿಂದಲೇ ಎಂಥ ಅನಾಮಧೇಯನೂ ಕೂಡ ಹೆಸರು ವಾಸಿಯನ್ನು ಪಡೆಯಬೇಕೆಂದು ಯತ್ನಿಸುವುದು. ' ಇತರರು ನಮ್ಮ ವಿಷಯವಾಗಿ ಏನನ್ನಾದರೂ ತಿಳಿದುಕೊಳ್ಳಲಿ. ಹೇಗಾದರೂ ಆಡಿಕೊಳ್ಳಲಿ, ನಾವೇನೂ ಲಕ್ಷ್ಯಮಾಡುವುದಿಲ್ಲ ' ಎಂದು ಕೆಲವರು ಹೇಳಿಯಾರು. ಆದರೂ ಲೋಕದಲ್ಲಿ ಎಲ್ಲರೂ ಜನಮೆಚ್ಚಿಕೆಯಿಂದ ಬಾಳಬದುಕಬೇಕೆಂದು ತೋರುವರೇ ಹೊರತು ತನಗೆ

ಯಾರಿಂದಲೂ ಏನೂ ಆಗಬೇಕಾದುದಿಲ್ಲವೆಂದು ಇತರರ ಅಭಿಪ್ರಾಯ ವನ್ನು ತಿರಸ್ಕರಿಸುವುದಿಲ್ಲ. ನಿಗರ್ವಿಶಿರೋಮಣಿಗಳಾದ ಕೆಲವರು ಮಹನೀಯರು ತಾವು ಮಾಡುವ ಸತ್ಕಾರ್ಯಗಳಿಗೆ ಕೀರ್ತಿಯೇ ಪರಮಫಲವೆಂದು ಎಂದಿಗೂ ಭಾವಿಸುವುದಿಲ್ಲ. ಅಂಥವರು ತಾವಾಗಿಯೇ ಕೀರ್ತಿಗಾಗಿ ಯತ್ನಿಸಿ ಕೆಲಸಮಾಡದಿದ್ದರೂ ಅದೇ ತಾನಾಗಿ ಬಂದು ಅವರ ಭಾಗಕ್ಕೆ ಬೀಳುವುದು.

ಕೀರ್ತಿಯನ್ನು ತೋರುವುದು ಒಂದ ವಿಧವಾದ ಸ್ವಾರ್ಥಪರತೆ ಯೆಂದೂ ತನ್ನನ್ನು ತಾನೇ ಹೊಗಳಿಸಿಕೊಳ್ಳುವದೆಂದೂ ಕೆಲವರು ಆಕ್ಷೇಪಿ ಸುವರು ಇದು ಸ್ವಾರ್ಥಪರತೆಯೇ ಆದರೂ ನ್ಯಾಯವಾದ ಮಾರ್ಗದಲ್ಲಿ ಹೊರಟದ್ದು. ಮತ್ತು ಇತರರಿಗೆ ಯಾವ ವಿಧವಾದ ತೊಂದರೆಯನ್ನೂ ಮಾಡದೆ ಸಾಧ್ಯವಾದಮಟ್ಟಿಗೂ ಉಪಕಾರನಾಡುತ್ತ ಒಳ್ಳೆಯತನಕ್ಕೆ ಮಾದರಿಯಾಗಿರತಕ್ಕದು. ನಾವು ಯಾರಿಗಾದರೂ ಏನಾದರೂ ಸಹಾ ಯಮಾಡಿದರೆ ತಮ್ಮ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ ಅವರು ನಮ್ಮನ್ನು ಹೊಗಳದೇ ಇರುವರೆ? ಅಥವಾ ಹಾಗೆ ಹೊಗಳಕೂಡದೆಂದು ನಾವು ನಿರ್ಬಂಧಪಡಿಸುವುದಾದರೂ ಸಾಧ್ಯವೆ? ಇತರರಿಂದ ನಮಗೆ ಆದ ಸಹಾಯಕ್ಕಾಗಿ ನಾವು ಅವರನ್ನು ಕೊಂಡದೆ ಇರುವೆವೆ? ಲೋಕದಲ್ಲಿ ನಾವುಗಳೆಲ್ಲರೂ ನಡತೆಯೆಂಬ ಬಂಧಕ್ಕೆ ಕಟ್ಟುಬಿದ್ದಿರುವುದರಿಂದ ಹೀಗೆ ಕೊಡುವುದು ತೆಗೆದುಕೊಳ್ಳುವುದು ಎಂಬ ಎರಡು ವಿಧವಾದ ವ್ಯಾಪಾರಗ ಳಿಗೂ ಅಧೀನರಾಗಿರಲೇಬೇಕಾಗಿದೆ. ಆದುದರಿಂದ ಸ್ವಕೀಯವಾದ ಅಥವಾ ಪರಕೀಯವಾದ ಕೀರ್ತಿಯನ್ನು ತಡೆದು ಪ್ರಚಾರಕ್ಕೆ ಬಾರದಿರುವಂತೆ ಮಾಡುವುದು ಅಸಾಧ್ಯ, ಅಷ್ಟೇಕೆ? ಅಸಂಭವ. ಯಾವವಿಧವಾದ ಆಶಾ ಲೇಶವೂ ಇಲ್ಲದೆ ಒಳ್ಳೆಯತನಕ್ಕಾಗಿಯೇ ಸತ್ಯ, ದಯೆ, ಪ್ರಾಮಾಣಿಕತೆ, ವಿನಯ, ವಿಧೇಯತೆ ಪರೋಪಕಾರ ಇಂಥವಕ್ಕೆ ಅನುಸಾರವಾಗಿ ನಡೆಯ

ತಕ್ಕ ಪುಣ್ಯಾತ್ಮರುಗಳು ಕೀರ್ತಿಗಾಗಿ ಏನೂ ಪ್ರಯತ್ನಪಡದಿದ್ದರೂ ಅದೇನೋ ತಾನಾಗಿಯೇ ಅವರ ಭಾಗಕ್ಕೆ ಬಂದುಬೀಳುವುದಷ್ಟೆ. ಹೀಗೆ ಯಾವ ಫಲಾಕಾಂಕ್ಷೆಯೂ ಇಲ್ಲದೆ ಕೆಲಸವಮಾಡಿದುದರಿಂದ ಕೀರ್ತಿಯನ್ನು ಪಡೆಯುತಕ್ಕವರು ಉತ್ತಮರು.

ಇನ್ನು ಕೆಲವರು ಕೀರ್ತಿಗೋಸ್ಕರವಾಗಿಯೇ ಒಳ್ಳೆಯಕೆಲಸಗಳನ್ನು ಮಾಡುವುದುಂಟು. ಇಂಥವರಲ್ಲಿ ಸ್ವಾರ್ಥಪರತೆಯೆಂಬ ದುರ್ಗುಣವು ನೆಲೆಗೊಂಡಿರುವುದು. ಇವರು ಮಧ್ಯಮರು. ಆದರೂ ಇವರು ಮಾಡತಕ್ಕ ಕೆಲಸಗಳೇನೋ ಉತ್ತಮವಾಗಿಬಹುದು. ' ಪುಣ್ಯೈರ್ಯಶೋ ಲಭ್ಯತೆ ' (ಪುಣ್ಯಗಳಿಂದ ಕೀರ್ತಿಯು ಲಭಿಸುವುದು) ಎಂಬಂತೆ ಯಾರಿಗೂ ಯಾವಖ್ಯಾತಿ ಯುಂಟಾಗಬೇಕಾದರೂ ಸ್ವಪ್ರಯತ್ನವೇ ಮುಖ್ಯವಲ್ಲವೆಂದೂ ಅದೃಷ್ಟವು ಬಲವತ್ತರವೆಂದೂ ಕೆಲವರು ಹೇಳುವರು. ಆದರೆ ಹಾಗೆಂದು ಯಾವಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತುಕೊಂಡಿರುವವರಿಗೆ ಕೀರ್ತಿಯು ದುರ್ಲಭವೆಂದೇ ಹೇಳಬೇಕು. ಆದುದರಿಂದ ಫಲಾಕಾಂಕ್ಷೆಯಿಲ್ಲದೆ ಉತ್ತಮವಾದ ಮತ್ತು ಅಸಾಧಾರಣವಾದ ಕೆಲಸಗಳನ್ನು ಮಾಡುವವರಿಗೆ ಅದೃಷ್ಟ ಫಲವೂ ಕೈಗೂಡಿದರೆ ಯಶಸ್ಸುಂಟಾಗುವುದೆಂದಾಯಿತು. ಹೇಗೆಂದರೆ—ಯಾರು ಎಷ್ಟು ಕಷ್ಟಪಟ್ಟು ಎಂಥ ಒಳ್ಳೆಯಕೆಲಸಗಳನ್ನೇ ಮಾಡಿದರೂ ಅವರಲ್ಲಿ ಪೂರ್ವಪುಣ್ಯಕ್ಕೆ ಸಂಬಂಧಪಟ್ಟ ಅನ್ಯಾದೃಶವಾದ ಮಹತ್ವವಿದ್ದಹೊರತು ಹೊರಗಿನ ಜನಗಳಿಗೆ ಆಕಾರ್ಯಗಳ ಮಹಿಮೆಯೂ ಫಲವೂ ಗೊತ್ತಾಗುವುದಿಲ್ಲವಾಗಿ ಕೀರ್ತಿಗೆ ಅವಕಾಶವೇ ಇರುವುದಿಲ್ಲ. ಅದುದರಿಂದಲೇ ಪೂರ್ವಪುಣ್ಯವೂ ಇರಲೇಬೇಕೆನ್ನುವುದು. ಅಂಥ ಕೀರ್ತಿಶಾಲಿಯ ಕಾರ್ಯವು ಎಲ್ಲರ ಹೃದಯವನ್ನೂ ಒಳಹೊಕ್ಕು ನೋಡತಕ್ಕದ್ದಾಗಿರುವುದು.

ಕೀರ್ತಿಪ್ರದವಾದ ಕಾರ್ಯವು ಅನೇಕರ ಮನಸ್ಸನ್ನು ವಶಪಡಿಸಿಕೊಳ್ಳುವ ಚೈತನ್ಯವನ್ನು ಹೆಚ್ಚು ಹೆಚ್ಚಾಗಿ ಪಡೆದಿದ್ದಂತೆಲ್ಲಾ ಕೀರ್ತಿಯೂ ಹೆಚ್ಚು ಹೆಚ್ಚು ವಿಸ್ತಾರವಾಗಿ ಹಬ್ಬುವುದು ಕೀರ್ತಿಯು ಸತ್ಕಾರ್ಯಗಳಿಂದ

ಮಾತ್ರ ಲಭಿಸುವುದೆಂದಾಯಿತಷ್ಟೆ. ಅದರಲ್ಲೂ ಎಷ್ಟೋತಾರತಮ್ಯವುಂಟು. ನಡೆಯಿಸಿದ ಕಾರ್ಯದಿಂದ ಕೆಲವರಿಗೆ ತಾತ್ಕಾಲಿಕಫಲವು ದೊರೆಯುವುದಾಗಿದ್ದರೆ ಅದರಿಂದ ಉಂಟಾಗತಕ್ಕ ಕೀರ್ತಿಯು ಅಲ್ಪ ಪ್ರದೇಶದಲ್ಲಿ ಅಲ್ಪ ಕಾಲ ಮಾತ್ರ ಹರಡಿರುವುದು. ಅರವಟ್ಟಿಗೆಯನ್ನಿಡಿಸುವುದು ತನ್ನ ಹಳ್ಳಿಯ ಬಡವರಿಗೆ ಒಂದುದಿನ ಸಮಾರಾಧನೆ ಮಾಡಿಸುವುದು ಇತ್ಯಾದಿಗಳಿಂದ ಉಂಟಾಗತಕ್ಕ ಕೀರ್ತಿಯು ಈ ವಿಧವಾದುದು, ಇನ್ನು ಕೆಲವುದರಿಂದ ಉಂಟಾಗತಕ್ಕ ಕೀರ್ತಿಯು ಹೆಚ್ಚು ಪ್ರದೇಶದಲ್ಲಿ ಹರಡಿದ್ದರೂ ದೀರ್ಘಕಾಲ ನೆಲೆಗೊಂಡಿರುವುದು. ಕೆರೆ ಕೊಳ ತೋಪು, ಸತ್ರ ಪಾಠಶಾಲೆ ವೈದ್ಯಶಾಲೆ ದೇವಾಲಯ ಮೊದಲಾದುವನ್ನು ಧರ್ಮಾರ್ಥವಾಗಿ ಸ್ಥಾಪಿಸಿ ಜನಗಳಿಗೆ ಉಪಕಾರ ಮಾಡುವುದರಿಂದ ಬರುವ ಕೀರ್ತಿಯು ಈ ತೆರನಾದುದು.

ಇನ್ನು ಕೆಲವರು ಪುಣ್ಯಾತ್ಮರು ಹೆಚ್ಚು ವ್ಯಾಪ್ತಿಯುಳ್ಳವರಾಗಿ ಸರ್ವತ್ರ ಆಚರಣೆಗೆ ಬರಬಲ್ಲಂಥ ಎಷ್ಟೋ ಹೊಸಸಂಗತಿಗಳನ್ನು ಹೊಸ ಹೊಸದಾಗಿ ಕಂಡು ಹಿಡಿದಿರುವುದರಿಂದ ಜಗತ್ಪ್ರಸಿದ್ಧರಾಗಿರುವರು. ರೈಲ್ವೆ ಎಂಜಿನ್ ಮಾಡಿದ ಜಾರ್ಜ್ ಸ್ಟೀವನ್ ಸನ್ ನೆಯ್ಯುವ ಯಂತ್ರವನ್ನು ಕಂಡು ಹಿಡಿದ ಸರ್ ರಿಚರ್ಡ್ ಆರ್ಕ ರೈಟ್ ಅಚ್ಚಿನ ಮೊಳೆಗಳನ್ನು ಕಂಡು ಹಿಡಿದ ಜಾನ್ ಗಟೆನ್ ಬರ್ಗ ಮೊದಲಾದವರು ಇದಕ್ಕೆ ಉದಾಹರಣೆಯಾಗಿದ್ದಾರೆ.

ಇನ್ನು ಕೆಲವರು ಮಹನೀಯರು ಮನುಷ್ಯ ಪ್ರಾಣಿಗಳು ಪಡುವ ಕಷ್ಟವನ್ನು ನಿವಾರಿಸುವುದಕೋಸ್ಕರ ತಮ್ಮ ಜೀವಿತ ಕಾಲದ ಹೆಚ್ಚು ಭಾಗವನ್ನು ವಿನಿಯೋಗಿಸಿರುವರು. ಗುಲಾಮರ ವ್ಯಾಪಾರವನ್ನು ನಿಲ್ಲಿಸಿದ ವಿಲ್ಬರ್ ಫೋರ್ಸ್ ಹುಚ್ಚುನಾಯಿಗಳ ವಿಷವನ್ನು ಪರಿಹರಿಸಲು ಉಪಾಯವನ್ನು ಕಂಡುಹಿಡಿದ ಲ್ಯೂಯಿಸ್ ಪ್ಯಾಸ್ಚ್ಯುಯರ್ ದೇವಿಹಾಕುವ ಏರ್ಪಾಡಿನಿಂದ ಸಿಡುಬಿನ ಹಾವಳಿಯನ್ನು ಕಡಿಮೆಮಾಡಿದ ಡಾಕ್ಟರ್ ಜನ್ನರ್ ಮೊದಲಾದವರಿಗೆ ಬಟ್ಟು ಮನುಷ್ಯಕುಲವೇ ಋಣಿಯಾಗಿರಬೇಕಾಗಿರುವಲ್ಲಿ ಅವರುಗಳ ಯಶಸ್ಸು ಎಂಥಾದ್ದೆಂಬುದನ್ನು ಹೇಳಬೇಕಾಗಿಯೇ ಇಲ್ಲ.

ಹೀಗೆಯೇ ತಮ್ಮ ಅನುಭವಗಳನ್ನೂ ಶೋಧನೆಗಳನ್ನೂ ಶಾಸ್ತ್ರಗಳ ರೂಪದಲ್ಲಿ ಬರೆದಿಟ್ಟಿರುವ ಪೂರ್ವಿಕರೂ, ಪ್ರತಿಭಾಶಕ್ತಿಯಿಂದ ಸರ್ವೋತ್ತಮವಾದವರ್ಣನೆ, ನೀತಿ ಶೃಂಗಾರ ವಾಗ್ವೈಖರಿ ಮೊದಲಾದ ಚಾತುರ್ಯಗಳನ್ನು ವ್ಯಕ್ತಪಡಿಸುವಂಥ ಶ್ಲಾಘ್ಯವಾದ ಕಾವ್ಯಾಲಂಕಾರಗ್ರಂಥಗಳನ್ನು ಬರೆದು ನಿರಂತರವೂ ಲೋಕಾನಂದಕ್ಕೆ ಸುಗ್ಗಿಯನ್ನುಂಟುಮಾಡುತ್ತಿರುವ ಕಾಳಿದಾಸ ವಾಲ್ಮೀಕಿ ಶ್ರೀ ಹರ್ಷ, ಷೇಕ್ ಸ್ಪಿಯರ್. ಟೆನಿಸನ್, ಗೋಲ್ಡ್ ಸ್ಮಿತ್ ಮೊದಲಾದ ಕವಿಶಿರೋಮಣಿಗಳೂ ಯಶಶ್ಶರೀರದಿಂದ ಶೋಭಿಸುತ್ತ ಸರ್ವದಾ ಚಿರಂಜೀವಿಗಳಾಗಿಯೇ ಇರುವರು.

ಮತ್ತೆ ಕೆಲವರು ತಮ್ಮ ಕಾಲದಲ್ಲಿ ನಡೆದಂಥ ಬಳ್ಳೆಯ ವಿಷಯುಗಳನ್ನು ಸರ್ವದಾ ಜನರ ಸ್ಮೃತಿ ಪಥದಲ್ಲಿಡಬೇಕೆಂಬ ಉದ್ದೇಶದಿಂದ ಶಾಸನಗಳಲ್ಲಿ ಬರೆವಣಿಗೆಯ ರೂಪದಲ್ಲಿ ಕೆತ್ತಿಸಿರುವರು. ಅಶೋಕ, ವಿಜಯನಗರದ ಕೃಷ್ಣರಾಯ ಮೊದಲಾದವರು ನಮ್ಮ ದೇಶದಲ್ಲಿ ಇದಕ್ಕೆ ಉದಾಹರಣೆಯಾಗಿದ್ದಾರೆ ಇನ್ನು ಕೆಲವರ ಕೀರ್ತಿಯು ಚಿರಸ್ಥಾಯಿಯಾಗಿರಬೇಕೆಂಬ ಉದ್ದೇಶದಿಂದ ಅಂಥಕೀರ್ತಿಶಾಲಿಗಳ ವಿಗ್ರಹಗಳನ್ನು ಮಾಡಿಸಿ ಜನಮುಂದೆಗೆ ಸ್ಪಷ್ಟವಾಗಿ ಗೋಚರವಾಗುವ ಸ್ಥಳಗಳಲ್ಲಿ ಸ್ಥಾಪಿಸುವುದೂ ಉಂಟು. ನಮ್ಮ ದೇಶದಲ್ಲಿ ಸ್ಥಾಪಿಸಲ್ಪಟ್ಟಿರುವ ವಿಕ್ಟೋರಿಯಾ ಮಹಾರಾಜ್ಞಿಯವರು, ಸರ್ ಜೇಮ್ಸ್ ಗಾರ್ಡನ್, ಸರ್ ಮಾರ್ಕ್ ಕಬ್ಬನ್ ಮೊದಲಾದವರ ಪ್ರತಿಮೆಗಳು ಇದಕ್ಕೆ ದೃಷ್ಟಾಂತವಾಗಿವೆ.

ತಾಜಮಹಲ್, ಹಳೇಬೀಡು ಬೇಲೂರು ಮೊದಲಾದ ಸ್ಥಳಗಳ ದೇವಾಲಯಗಳು ಇಂಥ ಅದ್ಭುತವಾದ ಕಟ್ಟಡಗಳನ್ನೂ ಈಜಿಪ್ಟಿನಪಿರಮಿಡ್‌ಗಳನ್ನೂ ಚೀಣಾದೇಶದ ಗೋಡೆಯನ್ನೂ ಕಟ್ಟಿಸಿದ ಪ್ರಭುಗಳ ಮತ್ತು ಕಟ್ಟಿದ ಶಿಲ್ಪಿಗಳ ಕೀರ್ತಿಯೂ ಶಾಶ್ವತವಾದುದು. ಕೆಲವು ಊರುಗಳು, ಬೀದಿ,

ಕಾಲುವೆ, ಕಟ್ಟಡಗಳು ಮುಂತಾದುವುಗಳ ಹೆಸರುಗಳನ್ನು ಕೇಳುವುದರಿಂದಲೂ ಅವುಗಳನ್ನು ಸ್ಥಾಪಿಸಿದಜನಗಳು ಎಷ್ಟು ಒಳ್ಳೆಯವರಾಗಿಯೂ ಜನಮೆಚ್ಚಿಕೆಯುಳ್ಳವರಾಗಿಯೂ ಇದ್ದರೆಂಬುದು ವ್ಯಕ್ತಪಡುವುದು. ಅಹಮುದಾಬಾದ್ ಬೌರಿಂಗ್‌ಪೇಟೆ ಶೇಷಾದ್ರಿಪುರ, ಸೂಳೆಯಕೆರೆ, ಬಂಗಾರದೊಡ್ಡಿನಾಲೆ, ರಂಗಾಚಾರ್ಯರ ಮೆಮೋರಿಯಲ್ ಹಾಲ್ ಮೊದಲಾದುವು ಇವಕ್ಕೆ ನಿದರ್ಶನವಾಗಿವೆ. ಶಿಬಿ, ಸಿದ್ಧಿ ಮೊದಲಾದನವರು ಅನ್ಯಾದೃಶವಾದ ತಮ್ಮ ದಯಾರಸದಿಂದ ಸುಪ್ರಸಿದ್ಧರಾಗಿದ್ದಾರೆ.

ಎಷ್ಟೋ ನಿರಾಕಾಂಕ್ಷೆಯಿಂದ ಸತ್ಕಾರ್ಯಗಳನ್ನು ಮಾಡಿದರೂ ಕೀರ್ತಿಯೇನೋ ಅಪ್ರಾರ್ಥಿತವಾಗಿ ಬಂದು ಸೇವಿಸುವುದೆಂದು ಮೊದಲೇ ಹೇಳಲ್ಪಟ್ಟಿದೆಯಷ್ಟೆ. ಒಬ್ಬಾನೊಬ್ಬ ಮಹಾತ್ಮನು ತಾನು ದೇವರನ್ನು ಪ್ರಾರ್ಥಿಸುವುದರಲ್ಲಿ--ಸ್ವಾಮಿ ನನಗೆ ಏನೂಬೇಕಿಲ್ಲ, ನಾನು ನಿನಗೊಬ್ಬನಿಗೆ ಮಾತ್ರ ಗೋಚರನಾಗಿದ್ದರೆ ಸಾಕು. ಎಂದು ಭಾವಿಸಿ ಈ ಅರಣ್ಯಕ್ಕೆ ಬಂದರೂ ಸರ್ವತ್ರ ಹರಡಿ ಹೋಗಿರುವ ಆ ಹಾಳು ಕೀರ್ತಿಯು ಇಲ್ಲಿಯೂ ನನ್ನ ಬಳಗೆ ಜನಗಳನ್ನು ಕಳುಹಿಸುತ್ತ ನನ್ನ ಚಿತ್ತಶಾಂತಿಗೆ ಭಂಗವನ್ನುಂಟು ಮಾಡುತ್ತಿದೆಯಲ್ಲಾ ಅದನ್ನು ತಡೆಯುವಬಗೆಹೇಗೆ? ಎಂದು ಬೇಡಿಕೊಂಡ ನಂತೆ !

## (21) ಧೈರ್ಯ.

ಎಂಥ ಅಪಾಯಗಳಲ್ಲೂ ಎದೆಗುಂದದೆ ನಿರ್ಭಯದಿಂದ ಅವುಗಳನ್ನು ಪ್ರತಿಭಟಿಸಿ ಸಾಹಸಮಾಡತಕ್ಕುದೇ ಧೈರ್ಯವೆನಿಸುವುದು. ಇದು ಸ್ವಾಭಾವಿಕವಾದ ಶಕ್ತಿಯು ಮತ್ತು ಭಯಕ್ಕೆ ವ್ಯತಿರಿಕ್ತವಾದಗುಣವು. ತಿಳವಳಿಕೆ ಸಾಲದವರನೇಕರು ಬಾಲ್ಯದಲ್ಲಿ ತಮಗೆ ಹೇಳಿದ್ದ ಭೂತ, ದೆವ್ವ, ಪೀಡೆ, ಪಿಶಾಚಿ, ಮೊದಲಾದುವನ್ನು ಕೇಳಿಕೇವಲ ಅಂಜುಪುರಕರಾಗಿರತಕ್ಕ ಜನಗಳು ಎಷ್ಟೋಉಂಟು. ಅಂಥವರು ವಿಷಯಗಳನ್ನು ಚೆನ್ನಾಗಿ ತಿಳಿದುಕೊಳ್ಳುತ ಬಂದಂತೆಲ್ಲಾ ಧೈರ್ಯಶಾಲಿಗಳಾಗುವ ಸಂಭವವುಂಟು.

ಧೈರ್ಯವು ನಾನಾವಿಧಗಳಲ್ಲಿ ತೋರ್ಪಡುವುದು. ತನಗೆ ಅಪಾಯ ವಾಗುವುದೆಂಬ ಪರಿಜ್ಞಾನವೇ ಇಲ್ಲದೆ ಪ್ರವರ್ತಿಸತಕ್ಕುದು ಒಂದು ವಿಧ. ಮಗುವು ಹರಿಯುವ ಹಾವನ್ನು ಅಥವಾ ದೀಪವನ್ನು ಥಟ್ಟನೆ ಹಿಡಿದುಕೊಳ್ಳುವುದು ಇದಕ್ಕೆ ದೃಷ್ಟಾಂತವು ಆದರೆ ಈ ವಿಧವಾದ ಧೈರ್ಯದಲ್ಲಿ ಅಜ್ಞಾನವು ಬೆರತಿರುವುದು. ಅಪಾಯದ ಸ್ವರೂಪವನ್ನು ತಿಳಿದಿದ್ದರೂ ತನ್ನ ಬಲಾಬಲಗಳನ್ನು ಯೋಚಿಸದೆ ಅವಿವೇಕವಾಗಿ ನುಗ್ಗಿ ನಡೆಯುವುದು ಎರಡನೆಯವಿಧ. ನಿರಾಯುಧನಾಗಿ ಏಕಾಂಗಿಯಾಗಿ ಹುಲಿಯನ್ನು ಎದುರಿಸುವುದು ಇದಕ್ಕೆ ಉದಾಹರಣೆ. ಒಂದು ಭೀತಿಯನ್ನು ತಪ್ಪಿಸಿ ಕೊಳ್ಳುವುದಕ್ಕೋಸ್ಕರ ಮತ್ತೊಂದು ಅಂಜಿಕೆಯನ್ನು ಪ್ರತಿಭಟಿಸುವುದೂ ಉಂಟು. ಒಬ್ಬ ಭಟನು ತಾನು ಯುದ್ಧ ರಂಗವನ್ನು ಬಿಟ್ಟು ಓಡಿದರೆ ದಳಪತಿಯು ತನ್ನನ್ನು ಗುಂಡಿನ ಬಾಯಿಗೆ ಕೊಡುವನೆಂಬ ಹೆದರಿಕೆಯಿಂದ ತನಗೆ ಇಷ್ಟವಿಲ್ಲದಿದ್ದರೂ ಶತ್ರುಗಳ ಮೇಲೆ ನುಗ್ಗಿ ಯುದ್ಧಮಾಡುವನು. ಇದು ನಿಜವಾದ ಧೈರ್ಯವಲ್ಲ, ಸ್ವಾರ್ಥ ಪರತೆಯಿಂದಮಾಡುವ ಕುಯುಕ್ತಿಯು. ಹೇಗೆಂದರೆ– ಯುದ್ಧಮಾಡುವುದರಲ್ಲಿ ಜಯಿಸುವಸಂಭವ ವಿರುವುದೆಂಬ ಆಸೆಯಾದರೂ ಉಂಟು. ತಪ್ಪಿಸಿಕೊಂಡು ಓಡುವುದಾಗಿ ಯತ್ನಿಸಿದರೋ ಪ್ರಾಣಬಿಡ ಬೇಕಾಗುವುದೇಸಿದ್ಧವು. ಮನೆಯು ಹೊತ್ತಿಕೊಂಡಾಗ ಉರಿಯೊಳಗೇ ನುಗ್ಗಿ ಹೋಗಿ ಇತರರನ್ನು ಕಾಪಾಡುವುದಕ್ಕೆ ಯತ್ನಿಸುವುದು. ನೀರೊಳಗೆ ಮುಳುಗಿದವರನ್ನು ಈಚೆಗೆ ಸೆಳೆದುಹಾಕುವುದು. ಎತ್ತರವಾದ ಸ್ಥಳದಿಂದ ಧುಮುಕುವುದು ಶಸ್ತ್ರಗಳ ಏಟಿಗೆ ಹಿಂಜರಿಯದೆ ಯುದ್ಧಮಾಡುವುದು. ಇವುಗಳೆಲ್ಲಾ ಒಂದು ವರ್ಗಕ್ಕೆ ಸೇರಿದಧೈರ್ಯಕಾರ್ಯಗಳು. ಅನಾಗರಿಕರಾದ ಕಾಡುಜನಗಳಲ್ಲೂ ಇಂಥಧೈರ್ಯವಿದ್ದೀತು. ಇಂಥ ಧೈರ್ಯವು ಪ್ರಾಯಶಃ ದೇಹಬಲದ ಮೂಲಕವಾಗಿಯೇ ಹೊರಪಡುವುದು.

ಮತ್ತೊಂದುವಿಧವಾದ ಧೈರ್ಯವು ಬುದ್ಧಿ ಬಲದ ಮೂಲಕವಾಗಿ ನಡತೆಯರೂಪದಲ್ಲಿ ಹೊರಪಡುವುದು. ಇದು ಒಳ್ಳೆಯ ಮಾರ್ಗದಲ್ಲಿ ಪ್ರವರ್ತಿಸಿದರೆ ಸರ್ವ ಶ್ರೇಷ್ಟವೆನಿಸುವದು. ಈ ವಿಧವಾದ ಧೈರ್ಯದಿಂದ ಸತ್ಫಲಗಳೇ ದೊರೆಯುವುವು. ಮತ್ತು ಆ ಫಲಗಳನ್ನು ಅನೇಕರು ಅನುಭವಿಸಬಹುದು. ಲೋಕದಲ್ಲಿ ಹೆಚ್ಚು ಜನಗಳು ಮೂಢರಾಗಿರುವುದರಿಂದ ಒಳ್ಳೆಯತನವನ್ನು ಕೆಡಕೆಂದು ಭಾವಿಸಿ ಆಡಿಕೊಳ್ಳುವುದು ರೂಢಿಯಲ್ಲಿದ್ದೇ ಇದೆಯಷ್ಟೆ. ನಮ್ಮ ಸ್ತ್ರೀಯರ ನಡೆನುಡಿಗಳನ್ನು ನೋಡಿದರೆ ಇದು ಗೊತ್ತಾಗುವುದು ಜನಗಳ ಸ್ಥಿತಿಗತಿಗಳನ್ನೂ ಲಾಭನಷ್ಟಗಳನ್ನೂ ಬಡತನ ಸಿರಿತನವನ್ನೂ ಸರಿಯಾಗಿ ತಿಳದುಕೊಳ್ಳದೆ ಸ್ವೇಚ್ಛೆಯಾಗಿ—ಆಯ್ಯೋ! ಆಕೆಗೆ ಒಡವೆಯೇ ಇಲ್ಲ, ಇವರ ಮನೆಯ ಮದುವೆಯಲ್ಲಿ ಎಲ್ಲಾನೆಂಟರುನ್ನೂ ಊಟಕ್ಕೆ ಕರೆಯಲೇ ಇಲ್ಲವಂತೆ! ಎಂಬಂಥ ಸಣ್ಣ ಮಾತುಗಳನ್ನಾಡುವರಲ್ಲವೇ? ಇಂಥಾದ್ದಾವುದಕ್ಕೂ ಹೆದರದೆ ಯಾರೇನಾದರೂ ಅಂದು ಕೊಳ್ಳಲಿ ಆದಾಯಕ್ಕೆ ಮೀರಿ ವೆಚ್ಚಮಾಡುವುದಿಲ್ಲ, ಲಂಚವನ್ನು ಕೊಡುವದಿಲ್ಲ, ಅಥವಾ ತೆಗೆದು ಕೊಳ್ಳುವುದೂ ಇಲ್ಲ, ಸಾಲಕ್ಕೆ ಹೊಣೆಯಾಗುವುದಿಲ್ಲ ಕೆಡಕರಿಗೆ ಸಹಾಯ ಮಾಡುವುದಿಲ್ಲ, ಯೋಗ್ಯರನ್ನು ಪ್ರೋತ್ಸಾಹಿಸಬೇಕು, ಏನೋ ಒಂದು ಸ್ವಪ್ರಯೋಜನಕ್ಕಾಗಿ ಇತರರಲ್ಲಿ ಇಲ್ಲದ ಗುಣಗಳನ್ನೆಲ್ಲಾ ಆರೋಪಿಸಿ ಇಂದ್ರ ಚಂದ್ರ ದೇವೇಂದ್ರ ಎಂದು ಹೊಗಳಬಾರದು. ಇತರರಿಗೆ ಹೇಗೆಹೇಳುವೆವೋ ಹಾಗೆ ನಾವೂ ಆಚರಿಸಬೇಕು, ಇತರರಿಗೆ ಬುದ್ಧಿಕಲಿಸುವುದಕ್ಕೆ ಸರಿಯಾದ ಸಮಯ ಸಂದರ್ಭಗಳು ಒದಗಿದ್ದರೂ ಕೂಡ ತಮಗೆ ಈಸ್ಸೆ. ಷ್ಟಾರ್ಯವೇತಕ್ಕೆ? ಯಾರು ಏನಾದರೂ ಆಗಿ ಹೋಗಲಿ ಎಂದು ತಟಸ್ಥರಾಗಿರಬಾರದು. ಸುಳ್ಳು ಹೇಳಬಾರದು, ನಂಬಿಕೆಗೆ ದ್ರೋಹಮಾಡಬಾರದು, ಇಂಥ ಒಳ್ಳೆಯ ನಡತೆಗಳನ್ನು ಆಚರಿಸುವುದರಲ್ಲಿ ಸ್ವಲ್ಪವೂ ಹಿಂದೆಗೆಯದೆ ದೃಢಸಂಕಲ್ಪದಿಂದ ಪ್ರವರ್ತಿಸತಕ್ಕವರೇ ನಿಜವಾದ ಧೈರ್ಯಶಾಲಿಗಳು. ಇಂಥ

ಧೈರ್ಯದಿಂದ ಅವರು ಮಾತ್ರವೇ ಅಲ್ಲದೆ ಬಟ್ಟು ಲೋಕವೇ ಉದ್ಧಾರವಾಗಿ ಸ್ವರ್ಗಸಮವಾಗುವುದು.

ನಾಗರಿಕತೆ ವಿದ್ಯೆ ಮತವಿಚಾರ ಇತ್ಯಾದಿಗಳಲ್ಲೆಲ್ಲಾ ಬುದ್ಧಿಯು ಮುಂದು ಮುಂದಕ್ಕೆ ಸುಗ್ಗುತ ಬಂದ ಹಾಗೆಲ್ಲಾ ಈ ನಡತೆಯು ಧೈರ್ಯವೂ ಹೆಚುತ್ತದೆ, ಇದೇ ಸರ್ವೋತ್ತಮವಾದ ಧೈರ್ಯವು. ಜನಮಂಡಲಿಯ ಸೇವೆ, ಗೃಹಕೃತ್ಯವಿಚಾರ, ರಾಜ್ಯಭಾರದ ವಿಷಯಗಳು, ಇಂಥವುಗಳಲ್ಲೆಲ್ಲಾ ನ್ಯಾಯಪರವಾಗಿ ಹೊಡೆದಾಡತಕ್ಕದೂ ಇದರ ಕೆಲಸವೇ. ಈ ನಡತೆಯ ಧೈರ್ಯವು ಲೋಕದಲ್ಲಿ ಒಳ್ಳೆಯತನವನ್ನು ವೃದ್ಧಿಗೆ ತರುತ್ತಲೂ ಕೆಡಕನ್ನು ಮುರಿಯುತ್ತಲೂ ಬರುವುದು. ವಿಧವಾವಿವಾಹವು ಶಾಸ್ತ್ರ ಸಮ್ಮತವಾದುದರಿಂದ ಸರ್ವರೂ ಅತ್ಯವಶ್ಯಕವಾಗಿ ಆಚರಿಸಬೇಕೆಂದು ಸಭೆಯಲ್ಲಿ ನಿಂತುಘಂಟಾಘೋಷವಾಗಿ ವಾದಿಸುತ್ತ ಶ್ಲಾಘಿಸುವುದು, ವಿಧವೆಯರಾದ ತಮ್ಮ ಮಕ್ಕಳಿಗೆ ಮಾತ್ರ ಮದುವೆ ಮಾಡದಿರುವುದು. ಈ ರೀತಿಯಾಗಿಯೇ ಪ್ರೌಢಾವಿವಾಹ, ಸಮುದ್ರಯಾನ ವಿಚಾರ ಇಂಥವಿಷಯಗಳಲ್ಲೆಲ್ಲಾ ಇತರರಿಗೆ ಹೇಳುವುದೊಂದುವಿಧ ತಾವು ಆಚರಿಸುವುದೊಂದು ವಿಧ ಮ್ಯುನಿಸಿಪಾಲಿಟಿಯ ಸಭಿಕರಲ್ಲಿ ತಾವು ಒಬ್ಬರಾಗಿದ್ದು ನಗರನಿವಾಸಿಗಳಾದಜನಗಳಿಗೆ ಸೌಕರ್ಯವನ್ನು ಕಲ್ಪಿಸುವುದರಲ್ಲೂ ಆಡಳಿತದಲ್ಲಿರತಕ್ಕ ನ್ಯೂನಾತಿರೇಕಗಳನ್ನು ತಿದ್ದುವುದರಲ್ಲೂ ಸ್ವಲ್ಪವೂ ಧೈರ್ಯದಿಂದ ನಡೆಯದೆ ಮೇಲಿನ ಅಧಿಕಾರಿಗಳ ಮನಸ್ಸಿಗೆ ಏನುಅಸಮಾಧಾನವಾಗಿ ತಮ್ಮ ಪದವಿಗೆ ಎಲ್ಲಿ ಭಂಗ ಬಂದೀತೋ ಎಂದು ಹೆದರುತ್ತ ತಟಸ್ಥರಾಗಿರತಕ್ಕುದು ಇಂಥದ್ದೆಲ್ಲಾ ನಡತೆಯಹೇಡಿತನ.

ಹೊಸಸ್ಥಳ ಹೊಸಜನರು ಮುಂತಾದುವನ್ನು ನೋಡುವುದರಿಂದ ಗಾಬರಿಪಟ್ಟು ಅಧೈರ್ಯದಿಂದ ಪರೀಕ್ಷೆಗಳಲ್ಲಿ ಉತ್ತರಗಳನ್ನು ತಪ್ಪಾಗಿ ಬರೆಯುವುದರಿಂದ ಕೆಲವರು ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ತೇರ್ಗಡೆಯಾಗು

ವುದಿಲ್ಲ. ಇಂಥವರು ತಕ್ಕಮಟ್ಟಿಗೆ ಮನಶ್ಯಾಂತಿಯನ್ನು ಪಡೆದು ಕೊಂಡರೆ ಧೈರ್ಯವು ತಾನಾಗಿ ಬಂದೇ ಬರುವುದು.

ಮಿತಿಮೀರಿದ ಧೈರ್ಯವು ಗಂಡಗಳನ್ನುಂಟು ಮಾಡೀತು. ರೈಲಿನಲ್ಲಿ ಹೋಗುವಾಗ ಥಟ್ಟನೆ ದುಮ್ಮಿಕ್ಕುವುದು, ಅರಳಿಯ ಮೂಟೆಗಳ ಬಳಿಯಲ್ಲಿ ಚುಟ್ಟಾ ಸೇದುವುದು. ತನಗಿಂತ ವಯಸ್ಸಿನಲ್ಲಿ ಚಿಕ್ಕವರೆಂದು ದೊಡ್ಡ ಪದವಿಯಲ್ಲಿರ ತಕ್ಕವರನ್ನು ಏಕವಚನದಿಂದ ಸಂಬೋಧಿಸುವುದು ಇಂಥ ವುಗಳೆಲ್ಲಾ ಇದಕ್ಕೆ ಉದಾಹರಣೆಗಳು —

ನಡತೆಯುಧೈರ್ಯವಾದ ತಕ್ಕವರಿಗೆ ದೈಹಿತವಾದ ಧೈರ್ಯವೂ ಇದ್ದೇ ಇರುವುದೆಂದು ಹೇಳುವುದಕ್ಕಾಗುವುದಿಲ್ಲ. ಪ್ರಪಂಚದಲ್ಲಿ ಮನುಷ್ಯರಿಗೆ ದಿನ ದಿನಕ್ಕೂ, ನಾಗರಿಕತೆಯೂ ಅದರಿಂದಸುಖ ಸಾಧನಗಳೂ ಹೆಚ್ಚುತಲಿವೆ. ಇವಕ್ಕಾಗಿ ಎಷ್ಟೋಮಹಾಕಾರ್ಯಗಳು ನಡೆಯುತ್ತಲಿವೆ. ಅನೇಕ ಜನ ಪುಣ್ಯಾತ್ಮರು ಎಷ್ಟೋ ಧೈರ್ಯದಿಂದ ಸಾಹಸಪಟ್ಟು ಕೆಲಸ ಮಾಡಿದ್ದಾರೆ. ಹೆಚ್ಚು ಶ್ರಮಪಟ್ಟಹೊರತು ಯಾವ ಮಹಾಕಾರ್ಯಗಳೂ ಎಂದಿಗೂ ನಡೆ ಯಲಾರವು. ಅಂಥ ಕೆಲಸಗಳನ್ನು ಮಾಡುವುದರಲ್ಲಿ ಅಷ್ಟು ಶ್ರಮ ಪಡ ಬೇಕಾಗುವುದಲ್ಲಾ ಎಂದು ಹೆದರಿ ಸುಮ್ಮನೆ ಕುಳಿತರೆ ಅವುನಡೆಯುವ ಬಗೆ ಹೇಗೆ? ಆದುದರಿಂದ ಯಾವ ಪ್ರಯತ್ನಕ್ಕೂ ಧೈರ್ಯವೇ ಮುಖ್ಯ ಸಾಧನವು. ಧೈರ್ಯಶಾಲಿಯಾದವನು ಎಂಥ ಅನಾಥನಾಗಿದ್ದರೂ ಎಲ್ಲಿ ಹೋದರೂ. ಎಂಥ ಕೆಲಸವನ್ನಾದರೂ ಸುಲಭವಾಗಿ ಮಾಡಿಕೊಂಡು ನಿರ್ವಹಿಸಬಲ್ಲನು. ಹೇಡಿ ಯಾದರೋ ಎಷ್ಟೇ ಅನುಕೂಲತೆಯನ್ನು ಪಡೆದಿದ್ದರೂ ಮೂಲೆಯಪಾಲಾ ಗಿಬಿದ್ದಿರುವನು. ನೂರಾರು ಅಡಿಗಳ ಆಳದಲ್ಲಿರುವ ಚಿನ್ನವನ್ನು ಅಗೆದುತೆಗೆ ಯ ಬೇಕಾದರೆ ಭೂಮಿಯುಕುಸಿದು ಮೇಲೆ ಬಿದ್ದೀತೆಂದಾಗಲಿ ಸಮುದ್ರ ದೊಳಗೆ ಮುಳುಗಿ ಮುತ್ತಿನ ಪ್ರಾಣಿಗಳನ್ನು ತೆಗೆಯುವುದರಲ್ಲಿ ಮೊಸ ಳೆಯು ತಮ್ಮನ್ನು ನುಂಗೀತೆಂದಾಗಲಿ ಹೆದರಿ ಮನುಷ್ಯರು ಯಾವ ಕೆಲ

ಸಕಲ್ಕು ಹಿಂದೆಗೆಯುತ್ತಲೇ ಇದಿದ್ದರೆ ಇತರ ಮೃಗಗಳಂತೆಯೇ ಯಾವವಿಧವಾದ ಸೌಕರ್ಯಗಳನ್ನೂ ಕಲ್ಪಿಸಿಕೊಳ್ಳಲಾರದೆ ಇರಬೇಕಾಗುತ್ತಿದ್ದಿತು. ನಾಲ್ಕೈದು ಮೈಲಿ ಆಳವಾದ ಸಾಗರಗಳಲ್ಲಿ ಸಾವಿರಾರು ಮೈಲಿಗಳ ಧೂರ ಪ್ರಯಾಣಮಾಡಲನುಕೂಲಿಸುವಂಥ ಹಡಗುಗಳನ್ನು ಕಟ್ಟುವುದು ಬೆಟ್ಟಗಳನ್ನು ಕೊರೆದು ರೈಲುರಸ್ತೆಗಳನ್ನು ಮಾಡುವುದು ಅಣೆಕಟ್ಟುಗಳಿಂದ ಹೊಳೆಗಳನ್ನು ತಡೆಯುವುದು, ಆದಾಯ ಬರುವುದೆಂಬ ಹೆಚ್ಚು ಹಣವನ್ನು ವ್ಯಾಪಾರ, ಕೈಗಾರಿಕೆ ಮುಂತಾದುವುಗಳಲ್ಲಿ ವೆಚ್ಚಮಾಡುವುದು ಈ ವಿಧವಾದ ಸಾಹಸಗಳಿಗೆಲ್ಲಾ ಧೈರ್ಯವೇ ಮುಖ್ಯವಾದ ಕಾರಣವು. ಅರ್ಜುನ ರಾಜಪುತ್ರರು ವೆಲಿಂಗ್ಟನ್‌ಕ್ಲೈವ್, ಶಿವಾಜಿ, ಹೈದರಲ್ಲಿ ಇಂಥವರೆಲ್ಲಾ ರಣರಂಗದಲ್ಲಿ ತೋರಿಸಿದ ಧೈರ್ಯದಿಂದಲೇ ಜಗತ್ಪ್ರಸಿದ್ಧರಾದುದು, ಧೈರ್ಯದಿಂದ ಸುಖವುಂಟಾಗುವುದು. ಎಂಥಗಂಡಗಳನ್ನಾದರೂ ಗೆಲ್ಲ ಬಹುದು ಸಂಪತ್ತನ್ನು ಸಂಪಾದಿಸಿಕೊಳ್ಳಬಹುದು. ನಮ್ಮ ಜೀವನಮಾನದಲ್ಲಿ ಇದು ಇಷ್ಟು ಸಹಾಯಕವಾಗಿರುವುದರಿಂದಲೇ ಧೈರ್ಯಂ ಸರ್ವತ್ರ ಸಾಧಕಂ ಎಂದು ಲೋಕೋಕ್ತಿಯೇ ಹುಟ್ಟಿರುವುದು.

## (22.) ಔದಾರ್ಯ

ಔದಾರ್ಯವನ್ನು ದೊಡ್ಡಮನಸ್ಸು ಎಂತಲೂ ಧಾರಾಳವಾದಮನಸ್ಸು ಎಂತಲೂ ಕರೆಯುವುದುಂಟು ಉದಾರಿಗಳು ಇತರರಿಗೆ ಯಾವಸಹಾಯವನ್ನು ಮಾಡಬೇಕಾದರೂ ನಿಷ್ಕಪಟವಾದ ಮತ್ತು ಶುದ್ಧವಾದ ಮನಸ್ಸಿನಿಂದ ನಿರ್ವಂಚನೆಯಾಗಿ ಮಾಡುವರು. ಹೀಗೆ ಪರೋಪಕಾರ ಮಾಡುವುದರಲ್ಲಿ ಪರಾರ್ಥವೇ ಮುಖ್ಯವಾದ ಉದ್ದೇಶವಾಗಿರುವುದೇ ಹೊರತು ಸ್ವಾರ್ಥಪರತೆಯು ಸ್ವಲ್ಪವೂ ಇರುವುದಿಲ್ಲ.

ಸತ್ಪಾತ್ರರಿಗೆ ಸಕಾಲದಲ್ಲಿ ದಾನಮಾಡುವುದು ಔದಾರ್ಯವೆಂದು ಕೆಲವರು ಅಭಿಪ್ರಾಯ ಪಡುವರು. ದಾನವು ಮನಃಪೂರ್ವಕವಾಗಿ ಒಳ್ಳೆಯ ಉದ್ದೇಶದಿಂದ ಮಾಡಲ್ಪಟ್ಟರೆ ಅದೂ ಒಂದು ವಿಧವಾದ ಔದಾರ್ಯ

ವೆನಿಸಿಕೊಂಡೀತಾದರೂ ಔದಾರ್ಯವೆಂಬ ಗುಣವೆಲ್ಲಾ ದಾನಮಾಡುವುದೆಂಬುದೊಂದರಲ್ಲಿಯೇ ಅಡಕವಾಗುವುದಿಲ್ಲ. ನಿಷ್ಪಕ್ಷಪಾತವಾಗಿ ಗುಣಗ್ರಹಣ ಮಾಡುವುದೂ ಒಂದು ಬಗೆಯ ಔದಾರ್ಯ. ಲೋಕದಲ್ಲಿ ಎಲ್ಲಿ ನೋಡಿದರೂ ಒಬ್ಬರನ್ನು ಕಂಡು ಮತ್ತೊಬ್ಬರು ಕರುಬದೆ ಇರುವುದೇ ಕಡಿಮೆ. ಅದರಲ್ಲೂ ಒಂದೇ ವೃತ್ತಿಯಲ್ಲಿರುವ ಸರಿಸಮಾನಸ್ಕಂಧರಂತು ಸರ್ವದಾ ಹೊಟ್ಟೆಕಿಚ್ಚಿನ ಮೊಟ್ಟೆಗಳಾಗಿರುತ್ತಾರೆ. ಒಬ್ಬ ಕವಿಯು ಮತ್ತೊಬ್ಬ ಕವಿಯನ್ನು ಹಳಿಯುವುದು, ಒಬ್ಬ ಅಧಿಕಾರಿಯು ಮತ್ತೊಬ್ಬ ಅಧಿಕಾರಿಯ ದೋಷಗಳನ್ನೇ ಎತ್ತಿಯಾಡುವುದು. ಒಬ್ಬ ಬಡಗಿಯು ಇನ್ನೊಬ್ಬ ಬಡಗಿಯು ಮಾಡಿದ ಸಾಮಾನುಗಳಲ್ಲಿ ಕೊರತೆಗಳನ್ನೇ ಎಣಿಸುವುದು. ಹೀಗೆ ತಮ್ಮಂತಿರುವ ಇತರರ ಹುಳುಕನ್ನು ಮಾತ್ರ ಹುಡುಕಿ ಹೊರಗೆ ಹಾಕುವುದೇ ಹೊರತು ಅವರಲ್ಲಿಯೂ ಅವರ ಕೆಲಸಗಳಲ್ಲಿಯೂ ದೋಷಗಳಿಗಿಂತ ಹೆಚ್ಚಾದ ಎಷ್ಟೇ ಸುಗುಣಗಳಿದ್ದರೂ ಅವನ್ನು ಪರಿಗಣಿಸದೆ ಮೂಲೆ ಗೊತ್ತುವರು. ಉದಾರಗುಣ ಪರಿಪೂರ್ಣರಾದ ಮಹಾನುಭಾವರಾದರೋ ಎಂದಿಗೂ ಹಾಗೆ ಮಾಡದೆ ಇತರರ ಸುಗುಣಗಳನ್ನು ಶ್ಲಾಘಿಸುವರು.

ನಮ್ಮ ಉತ್ತರ ಹಿಂದುಸ್ಥಾನದ ರಾಜಪುತ್ರರು ಗುಣಗ್ರಹಣರೂಪವಾದ ಔದಾರ್ಯಕ್ಕೆ ಸುಪ್ರಸಿದ್ಧರಾಗಿದ್ದಾರೆ ಅವರು ಯುದ್ಧಕ್ಕೆ ನಿಂತಾಗ ಶತ್ರುಪಕ್ಷದವರು ತಮ್ಮ ಮೇಲೆ ನುಗ್ಗಿ ಮಾಡುವ ಸಾಹಸಗಳನ್ನು ಕೂಡ ಮೆಚ್ಚುವರು. ತಾವು ಕೈಲಿ ಕತ್ತಿಯನ್ನು ಹಿಡಿದಿರುವಾಗ ವೈರಿಯು ಬರಿಕೈಯಲ್ಲಿ ಎದುರಿಸುವುದಕ್ಕೆ ಬಂದರೆ ಅವನಿಗೂ ಒಂದು ಕತ್ತಿಯನ್ನು ಕೊಟ್ಟು ಅಥವಾ ತಾವೇ ಬರಿಗೈಯಲ್ಲಿ ನಿಂತಾದರೂ ಯುದ್ಧಮಾಡುವರು. ಇವರು ಇತರರ ಸ್ಥಿತಿಯನ್ನು ತಾವೇ ಅವರಾಗಿದ್ದರೆ ಹೇಗೋ ಹಾಗೆ ಭಾವಿಸ

ವರು. ಹಿಂದೆ ಆರ್ಕಾಡಿನ ಮುತ್ತಿಗೆಯಲ್ಲಿ ಬಹಳ ಸಾಹಸವನ್ನು ತೋರಿಸಿದುದಕ್ಕಾಗಿ ಮೆಚ್ಚಿ ಕ್ಲೈವನಿಗೆ ಈಸ್ಟಿಂಡಿಯಾ ಕಂಪೆನಿಯವರು ವಜ್ರಗಳನ್ನು ಕೆತ್ತಿದ ಹಿಡಿಯುಳ್ಳ ಅಮೂಲ್ಯವಾದ ಒಂದು ಕತ್ತಿಯನ್ನು ಬಹುಮಾನವಾಗಿ ಕೊಡಹೋಗಲು ಆತನು ತನಗೆ ಮೇಲ್ಪಟ್ಟ ಅಧಿಕಾರಿಯಾಗಿ ಮದ್ರಾಸಿನಲ್ಲಿ ಕೆಲಸಮಾಡುತ್ತಿದ್ದ ಮೇಜರ್ ಲಾರೆನ್ಸ್‌ನಿಗೆ ಆ ಬಹುಮಾನವು ಸಲ್ಲಬೇಕಾದುದು ಯುಕ್ತವೆಂದು ಹೇಳಿದುದರಿಂದ ಆತನ ಔದಾರ್ಯವು ಇನ್ನೂ ಚೆನ್ನಾಗಿ ಪ್ರಕಟಗೊಂಡಿತು. ಹಿಂದೆ ಸಿಂಧುದೇಶಕ್ಕೆ ಮುತ್ತಿಗೆ ಹಾಕಬೇಕೆಂದು ಸರ್ ಜೇಮ್ಸ್ ಉಟ್ರಾಮನಿಗೆ ಮೇಲಿನವರು ಅಪ್ಪಣೆ ಮಾಡಲು ಆತನು ಅಲ್ಲಿ ಬಹಳ ಸಾಹಸಮಾಡಿ ಗೆದ್ದನು. ಅಲ್ಲಿ ನಡೆಯಿಸಿದ ಲೂಟಿಯಲ್ಲಿ ಲಕ್ಷಾಂತರ ದ್ರವ್ಯವು ಸಿಕ್ಕಿತು. 'ಇದೆಲ್ಲಾ ನಿನ್ನ ಸಾಹಸದಿಂದ ದೊರೆತುದಾದುದರಿಂದ ನೀನು ಬೇಕಾದಷ್ಟನ್ನು ತೆಗೆದುಕೊ ಎಂದು ಮೇಲ್ಪಟ್ಟವರು ಉಟ್ರಾಮನಿಗೆ ಹೇಳಲು ಆತನು—ಇದು ನನ್ನ ಸೈನಿಕರ ಪರಾಕ್ರಮದಿಂದ ಬಂದದ್ದು ಆದುದರಿಂದ ಎಲ್ಲವೂ ಅವರಿಗೇ ಸೇರತಕ್ಕದ್ದು ನಾನು ಒಲ್ಲೆನು' ಎಂದು ಹೇಳಿಬಿಟ್ಟನಂತೆ! ಒಂದೇ ತರಗತಿಯಲ್ಲಿ ಓದುತ್ತಿರುವ ಇಬ್ಬರು ವಿದ್ಯಾರ್ಥಿಗಳಲ್ಲಿ ಚೆನ್ನಾಗಿ ವ್ಯಾಸಂಗ ಮಾಡಿದವನೊಬ್ಬನು ಪರೀಕ್ಷೆಯಲ್ಲಿ ತೇರ್ಗಡೆಯಾದರೆ ಇನ್ನೊಬ್ಬನು ಸಂತೋಷಿಸುವುದು ಔದಾರ್ಯ. ಕರುಬುವುದು ಹೀನಾಯ. ಈ ವಿಷಯವಾಗಿ ಇನ್ನೂ ಎಷ್ಟೋ ಉದಾಹರಣೆಗಳಿರುವುವು

ಮಾತಾಡುವುದರಲ್ಲಿಕೂಡ ಔದಾರ್ಯವು ಆವಶ್ಯಕ. ಮನುಷ್ಯರೆಲ್ಲರೂ ಸಂಘದಲ್ಲಿ ಜೀವಿಸತಕ್ಕ ಪ್ರಾಣಿಗಳು. ಹುಲಿಕರಡಿಗಳಂತೆ ಕಾಡಿನಲ್ಲಿ ಒಂಟೊಂಟಿಯಾಗಿರತಕ್ಕವರಲ್ಲ. ಇವರು ತಮ್ಮ ಮಂಡಲಿಯ ನಡುವೆ ಸರಿಯಾಗಿ ಬಾಳಬೇಕಾದರೆ ಇತರರ ಮನಸ್ಸು ನೋಯದಂತೆಯೂ ಅವರ ಉಲ್ಲಾಸವು ಕುಂದದಂತೆಯೂ ನಡೆದುಕೊಳ್ಳಬೇಕು

ಮೋಣಕೈಯಾಡಿದರೆ ಮುಂಗೈಯಾಡುವುದು ಎಂಬಂತೆ ನಾವು ಇತರರ ವಿಷಯದಲ್ಲಿ ಹೇಗೆ ನಡೆಯುತ್ತೇವೋ ಅವರೂ ನಮ್ಮ ವಿಷಯದಲ್ಲಿ ಹಾಗೆಯೇ ನಡೆಯುತ್ತಾರೆ. ನಾಲ್ಕುಜನ ಸೇರಿದಾಗ ಒಂದು ಮಾತನ್ನೂ ಆಡದೆ ಕೆಲವರು ಬಾಯಿಗೆ ಬೀಗಮುದ್ರೆಯನ್ನು ಧರಿಸಿದವರಂತೆ ಸುಮ್ಮನಿರುತ್ತಾರೆ. ಅಪ್ರಯೋಜಕವಾದ ಮಾತುಗಳನ್ನಾಡುವುದೇನೋ ನಿಷಿದ್ಧವಾದರೂ ಯಾವಕೆಡುಕೂ ಇಲ್ಲದ ಸರ್ವಸಮ್ಮತವಾದ ಮಾತುಗಳನ್ನಾಡುವುದಕ್ಕೆ ಏನೂ ಅಡ್ಡಿ ಇಲ್ಲವಷ್ಟೆ. ಇಂಥವರೊಬ್ಬರು ಸುಮ್ಮನೆ ಕುಳಿತಿದ್ದರೂ ಜತೆಯಲ್ಲಿದ್ದವರಲ್ಲಿ ಕೆಲವರು ವಾಗ್ರೂಪವಾಗಿ ಪ್ರಶ್ನಿಸಿಯಾದರೂ ಅಥವಾ ನೋಟದ ಮೂಲಕ ಪ್ರಶ್ನೆಯನ್ನು ಸೂಚಿಸಿಯಾದರೂ ಇವರ ಅಭಿಪ್ರಾಯವನ್ನುಕೇಳಿ ಯಾರು ಆಗ್ಗೂ ಮಾತಾಡದೆ ಶ್ರೀಮದ್ಗಾಂಭೀರ್ಯವನ್ನುಧರಿಸಿಕೊಂಡಿರುವುದು ಒರಟುತನ. ಅಥವಾ ಸ್ವಪ್ರಯತ್ನದಿಂದ ಬಲಾತ್ಕಾರವಾಗಿ ಪಡೆದುಕೊಳ್ಳಬೇಕೆಂದಿರುವ ದೊಡ್ಡಮನುಷ್ಯತನ. ಮಾತಾಡಿದರೆ ಮುತ್ತು ಸುರಿದು ಹೋಗುವುದೋ ಏನೋ ಎಂದು ತಿಳಿದುಕೊಂಡಿರುವ ಜನಗಳು ಮಾತಿನಲ್ಲಿ ಕೂಡ ಇಷ್ಟು ಜಿಪುಣರಾಗಿರುವಲ್ಲಿ ಇತರ ವಿಷಯಗಳಲ್ಲಿ ಧಾರಾಳವಾದ ಮನಸ್ಸುಳ್ಳವರೆಂದು ಇವರನ್ನು ನಂಬುವ ಬಗೆಹೇಗೆ? ದೊಡ್ಡದೊಡ್ಡ ಪದವಿಗಳಲ್ಲಿರತಕ್ಕ ಭಾಗ್ಯಶಾಲಿಗಳೆಲ್ಲರೂ ಈ ಮೌನರೋಗವನ್ನು ತಾಳದೆ ಬಡಬಗ್ಗರು ಬಂದು ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳುವುದಕ್ಕೆ ಅವಕಾಶವನ್ನು ಕೊಟ್ಟು ಕಡೆಗೆ ದಯಾಮಯಗಳಾದ ಒಂದೆರಡು ನುಡಿಗಳಿಂದಲಾದರೂ ಆದರಿಸಬೇಕೇ ಹೊರತು ಅವರನ್ನು ತಳ್ಳಿಸಿಬಿಡುವುದಕ್ಕೆ ಯತ್ನಿಸಬಾರದು.

ಬೀದಿಯಲ್ಲಿ ಹೋಗುತ್ತಿರುವಾಗ ಪರಸ್ಥಳದವರು ದಾರಿಯನ್ನೋ ಅಥವಾ ಅವರಿಗೆ ಆವಶ್ಯಕವಾದ ಇನ್ನೇನಾದರೂ ಸಂಗತಿಯನ್ನೋ ಕೇಳಿದರೆ, ಓದು ಬಾರದವರು ದಯವಿಟ್ಟು ಒಂದು ಕಾಗದವನ್ನು ಓದಿ ಹೇಳಬೇ

ಕೆಂದು ಕೇಳಿದರೆ ಅವರನ್ನು ಗದ್ದರಿಸದೆ ಕೈಯುಲ್ಲಾದಮಟ್ಟಿಗೂ ಸಹಾಯ ಮಾಡಿ ಒಳ್ಳೆಯ ಮಾತುಗಳಿಂದ ಆದರಿಸುವುದು ಉತ್ತಮ ಇದರಿಂದ ನಾಲಗೆಯೇನೂ ಸವೆಯುವುದಿಲ್ಲ. ಅಥವಾ ಮರ್ಯಾದೆಗೆ ಕುಂದಕವೂ ಇಲ್ಲ.

ಹೆಚ್ಚು ತಿಳಿವಳಿಕೆಯುಳ್ಳವರು ಮಾತಿನಿಂದ ಮಾತ್ರವಲ್ಲದೆ ಕಾರ್ಯಗಳಲ್ಲಿ ಕೂಡ ಎಂಥ ಅಲ್ಪರಿಗೂ ಎಷ್ಟೋ ಸಹಾಯಗಳನ್ನು ಮಾಡುವರು. ಒಂದು ಸಾವಿರ ರೂಪಾಯಿ ಸಂಬಳದ ಒಬ್ಬ ದೊಡ್ಡ ಮನುಷ್ಯನು ಕುದುರೆಯಮೇಲೆ ಸವಾರಿಹೋಗುತ್ತಿದ್ದಾಗ ನಿರ್ಜನವಾದೊಂದು ರಸ್ತೆಯಲ್ಲಿ ಒಬ್ಬ ರೈತರ ಮುದುಕಿಯು ಬೆರಣಿಯ ಗೂಡೆಯನ್ನು ಇಳಿಸಿಕೊಂಡು ಸ್ವಲ್ಪ ಸುದಾರಿಸಿಕೊಂಡ ಬಳಿಕ ಪುನಃ ಆ ಗೂಡೆಯನ್ನು ತಲೆಯ ಮೇಲಿಟ್ಟುಕೊಳ್ಳಲಾರದೆ ತೊಂದರೆಪಡುತ್ತಿದ್ದುದನ್ನು ಕಂಡು ಕುದುರೆಯಿಂದಿಳಿದು ಸಹಾಯಮಾಡಿದನಂತೆ ! ಅಮೆರಿಕದ ಸಂಯುಕ್ತ ಸಂಸ್ಥಾನಗಳ ಪ್ರೆಸಿಡೆಂಟ್ ಆಗಿದ್ದ ಜಗತ್ಪ್ರಸಿದ್ಧನಾದ ಜಾರ್ಜ್‌ವಾಷಿಂಗ್‌ಟನು ಒಂದಾನೊಂದುಸಲ ವೇಷಧಾರಿಯಾಗಿ ಹೋಗಿ ಸರ್ಕಾರದ ಆಡಳಿತಗಳನ್ನು ಪರೀಕ್ಷಿಸುತ್ತಿದ್ದನು. ಆಗ ಎಂಟು ಹತ್ತು ರೂಪಾಯಿಗಳ ಸಂಬಳದ ಸಣ್ಣ ನೌಕರನೊಬ್ಬನು ತಾನು ಕೆಲಸಕ್ಕೆ ಸ್ವಲ್ಪವೂ ಕೈಹಾಕದೆ ಜಂಬದಿಂದ 'ಹಾ ಹೂ' ಎಂದು ಗರ್ಜಿಸುತನಿಂತು ಆ ಕೆಲಸವನ್ನು ಹೇಗೆ ಮಾಡಬೇಕೆಂಬುದೇ ಗೊತ್ತಿಲ್ಲದ ಇತರರನ್ನು ತೊಂದರೆಪಡಿಸುತ್ತಿರುವುದನ್ನು ಕಂಡು ಈ ವಾಷಿಂಗ್ಟನ್ನನು ತಾನೇ ಹೋಗಿ ಅದನ್ನು ಹೀಗೆ ಮಾಡಬೇಕೆಂದು ಮಾಡಿಯೇ ತೋರಿಸಿದನಂತ ! ನೆಪೋಲಿಯನ್ ಎಂಬ ಫ್ರೆಂಚ್ ಸರದಾರನು ತನ್ನ ಬಳಿಯಲ್ಲಿ ಕೈ ಸೆರೆಯಾಗಿದ್ದ ಒಬ್ಬ ಇಂಗ್ಲೀಷ್ ಸಿಪಾಯಿಯು ತನ್ನ ತಾಯನ್ನು ನೋಡಬೇಕೆನ್ನಲು ಅವನ ಮಾತೃಭಕ್ತಿಗೆ ಮೆಚ್ಚಿ ಅವನನ್ನು ತಾನೇ ಒಂದು ಹಡಗಿನಲ್ಲಿ ಕುಳ್ಳಿರಿಸಿ ವೆಚ್ಚಕ್ಕೆ ರೊಕ್ಕವನ್ನೂ ಕೊಟ್ಟು ಇಂಗ್ಲೆಂಡಿಗೆ ಕಳುಹಿಸಿದನಂತೆ ! ಮಹಾ ಅಲೆಗ್ಸಾಂದರನು ಪುರೂರವಸ್ಸಿಗೆ

ಕೊಟ್ಟ ಮರ್ಯಾದೆಯೂ ಇದಕ್ಕೊಂದು ದೃಷ್ಟಾಂತವಾಗಿರುವುದು ಇಂಥ ಕೆಲಸಗಳಿಂದ ಈ ದೊಡ್ಡ ಮನುಷ್ಯರುಗಳ ಔದಾರ್ಯವು ಪ್ರಕಟಗೊಂಡಿತೇ ವಿನಾ ಇವರಿಗೆ ಯಾವ ಅಪಮಾನವೂ ಆಗಲಿಲ್ಲ.

ತಮಗಿಂತಲೂ ಕೀಳಾದವರು ಯಾವ ವಿಧದಲ್ಲಿಯೂ ತಮಗೆ ಸರಿಸಮಾನರಾಗ ಕೂಡದೆಂದು ಅಲ್ಪಸ್ವಭಾವದ ಕೆಲವು ಜನಗಳು ಆಶಿಸುವರು, ಬಡವರ ಮಕ್ಕಳು ಬುದ್ಧಿವಂತರಾಗಕೂಡದು. ಕೈ ಕೆಳಗಿನ ಅಧಿಕಾರಿಗಳು ಬಿಳ್ಳಿಯ ಉಡುಪುಗಳನ್ನು ಧರಿಸಕೂಡದು, ತಮಗಿಂತ ಕೀಳಾದವರು ಹಬ್ಬ ಹರಿದಿನಗಳಲ್ಲಿ ತಮಗಿಂತಲೂ ಹೆಚ್ಚಾಗಿ ಅಥವಾ ತಮ್ಮ ಮಟ್ಟಿಗೂ ಉತ್ಸಾಹಪಡಕೂಡದು ಅವರು ಮಕ್ಕಳುಮರಿಗಳನ್ನು ಮುದ್ದಿಗಕೊಳ್ಳಕೂಡದು ಎಂದು ಕೋರುವ ಅತಿ ನೀಚಸ್ವಭಾವದ ದುರಾತ್ಮರೂ ಉಂಟು. ಇಂಥವರು ಔದಾರ್ಯಕ್ಕೆ ಶತ್ರುಪ್ರಾಯರು. ನಿಜವಾದ ಉದಾರಿಗಳಾದರೋ ಇಂಥ ಮೇಲೆಕಂಡ ವಿಷಯಗಳಲ್ಲಿ ತಮಗಿಂತ ಕೀಳಾದವರಿಗೆ ವಿಶೇಷ ಪ್ರೋತ್ಸಾಹವನ್ನುಂಟುಮಾಡುವರು.

ಯಾವುದರಲ್ಲೂ ಅತಿಯಾಗಿ ಹಿಡಿತವಿಲ್ಲದಿರುವುದು ಔದಾರ್ಯ. ಕೆಲವರು ತಾವು ಸ್ವಲ್ಪ ಪ್ರಯಾಸಪಟ್ಟರೂ ಇತರರಿಗೆ ಮಹೋಪಕಾರ ಮಾಡುವ ಸ್ಥಿತಿಯಲ್ಲಿರುವರು. ಆದರೂ ಅವರು ಅಷ್ಟಕ್ಕೂ ಮನಸ್ಸು ಕೊಡುವುದಿಲ್ಲ. ಇದು ಜಿಪುಣತನದ ಮಹಿಮೆ. ಇನ್ನು ಕೆಲವರು ಇಷು ಜನಕ್ಕೆ ಇಷ್ಟು ಅಡಿಗೆಯೇಕೆ? ತರಕಾರಿಯ ಹೋಳುಗಳು ಒಬ್ಬೊಬ್ಬರಿಗೆ ಎಷ್ಟೆಷ್ಟು ಬಂದಾವು! ಎರಡು ವೀಳೆಯದೆಲೆಗಳಿಗೆ ಬದಲಾಗಿ ನಾಲ್ಕನ್ನು ಉಪಯೋಗಿಸಿಕೊಂಡುದೇತಕ್ಕೆ ಎಂದು ತಮ್ಮ ಮನೆಯವರನ್ನು ಸದಾ ಆಕ್ಷೇಪಿಸುತ್ತಿರುವರು. ಇದರಿಂದ ಅವರಿಗೆ ಬೇಸರಹುಟ್ಟಿ ಉದ್ದೇಶಪೂರ್ವಕವಾಗಿ ದುಂದುಮಾಡಲು ಅವಕಾಶವಾಗಬಹುದಲ್ಲದೆ ಇಂಥವರ ಗೌರವವು ಮನೆಯಲ್ಲಿ ಕೂಡ ಕಾಸಿಗೆ ಕಡೆಯಾಗುವುದು. ಇಂಥ ಮನೆ

ಶಿಬಿ ಚಕ್ರವರ್ತಿಯೇ ಮೊದಲಾದ ಪುಣ್ಯಾತ್ಮರುಗಳು ಇವಕ್ಕೆ ಉತ್ತಮವಾದ ನಿದರ್ಶನಗಳಾಗಿದ್ದಾರೆ.

ಕೆಲವರು ಯಾವ ವಿಧಗಳಲ್ಲಿಯಾದರೂ ಪರೋಪಕಾರವಾಡುತ್ತಿದ್ದರೆ ತಮಗೆ ಉದಾರಿಗಳೆಂಬ ಹೆಸರುವಾಸಿಯುಂಟಾದೀತೆಂದು ನಂಬಿ ಬಳ್ಳೆಯ ಕೆಲಸಗಳನ್ನು ಮಾಡುತ್ತಾರೆ. ಇದರಿಂದ ಇತರರಿಗೇನೋ ಬಳ್ಳೆಯದಾಗುವುದು. ಆದರೂ ಹೀಗೆ ಉಪಕಾರವಾಡತಕ್ಕವರ ಉದ್ದೇಶವು ತಮಗೆ ದೊಡ್ಡಸ್ತಿಕೆಯುಂಟಾಗಬೇಕೆಂದಿರುವುದೇ ವಿನಾ ಇತರರಿಗೆ ಬಳ್ಳೆಯದಾಗಬೇಕೆಂದಿರುವುದಿಲ್ಲವಾದುದರಿಂದ ಇಂಥವರು ಹೀನಸ್ವಭಾವದವರೇ ಹೊರತು ಉದಾರಿಗಳಲ್ಲ. ಜನಗಳು ಈ ಬಳಗುಟ್ಟನ್ನು ತಿಳಿಯದೆ ಮರುಳುತನದಿಂದ ಇಂಥವರನ್ನು ಉದಾರಿಗಳೆಂದು ಬಂದುವೇಳೆ ಕರೆದರೂ ಅದಕ್ಕೆ ಇವರು ಅನರ್ಹರು. ಆದುದರಿಂದಲೇ ಜಂಭ, ಲೋಭ, ಆಸೆ ಇವು ಔದಾರ್ಯಕ್ಕೆ ವಿರುದ್ಧವಾದುವುಗಳು. ಯಾವ ವಿಧದಲ್ಲಿ ನೋಡಿದರೂ ದಯೆಯು ಅಸ್ವಾರ್ಥಪರತೆಯಿಂದ ಬೆರೆತಿದ್ದರೇನೇ ಔದಾರ್ಯವು ಹುಟ್ಟತಕ್ಕುದು. ಉದಾರಿಯಾದವನು ತನಗೆ ಉಂಟಾಗ ಬಹುದಾದ ಕೇಡನ್ನು ಕೂಡ ಪರಿಗಣಿಸದೆ ಇತರರಿಗೆ ಸಹಾಯವಾಡುವನು. ಇದರಿಂದ ತನ್ನ ಮತ್ತು ಇತರರ ಮನಸ್ಸಿಗೆ ಹಿತವುಂಟಾಗುವುದು. ಲೋಕದಲ್ಲಿ ಎಲ್ಲರೂ ಹೀಗೆ ಔದಾರ್ಯದಿಂದ ಪರಸ್ಪರ ಹಿತೈಷಿಗಳಾಗಿ ನಡೆದರೆ ಈ ಲೋಕವೇ ಭೂಸ್ವರ್ಗವಾಗುವುದರಲ್ಲಿ ಸಂಶಯವೇನು ?

## (23) ವಿವೇಕ.

ನಾವು ಸರಿಯಾಗಿ ಬಾಳಬೇಕಾದರೆ ಶಕ್ತಿಸಾಹಸಗಳಿಗಿಂತಲೂ ವಿವೇಕವು ಮುಖ್ಯವು. ಕೆಲವರಿಗೆ ಇದು ಸ್ವಾಭಾವಿಕವಾಗಿ ಇದ್ದೇ ಇರುವುದು. ಇಲ್ಲದವರು ಅಭ್ಯಾಸದಿಂದಲಾದರೂ ಪಡೆಯಬೇಕು. ನಾವು ಸದಾ ಸಂತೋಷಚಿತ್ತರಾಗಿರುವುದು ಮಾತ್ರವಲ್ಲದೆ ಇತರರನ್ನೂ ಸಂತೋಷಗೊ

ಷ್ಟರು ಕಡೆಕಡೆಗೆ ಹುಲ್ಲುಚರಣಿಯಲ್ಲಿರುವ ನಾಯಿಯಂತೆಯೇ ಆಗಿ ಹೋಗುವರು.

ಆದುದರಿಂದಲೇ ತ್ಯಾಗ ಭೋಗಗಳೂ ಶೌರ್ಯಾದಾರ್ಯಗಳೂ ಮತ್ತು ಲಾಭ್ಯಾ ಗೌರವಗಳೂ ಸರ್ವತ್ರ ಬೆರತೇ ಇರುವುವು ಎಂದು ತಿಳಿದವರು ಹೇಳುವರು. ಇನ್ನು ಕೆಲವರು ದುರ್ಬಲರಿಂದ ತಮಗೇನಾದರೂ ಅಪರಾಧಗಳು ನಡೆದರೂ ಅವನು ಮನಸ್ಸಿಗೆ ಹತ್ತಿಸಿಕೊಳ್ಳದೆ ಕ್ಷಮಿಸಿಬಿಡುವರು. ಇದು ಇವರ ಔದಾರ್ಯವನ್ನು ಲೋಕದಲ್ಲೆಲ್ಲಾ ಬಿತ್ತುವುದು. ಒಂದಾನೊಂದು ರಣರಂಗದಲ್ಲಿ ಒಬ್ಬ ದಳಪತಿಯು ಬಹಳ ಸಾಹಸಪಟ್ಟು ಶತ್ರುಸೈನ್ಯಕ್ಕನುಗ್ಗಿ ಅಲ್ಲಿದ್ದ ಬಾವುಟವನ್ನು ಕಿತ್ತುಕೊಂಡು ಬಂದು ತನ್ನ ಕೈ ಕೆಳಗಿನ ಒಬ್ಬ ಯೋಧನವಶಕ್ಕೆ ಕೊಡಲು ಅವನು ಅದನ್ನು ತೆಗೆದುಕೊಂಡು ಹೋಗುತ್ತ ದಾರಿಯಲ್ಲಿ ಉದ್ಧಕ್ಕೂ ಸೈನ್ಯದಲ್ಲೆಲ್ಲಾ ತಾನೇ ಬಲು ಕಷ್ಟಪಟ್ಟು ಆ ಶತ್ರು ಧ್ವಜವನ್ನು ತಂದುದಾಗಿ ಹೇಳಿಕೊಳ್ಳುತ್ತಿದ್ದನು, ಇದು ಆ ದಳಪತಿಗೆ ಗೊತ್ತಾದರೂ ಆತನು ಆಭಟನ ಮೇಲೆ ಕೋಪಿಸಿಕೊಳ್ಳದೆ ನಕ್ಕು ಅಯ್ಯೋಪಾಪ ಎಂದು ಹೇಳಿ ಸುಮ್ಮನಾದನಂತೆ ! ಇದು ಎಂಥಾ ಔದಾರ್ಯ ! ಇತರರಿಗೆ ಆಪತ್ಕಾಲದಲ್ಲಿ ಸಹಾಯಮಾಡತಕ್ಕದೂ ಔದಾರ್ಯವೇ ನೀರೊಳಗೆ ಮುಳುಗಿ ಸಾಯುತ್ತಿರುವವರನ್ನು ಈಚೆಗೆಳೆದು ಬದುಕಿಸುವುದು, ಅಥವಾ ತನಗೆ ಈಜು ಬಾರದಿದ್ದರೆಯೋ ಶಕ್ತಿಯಿಲ್ಲದೆಯೋ ಇದ್ದರೆ ಇತರರನ್ನಾದರೂ ಕರೆದು ಸಹಾಯ ಮಾಡಿಸುವುದು. ಪುತ್ರ ಮಿತ್ರಾದಿಗಳ ಮರಣದಿಂದ ಸಂಕಟಪಡುತ್ತಿರುವವರಿಗೆ ಸಮಾಧಾನ ಹೇಳುವುದು. ಪ್ರಬಲರು ದುರ್ಬಲರನ್ನು ಬಾಧಿಸುತ್ತಿರುವುದನ್ನು ಕಂಡರೆ ಉದಾಸೀನತೆಯಿಂದ ಸುಮ್ಮನಿರದೆ ದುರ್ಬಲರಿಗೆ ಒತ್ತಾಸೆಮಾಡುವುದು. ನೀನೇ ಗತಿಯೆಂದು ನಂಬಿ ಬಂದವರಿಗೆ ದ್ರೋಹಮಾಡದೆ ಸಾಧ್ಯವಾದಮಟ್ಟಿಗೂ ಸಹಾಯ ಮಾಡುವುದು ಇಂಥವುಗಳೆಲ್ಲಾ ಔದಾರ್ಯದ ಕಾರ್ಯಗಳೇ.

ಳಿಸುತ್ತಿರಬೇಕು. ಇದಕ್ಕೆ ಕೂಡ ವಿವೇಕವು ಆವಶ್ಯಕವು. ಮತ್ತು ಎಷ್ಟು ದ್ರವ್ಯದಿಂದಲೂ ಎಂಥ ಶಕ್ತಿಯಿಂದಲೂ ಸಾಧ್ಯವಾಗಲಾರದ ಕೆಲಸಗಳೆಲ್ಲಾ ವಿವೇಕದಿಂದ ಸುಲಭವಾಗಿ ಕೈಗೂಡುವುವು. ಏಕೆಂದರೆ ವಿವೇಕವು ಉತ್ತಮವಾದುದು. ' ಸೂರ್ಯ ಮತ್ತು ಗಾಳಿ ' ಎಂಬ ಕಥೆಯನ್ನೋದಿರುವವರಿಗೆ ವಿವೇಕದ ಮಹಿಮೆಯು ಚೆನ್ನಾಗಿ ಗೊತ್ತಿರುವುದು.

ವಿವೇಕಿಗಳು ಯಾವ ವಿಧವಾದ ಐಶ್ವರ್ಯ, ಪಾಂಡಿತ್ಯ, ಪದವಿ ಮೊದಲಾದುವುಗಳನ್ನು ಪಡೆಯದಿದ್ದರೂ ಲೋಕವನ್ನೆಲ್ಲಾ ವಶಪಡಿಸಿಕೊಂಡು ಜಗತ್ಪ್ರಸಿದ್ಧರಾಗಿರುವುದಕ್ಕೆ ಎಷ್ಟೋ ನಿದರ್ಶನಗಳಿವೆ. ವಿವೇಕವನ್ನು ಸಕಲ ವಿಷಯಗಳಲ್ಲೂ ತೋರ್ಪಡಿಸಬಹುದು. ಇಲ್ಲಿ ಕೆಲವು ಸಂಗತಿಗಳನ್ನು ತೆಗೆದುಕೊಂಡು ವಿವೇಕವಾಗಿ ನಡೆಯುವ ಬಗೆಯನ್ನು ತಿಳಿಯೋಣ. ಸಾಧ್ಯವಾಗುವ ಮಟ್ಟಿಗೂ ಪರೋಪಕಾರ ಮಾಡಬೇಕು. ಆದರೆ ಅಸಾಧ್ಯವಾದುದನ್ನು ಇಲ್ಲವೆಂದು ಹೇಳುವುದಕ್ಕೆ ಹೆದರಬಾರದು. ಏಕೆಂದರೆ-ದಾಕ್ಷಿಣ್ಯಕ್ಕೆ ಕಟ್ಟುಬಿದ್ದರೆ ನಮಗೆ ಕೇಡುಂಟಾದೀತು. ದಾಕ್ಷಿಣ್ಯದಿಂದ ಇತರರ ಸಾಲ ಮುಂತಾದುದಕ್ಕೆ ಹೊಣೆಯಾಗಿ ಎಷ್ಟೋ ಜನರು ಮುಳುಗಿ ಹೋಗಿದ್ದಾರೆ. ಆದರೆ ಇಲ್ಲವೆಂಬುದನ್ನು ಕೇವಲ ಮರ್ಯಾದೆಯಿಂದಲೂ ಸೌಮ್ಯತೆಯಿಂದಲೂ ಹೇಳಬೇಕು. ಏಕೆಂದರೆ ಒಂದಾವೃತ್ತಿ ನಮ್ಮಲ್ಲಿ ಬಂದವರು ಮತ್ತೊಂದು ಸಲ ಬರಲು ಬೇಸರಪಡದಂತೆ ಮಾಡುವುದು ಮಾತ್ರವಲ್ಲದೆ ಪುನಃ ನಮ್ಮಲ್ಲಿ ಬರುವುದೆಂದರೆ ಅವರಿಗೆ ಏನೋ ಒಂದು ಸಂತೋಷವೆಂಬ ಭಾವನೆಯೂ ಹುಟ್ಟುವಂತೆಯೂ ಮಾಡಬೇಕು. ನಾವು ಇತರರ ವಿಷಯದಲ್ಲಿ ಒಳ್ಳೆಯವರಾಗಿರಬೇಕೆಂದರೆ ಮನಸ್ಸು ಮಾತ್ರ ಹಾಗಿದ್ದರೆ ಸಾಲದು ನಮ್ಮ ಹೊರಗಿನ ನಡತೆಯಿಂದಲೂ ಆ ಒಳ್ಳೆಯತನವು ಪ್ರಕಟಗೊಳ್ಳಬೇಕು. ಇಂಥ ಒಳ್ಳೆಯ ನಡತೆಯನ್ನು ಬಾಲ್ಯದಿಂದಲೂ ಅಭ್ಯಾಸ ಮಾಡಿಮಾಡಿ ರೂಢಿಗೆ ತಂದುಕೊಳ್ಳಬೇಕು.

ಯಾವ ಕೆಲಸವನ್ನು ಮಾಡುವಾಗಲೂ ಯಾವ ಹೊಸಬರನ್ನು ಹೊಸ ಸ್ಥಳವನ್ನು ಇತರ ಯಾವ ಹೊಸದನ್ನು ಕಂಡಾಗಲೂ ಅನಾಹುತ ಸಮಯಗಳಲ್ಲೂ ಗಾಬರಿಗೊಳ್ಳದೆ ಶಾಂತಿಯಿಂದ ನಡೆಯಬೇಕು. ಗಾಬರಿ ಪಟ್ಟರೆ ಚಿತ್ತಕ್ಷೋಭೆಯಿಂದ ದೇಹದ ಆರೋಗ್ಯವೂ ಕೆಟ್ಟುಹೋದೀತು. ಇತರರು ನಮಗಿಂತ ಕೀಳಾಗಿದ್ದರೆ ಅವರನ್ನು ಪರಿಹಾಸಮಾಡಬಾರದು. ಏಕೆಂದರೆ—ನಮಗಿಂತ ಮೇಲಾದವರು ಎಷ್ಟೋ ಜನರು ಇದ್ದೇ ಇರುವರು. ನಮ್ಮ ಮೇಲ್ಮೆಯು ಸ್ವಾರ್ಜಿತವೇ ಪಿತ್ರಾರ್ಜಿತವೇ ಅಥವಾ ದೈವಾನುಗ್ರಹವೇ ಎಂಬುದನ್ನು ಪರಿಶೀಲಿಸಬೇಕು. ಕೇವಲ ಬುದ್ಧಿಶಾಲಿಯು ದಡ್ಡನನ್ನೂ ಸುಂದರನು ಕುರೂಪಿಯನ್ನೂ ಪರಿಹಾಸಮಾಡುವುದು ನಿಷಿದ್ಧ. ಏಕೆಂದರೆ—ಇದೆಲ್ಲಾ ದೈವಿಕವು ಮನುಷ್ಯ ಯತ್ನಕ್ಕೆ ಮೀರಿದುದು.

ಲೋಕವ್ಯವಹಾರವನ್ನು ಚೆನ್ನಾಗಿ ತಿಳಿಯಬೇಕಾದರೆ ಪುಸ್ತಕಗಳಿಂದಲೇ ಕಲಿಯುವುದಕ್ಕಿಂತಲೂ ಪ್ರತ್ಯಕ್ಷಾನುಭವವು ಮೇಲು. ತತ್ರಾಪಿ ಜನಗಳ ಸ್ವಭಾವವನ್ನು ತಿಳಿಯಬೇಕಾದರೆ ಅವರ ಚಹರೆಗಳನ್ನೆಲ್ಲಾ ಪರಿಶೀಲಿಸಬೇಕು. ಒಬ್ಬ ಮನುಷ್ಯನು ಬಾಯಿಂದ ಒಂದು ಸಂಗತಿಯನ್ನು ಹೇಳುತ್ತಿರುವಾಗ ಅವನ ಕಣ್ಣನ್ನು ನೋಡಿದರೆ ಅವನ ಮಾತಿನ ಯೋಗ್ಯತೆಯು ಎಷ್ಟರ ಮಟ್ಟನದೆಂಬುದು ವ್ಯಕ್ತವಾಗುವುದು. ಆದುದರಿಂದಲೇ ಕಣ್ಣಿನಿಂದ ಸ್ವಭಾವವು ಗೊತ್ತಾಗುವುದೆನ್ನುವರು. ಕೇವಲ ಪ್ರಸಿದ್ಧಿಗೆ ಬಂದಿರುವುದನ್ನೆಲ್ಲಾ ಥಟ್ಟನೆ ನಂಬಬಾರದು. ಏಕೆಂದರೆ—ಲೋಕದಲ್ಲಿ ಎಲ್ಲರೂ ತಾವು ಹೆಸರುವಾಸಿಗೆ ಬರುವವರೆಗೂ ಪ್ರಾಮಾಣಿಕತೆಯಿಂದ ನಡೆಯುವರು. ಆದರೆ ಹಾಗೆ ಖ್ಯಾತಿಯನ್ನು ಪಡೆದ ನಂತರವೂ ಸರಿಯಾಗಿ ನಡೆಯತಕ್ಕ ಮಹಾತ್ಮರು ಬಲುಕಡಿಮೆ. ಕೇವಲ ಹೊಸಬರು ಕೊಟ್ಟ ಆಗ್ವಾಸನವು ನಂಬಿಕೆಗೆ ಅಷ್ಟು ಅರ್ಹವಾದುದಲ್ಲ. ಏಕೆಂದರೆ—ಅವರು ಹಾಗೆ ಹೇಳುವುದರಲ್ಲಿ ಸ್ವಾರ್ಥಪರತೆಯೋ ದಂಭವೋ ಏನೋ ಒಂದು

ಉದ್ದೇಶವಿರಬಹುದೇ ವಿನಾ ಬರೀ ಪಾರಮಾರ್ಥಿಕತೆಯಿಂದ ನಡೆಯುವ ಪ್ರಾಣ್ಯಾತ್ಮರು ಬಲು ಮಂದಿಯಿಲ್ಲ. ಗುರುತು ಕಂಡವರನ್ನೆಲ್ಲಾ ಮಿತ್ರರೆಂದು ಭಾವಿಸಕೂಡದು ಏಕೆಂದರೆ ಥಳಥಳಿಸುವುದೆಲ್ಲಾ ಚಿನ್ನವಾಗಲಾರದು. ಆದರೆ ಹೀಗೆಂದು ಎಲ್ಲರಲ್ಲೂ ಸಂಶಯಪಡಬಾರದು. ಏಕೆಂದರೆ—ಪ್ರತ್ಯಕ್ಷವಾದರೂ ಪರಾಮರ್ಶಿಸಿ ನೋಡಬೇಕೆಂದು ಗಾದೆಯೇ ಹುಟ್ಟಿರುವುದು.

ಮನುಷ್ಯರಾದ ನಾವು ವಿಚಾರಶಕ್ತಿಯುಳ್ಳವರೆಂದೂ ಭಗವತ್ಸೃಷ್ಟಿಯಲ್ಲಿ ಅಗ್ರಗಣ್ಯರೆಂದೂ ಅಹಂಕಾರಪಡುವೆವಾದರೂ ಎಷ್ಟೋ ವೇಳೆ ಅರಿಷಡ್ವರ್ಗಗಳಿಗೆ ಅಧೀನರಾಗಿ ಇಂದ್ರಿಯ ಪರವಶತೆಯಿಂದ ಅಕಾರ್ಯಗಳನ್ನು ಮಾಡುತ್ತಿದೇವೆ. ಅಲ್ಲದೆ ಇಂಥ ರಾಗದ್ವೇಷಗಳ ಮೂಲಕ ಇತರರನ್ನು ನೋಡುವೆವೇ ಹೊರತು ನಿಷ್ಪಕ್ಷಪಾತವು ನಮ್ಮೆಲ್ಲರಲ್ಲೂ ಎಂದಿಗೆ ಬೇರೂರುವುದೋ ಅಂದಿಗೆ ನಮ್ಮ ವಿಚಾರಶಕ್ತಿಯು ಸಾರ್ಥಕವಾಗುವುದು. ವಾಗ್ವಾದವು ಕೆಲವುವೇಳೆ ಪರಸ್ಪರ ಮನಸ್ತಾಪಗಳನ್ನೂ ದ್ವೇಷಾಸೂಯೆಗಳನ್ನೂ ಉಂಟುಮಾಡುವುದು. ವಾಗ್ವಾದದಲ್ಲಿ ನಾವೇ ಗೆದ್ದರೂ ಇದರಿಂದ ಒಂದೊಂದುವೇಳೆ ಸ್ನೇಹಕ್ಕೆ ಲೋಪಬರುವ ಸಂಭವವೂ ಕೂಡ ಉಂಟು. ಚರ್ಚಿಸಬೇಕಾದುದು ಅಷ್ಟು ಆವಶ್ಯಕವಾದರೆ ಇದಿರುಪಕ್ಷದವರು ಹೇಳುವುದನ್ನೆಲ್ಲಾ ಶಾಂತಿಯಿಂದ ಕೇಳಿ ಬಳಿಕ ನಮ್ಮ ಕಾರಣಗಳನ್ನು ಸ್ಪಷ್ಟವಾಗಿ ಅವರಿಗೆ ತಿಳಿಯಹೇಳಬೇಕು. ನಾವು ಮಾತಿನಲ್ಲಿ ಅವರನ್ನು ಗೆದ್ದ ಮಾತ್ರದಿಂದಲೇ ಅವರ ಮನಸ್ಸನ್ನೂ ಅಭಿಪ್ರಾಯವನ್ನೂ ಒಪ್ಪಿಸಿ ಗೆದ್ದಂತೆ ಆಗಲಾರದು. ಆದುದರಿಂದ ಅವರ ಮನಸ್ಸನ್ನು ಒಪ್ಪಿಸತಕ್ಕುದೇ ಮುಖ್ಯವು. ಚರ್ಚೆಯಲ್ಲಿ ಮಾತ್ರವಲ್ಲದೆ ಸಾಮಾನ್ಯವಾಗಿ ಮಾತಾಡುವುದರಲ್ಲೂ ಕಡೆಗೆ ಇತರರ ಮಾತನ್ನು ಆಲಿಸುವುದರಲ್ಲೂ ವಿವೇಕವು ಆವಶ್ಯಕವು. ಇತರರು ಮಾತಾಡಿದುದನ್ನೆಲ್ಲಾ ಆಕ್ಷೇಪಿಸುವುದು, ಬೇಗ ನಮ್ಮ ಅಭಿಪ್ರಾಯಗಳನ್ನು ಹೇಳಲು ಆತುರಪಡುವುದು, ಇಂಥಾದ್ದೆಲ್ಲಾ ಒರಟುತನವೆನಿಸುವುದು.

ಅವರ ಮನೋಭಾವಗಳನ್ನು ತಿಳಿಯಬೇಕಾದುದು ಮೊದಲನೆಯ ಕೆಲಸ. ನಾವು ದಯಾಳುಗಳಾಗಿ ಮೃದುವಾದ ಧ್ವನಿಯಿಂದ ತಕ್ಕ ಉತ್ತರಗಳನ್ನು ಹೇಳಬೇಕು. ಹೀಗೆ ಮಾಡುತ್ತ ಬಂದರೆ ಇಬ್ಬರ ಮನಸ್ಸೂ ಸಂತೋಷ ದಿಂದ ತೃಪ್ತಿಗೊಳ್ಳುವುದು. ಮತ್ತು ಅನೇಕರು ಸಲಹೆಗಾಗಿ ನಮ್ಮಲ್ಲಿಗೆ ಬರುವರು. ಬೇಸರ ಪಡದೆಯೂ ಸಿಡುಕಿಲ್ಲದೆಯೂ ಮೃದುವಾದ ಸ್ವರ ದಿಂದ ಹೇಳುವ ಉತ್ತರವು ಕೇಳುವವರಿಗೆ ಕರ್ಣಾಮೃತಪ್ರಾಯವಾಗು ವುದು. ಏತಕ್ಕೆ ಇತರರು ನಕ್ಕರೂ ನಮ್ಮನ್ನೇ ನೋಡಿ ನಕ್ಕರೆಂದು ಸಂಶ ಯಪಡಬಾರದು. ಒಂದುವೇಳೆ ಹಾಗೆ ಅದೇ ದಿಟವಾಗಿದ್ದರೆ ನಾವೂ ಅವ ರೊಡನೆ ನಕ್ಕು ಬಿಡುವುದೊಳ್ಳೆಯದು. ಆಗ್ಗ ಅವರು ಸುಮ್ಮನಾಗುವರು. ಮತ್ತು ಇದರಿಂದ ಅವರ ವಿನೋದದಲ್ಲಿ ನಮಗೂ ಸ್ವಲ್ಪಭಾಗವು ಸಿಕ್ಕಿದಂ ತಾಗುವುದು. ಹಾಗೆ ಮಾಡದೆ ತಲೆಯನ್ನು ತಗ್ಗಿಸಿಕೊಂಡರೆ ಮತ್ತಷ್ಟು ಪೆಚ್ಚು ಬೀಳಬೇಕಾಗುವುದು. ನಾವು ನ್ಯಾಯವಾಗಿ ನಡೆದಿದ್ದರೂ ಅದನ್ನು ತಿಳಿಯದೆ ಇತರರು ಪರಿಹಾಸ ಮಾಡಿದರೆ ಅದಕ್ಕಾಗಿ ನಾವು ವೃಥಾ ಕೊರಗ ಬಾರದು. ಇದರಿಂದ ಆರೋಗ್ಯಕ್ಕೆ ಭಂಗ ಬಂದೀತು.

ಸ್ವವಿಷಯವನ್ನು ಹೊಗಳಿಕೊಳ್ಳುವುದು ಅಥವಾ ದೂಷಿಸಿಕೊಳ್ಳು ವುದು ಇವೆರಡೂ ನಮ್ಮ ಕೆಲಸವಲ್ಲ. ಇತರರಿಗೆ ಸೇರಿದುದು ಅಪರಿಷ್ಟ ಬಂದಂತೆ ಆಡಿಕೊಳ್ಳಲಿ ಅನಾವಶ್ಯಕವಾಗಿ ಇಂಥವರು ಕೆಟ್ಟವರು ಎಂದು ನಾವಾಗಿಯೇ ಯಾರನ್ನೂ ದೂರಬಾರದು. ಮತ್ತು ಒಂದು ಜನಾಂಗದವರು ಮತ್ತೊಂದು ಜನಾಂಗದವರನ್ನು ಹೀಯಾಳಿಸುವುದು ಮೊದಲಾದುದು ಅಯು ಕ್ತವು. ಆದರೆ ಇದಕ್ಕಿಂತಲೂ ಒಂದು ವ್ಯಕ್ತಿಯು ಮತ್ತೊಂದು ವ್ಯಕ್ತಿ ಯನ್ನು ದೂಷಿಸುವಂಥ ತಪ್ಪೇ ಲೋಕದಲ್ಲಿ ಅತಿಯಾಗಿದೆ. ಇತರರನ್ನು ದೂರಿ ಅಪಹಾಸಮಾಡಿ ಹೀಯಾಳಿಸುವುದರಿಂದ ನಮಗೆ ಯಾವ ಪ್ರಯೋ ಜನವೂ ಉಂಟಾಗಲಾರದಲ್ಲದೆ ನಮ್ಮ ಕೆಲಸಗಳು ಕೆಟ್ಟುಹೋಗುವುದೂ

ಖಂಡಿತ. ಪ್ರತಿಯೊಂದು ನಡವಳಿಕೆಯಲ್ಲೂ ತಾಳ್ಮೆಯಿಂದಿರಬೇಕು. ದುಡುಕಿ ನಡೆದು ಬಿಚ್ಚ ಬಹುದಾದ ಗಂಟನ್ನು ಕತ್ತರಿಸಲು ಯತ್ನಿಸುವ ದಡ್ಡನಂತೆ ರಸಾಭಾಸಮಾಡಿಕೊಳ್ಳಬಾರದು. ಸ್ವಪ್ರಯೋಜನಾಪೇಕ್ಷೆಗಿಂತಲೂ ಪರಾರ್ಥಕ್ಕಾಗಿಯೇ ಹೊಡೆದಾಡುವ ಪುಣ್ಯಾತ್ಮರು ಕೆಲವರಾದರೂ ಉಂಟು ಎಂಬುದನ್ನು ಮರೆಯಬಾರದು. ಕರೆಯದಿದ್ದ ಕಡೆಗೆ ಹೋಗಬಾರದು. 'ದೇಶೋವಿಶಾಲಃ ಪ್ರಭವೋಪ್ಯನಂತಾಃ' ಎಂಬಂತೆ ಲೋಕವು ವಿಸ್ತಾರವಾಗಿರುವಲ್ಲಿ ಕರೆಯದ ಕಡೆಗೆ ಹೋಗಿ ಅವಮಾನ ಪಡುವುದೇತಕ್ಕೆ? ಅದಕ್ಕೆ ಬದಲು ಒಂದು ಬಯಲಿಗೆ ಹೋಗಿ ಭಗವಂತನ ಸೃಷ್ಟಿ ವೈಚಿತ್ರ್ಯವನ್ನಾದರೂ ನೋಡಿ ಏತಕ್ಕೆ ಸಂತೋಷ ಪಡಬಾರದು? ಯಾರೇನು ಹೇಳಿದರೂ ಅದರಲ್ಲಿ ಕೊಂಕು ಕೊರತೆಗಳನ್ನೆಣಿಸುತ್ತ ಅವಾಚ್ಯವನ್ನು ನುಡಿಯುವ ದುಸ್ಸ್ವಭಾವವು ಕೆಲವಲ್ಲಿ ಉಂಟು. ಅಂಥವರು ಅದನ್ನು ತಿದ್ದಿಕೊಳ್ಳಬೇಕು. ಜನಗಳ ಯೋಗ್ಯತೆಯನ್ನು ತಿಳಿಯುವುದು ಶಾಸ್ತ್ರಾರ್ಥಗಳನ್ನು ತಿಳಿಯುವುದಕ್ಕಿಂತಲೂ ಕಷ್ಟವು. ಮುಖ್ಯವಾಗಿ ನಮ್ಮ ಜತೆಗಾರರ ಮತ್ತು ನಮ್ಮ ಕೈಕೆಳಗಿನವರ ಯೋಗ್ಯತೆಯೇನು ನಡತೆಯು ಹೇಗೆ? ನಂಬಿಕೆಗೆ ಅರ್ಹರೆ? ಇಂಥಾದ್ದನ್ನೆಲ್ಲಾ ತಪ್ಪದೆ ತಿಳಿದುಕೊಂಡು ಅವರವರ ಸ್ಥಿತಿಗಳಿಗೆ ತಕ್ಕಂತೆ ಅವರನರನ್ನು ಕಾಣುತ್ತ ಬರಬೇಕು. ಯಾರ ನಡತೆಯ ವಿಷಯದಲ್ಲಿ ನಮಗೆ ಸಂಶಯ ಬರುವುದೋ ಅವರನ್ನು ನಮ್ಮ ಹತ್ತಿರ ಯಾವ ಕೆಲಸಕ್ಕೂ ಸೇರಿಸಬಾರದು. ಅಷ್ಟು ಪರೀಕ್ಷಿಸಿ ಸೇರಿಸಿದ ನಂತರ ಅವರಲ್ಲಿ ಸಂಶಯಪಡಬಾರದು. ಎಡಗೈ ಬಲಗೈ ನಂಬದೆ ಇರುವುದಕ್ಕಿಂತಲೂ ನಂಬಿ ನೋಡುವುದುತ್ತಮ. ಯಾವಾಗಲೂ ಸ್ವಬುದ್ಧಿಯಿಂದ ಬಾಳುವುದು ಮೇಲು. ಮತ್ತು ವಾಙ್ನಿಗ್ರಹವು ಅತ್ಯಾವಶ್ಯಕವು. ಆದುದರಿಂದಲೇ ಬುದ್ಧಿವಂತನ ಬಾಯಿ ಮನಸ್ಸಿನಲ್ಲಿರುವುದು, ದಡ್ಡನ ಮನಸ್ಸು ಬಾಯಲ್ಲಿರುವುದು ಎಂದು ಒಬ್ಬ ದೊಡ್ಡ ವಿದ್ವಾಂಸನು ಹೇಳಿದ್ದಾನೆ. ಮಾತಾಡುವುದ

ಕ್ಕಿಂತಲೂ ಮುಂಚೆ ಆಲೋಚಿಸಬೇಕು. ಸಂಭಾಷಣೆಗೆ ಬೆಲೆಯು ಬೆಳ್ಳಿಯಾದರೆ ಮೌನದ ಬೆಲೆಯು ಚಿನ್ನವೆಂದು ದೊಡ್ಡವರು ಹೇಳುವರು. ಮಾತಾಡುವುದಕ್ಕೆ ವಿಷಯವೇನೂ ಇಲ್ಲದಿದ್ದರೂ ಅನೇಕರು ಹರಟೆಗೋಸ್ಕರ ವೃಥಾ ಮಾತಾಡಿ ತಮ್ಮ ಶಕ್ತಿಯನ್ನೂ ಕಾಲವನ್ನೂ ವೃಥಾ ಕಳೆದುಕೊಳ್ಳುವರು. ಇದರಿಂದ ಆಡಬಾರದ ಮಾತುಗಳು ಕೂಡ ಅಕಸ್ಮಾತ್ತಾಗಿ ಬಾಯಿಂದ ಹೊರಟು ಬಹಳ ಅನರ್ಥಗಳನ್ನುಂಟುಮಾಡಿಯಾವು. ಮತ್ತು ಯಾರ ವಿಷಯದಲ್ಲಿ ಈ ಮಾತುಗಳು ನಡೆಯುವುವೋ ಅಂಥವರಿಗೂ ನಮಗೂ ಮನಸ್ತಾಪಕ್ಕೂ ದ್ವೇಷಾಸೂಯೆಗಳಿಗೂ ಅವಕಾಶವಾದೀತು. ಡೆಮೊರಾಟಿಸ್ ಎಂಬ ಪಂಡಿತನು ಒಂದು ಮಂಡಲಿಯಲ್ಲಿ ಮೌನವಾಗಿದ್ದುದನ್ನು ಕಂಡು ಅಲ್ಲಿದ್ದವರು—'ಇದೇಕೆ ಮೌನವಾಗಿದ್ದೀಯೆ? ನೀನೇನು ಬುದ್ಧಿಯಿಲ್ಲದ ದಡ್ಡನೆ? ಅಥವಾ ಮಾತು ಬಾರದೆ? ಎಂದು ಕೇಳಿದ್ದು ಆತನು—ಬುದ್ಧಿಯಿಲ್ಲದವರಿಗೆ ನಾಲಗೆಯು ಹದ್ದಿನಲ್ಲಿರುವುದು ಅಂಥವನ್ನು' ಎಂದು ಉತ್ತರ ಕೊಟ್ಟನಂತೆ!

ಇತರರಿಗಿಂತ ನಾವೇ ದೊಡ್ಡವರೆಂದು ತೋರಿಸಿಕೊಳ್ಳಬಾರದು. ಏಕೆಂದರೆ—ನಮಗಿಂತಲೂ ಕೀಳೆನಿಸಿಕೊಳ್ಳುವುದಕ್ಕೆ ಇತರರ ಮನಸ್ಸು ಸಂಕಟಪಡುವುದು. ಯಾವುದನ್ನೂ ಹೀಗೆಯೇ ಸರಿಯೆಂದು ಅಷ್ಟು ದೃಢವಾಗಿ ಹೇಳಿ ಹಠವನ್ನು ಸಾಧಿಸಬಾರದು. ಎಷ್ಟೋ ವೇಳೆ ನಮ್ಮ ಸ್ಮೃತಿ ಶಕ್ತಿಯೂ ಕಡೆಗೆ ನಮ್ಮ ಕಣ್ಣು ಕಿವಿಗಳು ಕೂಡ ನಮ್ಮನ್ನು ಮೋಸಗೊಳಿಸುವುವು. ಸರಿಯಾದ ಸಮಯ ಸಂದರ್ಭಗಳು ದೊರೆಸುದಿದ್ದರೆ ದೊರೆಯುವವರೆಗೂ ತಾಳ್ಮೆಯಿಂದ ನಿರೀಕ್ಷಿಸಬೇಕು. ಏಕೆಂದರೆ ಬೇಸಗೆಯಲ್ಲಿ ಎಡವಿದ ಕಲ್ಲನ್ನು ಮಳೆಗಾಲದಲ್ಲಿ ಕೀಳುವುದುತ್ತಮವಲ್ಲವೆ? ಕೇವಲ ಚಪಲಚಿತ್ತರಾಗಿ ಕಂಡು ಕಂಡುದನ್ನೆಲ್ಲಾ ಹಾರಯಿಸಬಾರದು. ಯಾವುದರಲ್ಲೂ ತಪ್ಪಿಗೆ ಅವಕಾಶಕೊಡದಂತೆ ನಡೆಯಬೇಕು. ಆದರೆ ಅದಕ್ಕಾಗಿ ಅತ್ಯಂತ

ಪ್ರಯತ್ನಗಳನ್ನು ಮಾಡಬಾರದು. ಏಕೆಂದರೆ—ಲೋಕದಲ್ಲಿ ತಪ್ಪುಮಾಡದ ಮನುಷ್ಯರೇ ಇಲ್ಲ. ಉಡುಪುಗಳನ್ನು ಅಂದವಾಗಿ ಧರಿಸಬೇಕು. ಆದರೆ ಇದಕ್ಕಾಗಿ ಹೆಚ್ಚು ಕಾಲವನ್ನು ಕಳೆಯಬಾರದು. ಬಟ್ಟೆಗಳಿಗಾಗಿ ಹೆಚ್ಚು ಹಣವನ್ನು ವೆಚ್ಚಮಾಡಬಾರದು. ಅವು ಗುಣದಲ್ಲಿ ಮೇಲಾಗಿದ್ದರೆ ಸಾಕು. ಬಟ್ಟೆಗಳನ್ನು ಧರಿಸುವುದರಲ್ಲಿ ಅಕ್ರಮವಾಗಿ ನಡೆದರೆ ಇತರ ವಿಷಯಗಳಲ್ಲೂ ನಾವು ಅಕ್ರಮವೆಂದೇ ಜನಗಳು ತಿಳಿದುಕೊಳ್ಳುವರು.

ಹತ್ತು ಜನಗಳ ನಡುವೆಯಿದ್ದಾಗ ಯೋಗ್ಯರೂ ನಡತೆವಂತರೂ ಆದ ದೊಡ್ಡವರ ನಡೆನುಡಿಗಳನ್ನು ನೋಡಿ ಗ್ರಹಿಸುತ್ತಿರಬೇಕು. ನಾವು ಇತರರ ಸಂಗಡ ಮಾತಾಡುತ್ತಿರುವಾಗ ನಮ್ಮ ದೃಷ್ಟಿಯನ್ನೂ ಮುಖಭಾವವನ್ನೂ ಅವರ ಕಡೆಗೇ ಇಟ್ಟಿರಬೇಕು. ಮತ್ತು ಅವರ ಕಿವಿಗೆ ನಮ್ಮ ಮಾತುಗಳಿಂದ ಹಿತವನ್ನುಂಟುಮಾಡಬೇಕು. ಇಷ್ಟಾದರೆ ಅವರ ಹೃದಯವು ತಾನಾಗಿ ನಮ್ಮಧೀನವಾಗುವುದು.

ಈ ಪ್ರಪಂಚವೇ ಒಂದು ನಾಟಕದ ರಂಗಸ್ಥಳವು. ನಾವುಗಳೆಲ್ಲರೂ ಪಾತ್ರಗಳು. ಹೇಗೆಹೇಗೆ ಆಡಿದರೆ ನಾಟಕವು ಚೆನ್ನಾಗಿ ಆದೀತೆಂಬುದನ್ನು ಪ್ರತಿಯೊಬ್ಬರೂ ಆಲೋಚಿಸಿ ಅದಕ್ಕೆ ತಕ್ಕಂತೆ ನಡೆಯಬೇಕು. ಎಲ್ಲರಿಗೂ ಒಳ್ಳೆಯವರಾಗಿ ಎಲ್ಲರಿಂದಲೂ ಒಳ್ಳೆಯವರೆನಿಸಿಕೊಳ್ಳುವುದಕ್ಕೆ ನಮ್ಮ ಕೈಯಲ್ಲಾಗುವ ಮಟ್ಟಿಗೂ ಪ್ರಯತ್ನ ಮಾಡಬೇಕು. ಜನಗಳು ಮೇಲೆ ಮಾತ್ರ ಒಳ್ಳೆಯವರೆಂದು ಹೇಳಿದರೆ ಸಾಲದು. ಅದು ದಿಟವಾಗಿಯೂ ಇರಬೇಕು. ಒಬ್ಬ ದೊಡ್ಡಮನುಷ್ಯನು ತನ್ನ ಮಗನನ್ನು ಎಲ್ಲರೂ ಪ್ರೀತಿಸುವರೆಂಬುದನ್ನು ಕೇಳಿ—'ಅವನು ನನ್ನ ಮಗನೆಂಬುದನ್ನು ತಿಳಿಯದೆ ಜನಗಳು ಅವನನ್ನು ಪ್ರೀತಿಸಿದ್ದರೆ ನಾನು ಇನ್ನೂ ಹೆಚ್ಚಾಗಿ ಸಂತೋಷಿಸುತ್ತಿದ್ದೆನು.' ಎಂದನಂತೆ! ನಾಲ್ಕುಜನರ ನಡುವೆ ನಮ್ಮ ಬಾಳು ನಾಚಿಕೆಗೀಡಾದೀತಲ್ಲಾ ಎಂದು ಹೆದರಿ ನಡೆಯಬೇಕು. ಹೀಗೆ ಮಾನಕ್ಕೆ ಹೆದರುವವರು ಒಳ್ಳೆಯ

ಸಹಿತೆಸಂತರಾಗುವರು, ಹೀಗಿಲ್ಲದವರು ಮೊಂಡು ಬೀಳುವ ಮೊದ್ದುಕತ್ತೆಗಳಿಗಿಂತಲೂ ಕೀಳಾದ ಭಂಡಜನರು ಅವರ ಬಾಳು ವ್ಯರ್ಥ.

## (24) ಸ್ವಭಾವ.

ಒಬ್ಬ ಮನುಷ್ಯನನ್ನು ಇತರರ ದೆಸೆಯಿಂದ ಪ್ರತ್ಯೇಕಿಸುವ ವಿಷಯದಲ್ಲಿ ರೂಪ, ವರ್ಣ, ಧ್ವನಿ ಇವುಗಳೆಲ್ಲಕ್ಕಿಂತಲೂ ಸ್ವಭಾವವು ಪ್ರಬಲತರವಾದುದು. ಈ ಮುಂದಿನ ಅಂಶಗಳನ್ನು ಪರಿಶೀಲಿಸುವುದರಿಂದ ಸ್ವಭಾವದ ಸ್ವರೂಪವನ್ನು ತಕ್ಕಮಟ್ಟಿಗೆ ನಿರ್ಧರಿಸಬಹುದು ಒಂದನೆಯದು—ವಂಶಪಾರಂಪರ್ಯವಾಗಿ ಬಂದುದು, ಎರಡನೆಯದು—ಸ್ವಂತ ನಡವಳಿಕೆಯಿಂದಲೂ ಚಾಳಿಯಿಂದಲೂ ಪಡೆದುಕೊಂಡದ್ದು. ಚಹರೆಗಳು, ದೇಹಪ್ರಕೃತಿ, ಸೌಂದರ್ಯಾಭಿನಿವೇಶ, ಒರಟುತನ ಅಥವಾ ಜಾಣತನ, ಕೋಪ, ಶಾಂತಿ, ಯುಕ್ತಾಯುಕ್ತ ಪರಿಜ್ಞಾನ, ಸೂಕ್ಷ್ಮಗ್ರಾಹಿತ್ವ ಅಥವಾ ಮಡ್ಡಿತನ ಇಂಥವುಗಳೆಲ್ಲಾ ವಂಶಾನುಕ್ರಮವಾಗಿ ಬರತಕ್ಕವುಗಳು. ಆದುದರಿಂದ ಸ್ವಭಾವದ ಈ ಭಾಗವನ್ನು ಮನುಷ್ಯರು ಹದ್ದಿನಲ್ಲಿಟ್ಟುಕೊಳ್ಳುವುದು ಕಷ್ಟ. ಈ ಹಿಂದೆ ಹೇಳಿದುದೆಲ್ಲಾ ಪಾಶ್ಚಾತ್ಯರ ನಿರ್ಣೀತಾಭಿಪ್ರಾಯವು ದೇಹವೂ ಅದಕ್ಕೆ ಸಂಬಂಧದಟ್ಟ ಚಹರೆ ಮೊದಲಾದುವುಗಳೂ ಮಾತ್ರ ವಂಶಾನುಕ್ರಮವಾಗಿಯೂ ಉಳಿದುವುಗಳು ಅವರವರ ಜನ್ಮಾಂತರೀಯ ಕರ್ಮಗಳಗನುಸಾರವಾಗಿಯೂ ಇರುವುದೆಂದು ನಮ್ಮ ಹಿಂದೂಶಾಸ್ತ್ರಜ್ಞರು ಹೇಳುವರು.

ಆದರೂ 'ನಾವು ಮಾಡುವಂತೆ ನಾವು ಆಗುತ್ತೇವೆ' ಎಂಬದಾಗಿ ಲೋಕೋಕ್ತಿಯೇ ಇರುವುದರಿಂದ ಸಾಧ್ಯವಾಗುವ ಮಟ್ಟಿಗೂ ಮೊದಲನೆಯದರಲ್ಲಿ ಕೂಡ ಕೆಟ್ಟ ಅಂಶಗಳನ್ನು ಕಡಿಮೆಮಾಡಿಕೊಂಡು ಅಂದರೆ ದಿನಕ್ರಮವಾಗಿ ತಿದ್ದಿಕೊಂಡು ಸರಿಮಾಡಿಕೊಳ್ಳಬಹುದು. ಎರಡನೆಯದಾದ ಚಾಳಿ ಅಥವಾ ಶೀಲವೆಂದು ಕರೆಯಲ್ಪಡುವ ಸ್ವಭಾವವನ್ನು ಉತ್ತಮವನ್ನಾಗಿ ಮಾಡಿಕೊಳ್ಳುವುದೇನೂ ಅಷ್ಟು ಕಷ್ಟತರವಲ್ಲ ಈ ವಿಧವಾದ

ಸ್ವಭಾವಕ್ಕೆ ಸನ್ನಿವೇಶಗಳೂ ಕಾರಣವಾಗುವುವು. ಆದುದರಿಂದಲೇ ಈ ವಿಷಯದಲ್ಲಿಯೂ ಮನುಷ್ಯನು ಸ್ವತಂತ್ರನಲ್ಲವೆನ್ನುವರು. ಏಕೆಂದರೆ— ಬಾಲ್ಯದಲ್ಲಿ ಬಂದೊದಗುವ ಸನ್ನಿವೇಶಗಳ ವ್ಯಾಪ್ತಿಯು ಮುಂದಕ್ಕೆ ಶೀಲ ವಾಗಿ ಪರಿಣಮಿಸಿ ಮನುಷ್ಯನ ಸ್ವಭಾವವನ್ನು ರಚಿಸಲು ಬಲವಾದ ಸಾಧನ ವಾಗುವುದು. ಆದುದರಿಂದ ಈ ವಿಷಯದಲ್ಲಿ ತಾಯ್ತಂದೆಗಳ ಮತ್ತು ಉಪಾ ಧ್ಯಾಯರುಗಳ ಜಾಗರೂಕತೆಯು ಅತ್ಯಾವಶ್ಯಕವಾದುದು.

ವಂಶಾನುಗತವಾಗಿ ಬಂದ ತಪ್ಪುಗಳನ್ನು ಕ್ರಮೇಣ ತಿದ್ದಿಕೊಳ್ಳುತ ಬರುವುದು. ಬಾಲ್ಯದಲ್ಲಿ ದುಸ್ಸಹವಾಸದಿಂದ ಏನಾದರೂ ಕೆಡಕು ಉಂಟಾ ಗಿದ್ದರೆ ಅದನ್ನು ತಪ್ಪಿಸಿಕೊಳ್ಳುವುದು, ಒಳ್ಳೆಯತನವನ್ನು ಒಪ್ಪಿ ಅನುಸರಿ ಸುವುದು, ಇತರರಲ್ಲಿರುವ ಒಳ್ಳೆಯತನಕ್ಕೆ ಮೆಚ್ಚಿ ಅದಕ್ಕೆ ಸಹಾಯಮಾಡು ವುದು, ಕೆಟ್ಟುದನ್ನು ತಿರಸ್ಕರಿಸುವುದು ಇಂಥ ವಿವೇಕದಿಂದ ನಾವು ಸ್ವಭಾವ ವನ್ನು ಸರಿಮಾಡಿಕೊಳ್ಳಬಹುದು.

ಸ್ವಭಾವವು ಯಾರದೇ ಆಗಿರಲಿ ಸರ್ವದಾ ಏಕರೀತಿಯಾಗಿರದೆ ಚಾಂಚಲ್ಯದಿಂದ ನೆರಳನಂತೆ ಯಾವುದಾದರೊಂದು ವಿಧವಾದ ಬದಲಾವಣೆ ಯನ್ನು ಪಡೆಯುತ್ತಲೇ ಇರುವುದು ಶೀಲಕ್ಕೂ ಸ್ವಭಾವಕ್ಕೂ ಬಹಳ ಸಮೀಪವಾದ ಸಂಬಂಧವುಂಟು ಶೀಲವು ಸ್ವಭಾವವನ್ನು ವ್ಯಕ್ತಪಡಿಸು ವುದು. ಅಂದರೆ ಒಬ್ಬರ ಶೀಲವನ್ನು ನೋಡುವುದರಿಂದ ಅವರ ಸ್ವಭಾವವು ಇಂಥಾದ್ದೆಂದು ಊಹಿಸಬಹುದು. ಆದರೆ ಎಂಥ ಸ್ವಭಾವವುಂಟಾಗ ಬೇಕಾ ದರೂ ಮೊದಲು ಒಳ್ಳೆಯ ಅಥವಾ ಕೆಟ್ಟ ನಡತೆಯು ಸಹಾಯಕವಾಗಿಯೇ ಆಗುವುದು ಯಾರು ಯಾವ ಕೆಲಸವನ್ನು ಮಾಡಬೇಕಾದರೂ ಒಂದೊಂದು ನಿಯಮವನ್ನಿಟ್ಟುಕೊಂಡು ಅದದಕ್ಕೆ ಅನುಸಾರವಾಗಿ ನಡೆಯುವುದು ಒಳ್ಳೆ ಯದು. ಇದರಿಂದ ಸುಶೀಲಗಳೂ ತನ್ಮೂಲಕವಾಗಿ ಸುಸ್ವಭಾವವೂ ಉಂಟಾ ಗುವು, ಮಕ್ಕಳ ನಡತೆಯನ್ನು ದೊಡ್ಡವರು ಸರಿಯಾಗಿ ಮೇಲ್ವಿಚಾರಣೆ

ಮಾಡುತ್ತಿರಬೇಕೆಂದು ಮೇಲೆ ಹೇಳದೆಯಷ್ಟೆ. ಆದರೆ ಹೀಗೆಂದು ಮಕ್ಕಳ ಶಿಕ್ಷಣಕ್ಕೋಸ್ಕರವಾಗಿ ಅತಿಯಾಗಿ ಪ್ರಯತ್ನಪಡಬಾರದು. ಒಂದುವೇಳೆ ಹಾಗೆ ಮಾಡುತ್ತ ಬಂದರೆ ಮಕ್ಕಳಲ್ಲಿ ಧೈರ್ಯ, ಧಾರಾಳಸ್ವಭಾವ, ಸ್ವಾತಂತ್ರ್ಯ ಇಂಥವುಗಳು ಬೆಳೆಯುವುದಕ್ಕೆ ಅವಕಾಶವೇ ಇಲ್ಲದೆ ಹೋಗುವುದು. ದುಸ್ಸ್ವಭಾವಗಳನ್ನು ಕಂಡರೆ ಮುರಿಯುತ್ತಲೂ ಒಳ್ಳೆಯ ನಡತೆಯನ್ನು ಪ್ರೋತ್ಸಾಹಿಸುತ್ತಲೂ ಬರಬೇಕು. ಮತ್ತು ಪ್ರತಿಯೊಂದಕ್ಕೂ ಸ್ಥೂಲವಾದ ನಿದರ್ಶನಗಳನ್ನು ಕೊಡುತ್ತ ಬಂದು ಒಳ್ಳೆಯತನದಲ್ಲಿ ಪ್ರೀತಿಯೂ, ಕೆಟ್ಟತನದಲ್ಲಿ ಜುಗುಪ್ಸೆಯೂ ಹುಟ್ಟುವಂಥ ಘನವಾದ ಸ್ವಭಾವವನ್ನು ಅವರಲ್ಲಿ ಉಂಟುಮಾಡಬೇಕು.

ಸ್ವಭಾವದ ಬೆಲೆಯನ್ನು ಅಷ್ಟಿಷ್ಟೆಂದು ಹೇಳುವುದಕ್ಕೆ ಕೂಡ ಸಾಧ್ಯವಿಲ್ಲ. ಸ್ವಭಾವದಿಂದ ಉಂಟಾಗುವ ಘನತೆ, ಗೌರವ, ಕೀರ್ತಿ ಇತ್ಯಾದಿಗಳನ್ನೆಲ್ಲಾ ದೊಡ್ಡ ನಿಧಿಯೆಂದು ಭಾವಿಸಬೇಕು. ಈ ವಿಷಯದಲ್ಲಿ ಷೇಕ್‌ಸ್ಪಿಯರ್ ಮಹಾಕವಿಯು ಹೇಳಿರುವ ಈ ಮುಂದಣ ವಾಕ್ಯಗಳು ಬಹಳ ಶ್ಲಾಘ್ಯವಾಗಿರುವುವು. 'ಸನ್ನಿವೇಶಗಳು ಬದಲಾಯಿಸಿಯಾವು, ಅವಕಾಶಗಳು ಕಳೆದುಹೋದಾವು, ಸಂಪತ್ತು ಜಲಬುದ್ಬುದದಂತೆ ಅಸ್ಥಿರ ಸೌಂದರ್ಯವು ಕ್ಷೀಣಿಸಿಹೋಗುವುದು, ಆದರೆ ಮನುಷ್ಯನಲ್ಲಿ ನೆಲೆಯಾಗಿ ನಿಲ್ಲುವುದು ಸ್ವಭಾವವೊಂದೇ. ಅನೇಕ ವಿಧವಾದ ಆಕಸ್ಮಿಕ ಸಾಹಸಗಳಿಂದ ಪಡೆಯಬಹುದಾದುದಕ್ಕಿಂತಲೂ ಉತ್ತಮವಾದ ಲಾಭವನ್ನು ಸುಸ್ವಭಾವವು ಕಲ್ಪಿಸಿಕೊಡುವುದು. ಗಾರ್ಡನ್, ಲೀವಿಂಗ್‌ಸ್ಟೋನ್, ವಿಲ್ಬರ್‌ಫೋರ್ಸ್ ಇವರುಗಳೆಲ್ಲಾ ಅಂಥಹ ಸಾಹಸಕಾರ್ಯಗಳನ್ನಾವುದನ್ನೂ ಮಾಡದಿದ್ದರೂ ತಮ್ಮ ಸುಸ್ವಭಾವದಿಂದಲೇ ಸುಪ್ರಸಿದ್ಧರಾಗಿದ್ದಾರೆ. ನಾವು ಯಾವುದರ ಬಲದಿಂದ ಯೋಚಿಸುತ್ತೇವೋ ಅದನ್ನು ಮನಸ್ಸೆನ್ನುವೆವು. ಮನಸ್ಸಿನ ಪ್ರವರ್ತನೆಯಿಲ್ಲದೆ ಯಾವ ಕೆಲಸವನ್ನೂ ಮಾಡುವುದಕ್ಕಾಗುವುದಿಲ್ಲ. ಒಳ್ಳೆಯ ಮನ

ಸ್ನುಳ್ಳವರನ್ನು ಗುಣಾಢ್ಯರೆಂದೂ ಸುಸ್ವಭಾವದವರೆಂದೂ ಹೇಳುವರು. ನಾವು ಎಂಥವರೆಂಬುದನ್ನು ನಮ್ಮ ಸ್ವಭಾವವು ಪ್ರಕಟಗೊಳಿಸುತ್ತದೆ. ಯಾರು ಮನಃಪೂರ್ವಕವಾಗಿ ಕೆಟ್ಟದನ್ನು ತಿರಸ್ಕರಿಸಿ ಒಳ್ಳೆಯದನ್ನು ಪುರಸ್ಕರಿಸುವರೋ ಅವರೇ ಸುಸ್ವಭಾವದವರು.

(25) ಕೆಲಸ ಮಾಡುವಿಕೆ.

ತಿಳವಳಿಕೆಯನ್ನು ಜೀವನವನ್ನು ಅಥವಾ ಸಂತೋಷವನ್ನು ಇಂಥ ಯಾವುದನ್ನು ಪಡೆಯಬೇಕಾದರೂ ಕಷ್ಟಪಟ್ಟು ಕೆಲಸ ಮಾಡಲೇಬೇಕು. ಲೋಕದಲ್ಲಿ ಪ್ರತಿಯೊಬ್ಬರೂ ತಮ್ಮ ಜೀವಮಾನದ ಏಳಿಗೆಗಾಗಿ ಯಾವುದಾದರೊಂದು ವೃತ್ತಿಯನ್ನು ಅವಲಂಬಿಸುವರಷ್ಟೆ. ಅದದಕ್ಕೆ ಸಹಾಯಕವಾದ ಇನ್ನೂ ಎಷ್ಟೋ ಕೆಲಸಗಳನ್ನು ಮಾಡಬೇಕಾಗುವುದು. ಹಲವು ಸಣ್ಣಪುಟ್ಟ ಝರಿಗಳೆಲ್ಲವೂ ಸೇರಿ ದೊಡ್ಡ ಪ್ರವಾಹಗಳಾಗಿಯೂ ಅಂಥ ಹಲವು ಪ್ರವಾಹಗಳು ಸೇರಿ ಉಪನದಿಗಳಾಗಿಯೂ ಇಂಥ ಹಲವು ಉಪನದಿಗಳು ಸೇರಿ ದೊಡ್ಡ ನದಿಯಾಗಿ ಪರಿಣಮಿಸಿ ವ್ಯಾಪಾರ ಮುಂತಾದುವುಗಳಿಗೆ ಸಹಾಯಕವಾಗಿ ಲೋಕೋಪಕಾರವಾಗುವಂತೆ ಸಣ್ಣಪುಟ್ಟ ಕೆಲಸಗಳೆಲ್ಲಾ ಸೇರಿ ಒಂದು ದೊಡ್ಡ ಕೆಲಸವೂ ಇಂಥ ಹಲವು ದೊಡ್ಡ ಕೆಲಸಗಳು ಸೇರಿ ಒಂದು ವೃತ್ತಿಯೂ ಆಗಿ ಮನುಷ್ಯನ ಪರಮೋದ್ದೇಶಕ್ಕೆ ಆಧಾರವಾಗಿ ಅವನನ್ನು ವೃದ್ಧಿಗೆ ತರುವಂತೆ ಆಗಬೇಕು.

ಉಪಯುಕ್ತವಾದ ಯಾವ ಕೆಲಸವನ್ನೇ ಆದರೂ ಶ್ರದ್ಧೆಯಿಂದಲೂ ಸಂತೋಷದಿಂದಲೂ ಕೈಲಾದ ಮಟ್ಟಿಗೂ ಸಾಹಸಪಟ್ಟೂ ಮಾಡಬೇಕು. ಸದಾ ಒಂದೇ ಕೆಲಸವನ್ನು ಮಾಡುತ್ತಿರುವುದಕ್ಕೆ ಬೇಸರವಾಗುವುದು ಆದುದರಿಂದ ಒಂದು ವಿಧವಾದ ಕೆಲಸವನ್ನು ಸ್ವಲ್ಪ ಕಾಲವೂ ಮತ್ತೊಂದು ವಿಧವಾದುದನ್ನು ಸ್ವಲ್ಪಕಾಲವೂ ಮಾಡುವುದು ಒಳ್ಳೆಯದು. ವಿಶ್ರಾಂತಿ, ವಿನೋದ ಮೊದಲಾದುವುಗಳಿಗೂ ಸ್ವಲ್ಪ ಮಟ್ಟಿಗೆ ಕಾಲವನ್ನು ಗೊತ್ತು ಮಾಡಿಕೊಳ್ಳುವುದುತ್ತಮ.

ಒಂದು ಕೆಲಸಕ್ಕೆ ಕೈಹಾಕಿ ಅಧೈರ್ಯಪಟ್ಟು ಮಧ್ಯದಲ್ಲಿಯೇ ಅದನ್ನು ನಿಲ್ಲಿಸಿ ಬಿಡಬಾರದು. ಎಷ್ಟು ಕಷ್ಟವಾದರೂ ಸಹಿಸಿಕೊಂಡು ಕಡೆಯ ವರೆಗೂ ಮಾಡಿ ಅದನ್ನು ಸಾಧಿಸಲೇ ಬೇಕು. ಕೆಲಸವು ಕಷ್ಟವೆಂದು ಗೊಣಗುಟ್ಟುವುದು, ಕೆಲಸ ಮಾಡಿಸುವ ದಣಿಯಮೇಲೆ ರೇಗುವುದು ಇವೆಲ್ಲಾ ನಿಷಿದ್ಧ. ಕೆಲಸವು ಎಂಥಾದ್ದೇ ಆಗಲಿ ಅದನ್ನು ಇತರರಿಗಿಂತ ಚೆನ್ನಾಗಿ ಮಾಡಿ ವೃದ್ಧಿಗೆ ಬರಲು ಯತ್ನಿಸಬೇಕು. ಜೀವನಕ್ಕಾಗಿ ಹೊರಗೆ ದುಡಿಯುವ ಕೆಲಸವನ್ನು ಮನೆಯಲ್ಲಿಯೂ ಹೂಡಿಕೊಂಡು ಮಾಡುತ್ತ ಬಂದರೆ ಸುಖವು ಸ್ವಪ್ನಪ್ರಾಯವಾಗುವುದು. ಆರೋಗ್ಯವು ದುರ್ಲಭವಾಗು ವುದು. ಸ್ನೇಹಿತರು ಕೈಬಿಡುವರು. ಜೀವಮಾನವೇ ಕೆಡುವುದು.

ಸರ್ವದಾ ಸುಖದಲ್ಲಿಯೇ ಬೆಳೆದವರು ಕಷ್ಟಪಟ್ಟು ಕೆಲಸಮಾಡತಕ್ಕ ವರನ್ನು ನೋಡಿ ಅವರು ನಿರ್ಭಾಗ್ಯರೆಂದು ಭಾವಿಸಿ ಕನಿಕರಪಟ್ಟಾರು. ಆದರೆ ನ್ಯಾಯವಾಗಿ ನೋಡಿದರೆ ತಾವೇ ಕನಿಕರಕ್ಕೆ ಪಾತ್ರರು. ಪ್ರಕೃತಿಯು ಕಷ್ಟಪಟ್ಟವರನ್ನು ಮಾತ್ರ ಮುಂದಕ್ಕೆ ತರುವುದು. ರೋಗಗಳನ್ನು ಕೈಬಿಡುವುದು. ಕೆಲಸಮಾಡುವುದರಿಂದ ಆರೋಗ್ಯ, ಸುಖ, ಸಂತೋಷ, ಶಕ್ತಿ ಇವುಗಳು ಹೆಚ್ಚುವುವಲ್ಲದೆ ನಡತೆಯು ಉತ್ತಮವಾಗುವುದು. ಅದ ರಲ್ಲೂ ಮುಖ್ಯವಾಗಿ ತಾಳ್ಮೆ, ದೃಢಸಂಕಲ್ಪ, ಶಕ್ತಿಯ ಪ್ರಯೋಗ, ಕೆಲಸ ವನ್ನು ಕೈಗೂಡಿಸಿಕೊಳ್ಳುವ ಹುನ್ನರು, ಕ್ರಮ, ನಿಶ್ಚಯಜ್ಞಾನ, ಇಂಥವು ಬಲಪಡುವುವು.

ಉದ್ಯೋಗಕ್ಕೆ ಬಡತನವೂ ಒಂದು ಸಹಕಾರಿಯು. ಲೋಕದಲ್ಲಿ ಬಡತನವೇ ಒಬ್ಬ ದೊಡ್ಡ ಉಪಾಧ್ಯಾಯ. ಇದು ಎಂಥೆಂಥ ಅನಾಮಧೇಯ ರನ್ನೂ ಸುಪ್ರಸಿದ್ಧರನ್ನಾಗಿ ಮಾಡಿದೆ. ಆದರೆ ಐಶ್ವರ್ಯವಂತರು ಕಷ್ಟಪಟ್ಟು ಕೆಲಸ ಮಾಡಬೇಕಾದುದಿಲ್ಲವೆಂಬುದು ಅವಿವೇಕ. ರಷ್ಯಾ ಚಕ್ರವರ್ತಿ ಯಾದ ಪಿಟರ್ ದಿ ಗ್ರೇಟನು ಸುಖಾನುಭವಕ್ಕೆ ಅರ್ಹವಾದ ತನ್ನ ಯೌವನ

ದಲ್ಲಿ ಕೂಡ ಒಬ್ಬ ಕೂಲಿಯವನಂತೆ ದುಡಿಯುತ್ತ ಹಾಲೆಂಡಿನಲ್ಲಿ ಹಡಗು ಕಟ್ಟುವುದನ್ನೂ, ಇಂಗ್ಲೆಂಡಿನಲ್ಲಿ ಗಡಿಯಾರವನ್ನು ರಚಿಸುವುದು, ಕಾಗದ ಮಾಡುವುದು, ಮರಾ ಕೊಯ್ಯುವುದು ಇಂಥ ಕೆಲಸಗಳನ್ನೂ ಕಲಿತುಕೊಂಡ ನಂತೆ! ಮನುಷ್ಯನಿಗೆ ಎಷ್ಟು ಶಕ್ತಿಯಿದ್ದರೂ ಅವನು ಕೆಲಸಮಾಡದಿದ್ದರೆ ಅದು ಉಪಯೋಗಿಸಲ್ಪಡದ ಕಬ್ಬಿಣವು ತುಕ್ಕುಹಿಡಿದು ಕೆಟ್ಟುಹೋಗುವಂತೆ ನಶಿಸಿ ಹೋಗುವುದು. ಕೆಲಸವನ್ನು ಅಂದರೆ ವೃತ್ತಿಯನ್ನು ಕೈಗೊಳ್ಳುವುದ ರಲ್ಲೂ ಸ್ವಲ್ಪಮಟ್ಟಿಗೆ ವಿಚಕ್ಷಣೆಯು ಆವಶ್ಯಕ. ಯಾರಾರಿಗೆ ಯಾವಯಾವ ವೃತ್ತಿಯಲ್ಲಿ ಅಭಿರುಚಿಯೋ ಅಪರವರು ಅಂಥಂಥಾದ್ದನ್ನು ಕೈಗೊಳ್ಳು ವುದು ಮೇಲು.

ಹಿಡಿದ ಕೆಲಸವನ್ನು ಬಿಡದೆ ಸಾಧಿಸತಕ್ಕವರಿಗೆ ಐಶ್ವರ್ಯ, ಅಧಿಕಾರ, ಇತರರನ್ನು ವಶಪಡಿಸಿಕೊಳ್ಳುವ ಶಕ್ತಿ, ಇಂಥ ಸೌಕರ್ಯಗಳೇನೂ ಇಲ್ಲದಿ ದ್ದರೂ ಜಯವು ಕೈಸೇರುವುದು. ಪ್ರಯತ್ನಮಾಡಿದ ಕೂಡಲೆ ಯಾವ ಕೆಲ ಸವೂ ಕೈ ಸೇರಲಾರದು. ಆಯಾ ಕೆಲಸದ ಯೋಗ್ಯತೆಗೆ ತಕ್ಕಷ್ಟು ಕಾಲ ವನ್ನು ಅದದು ತೆಗೆದುಕೊಂಡೇ ತೀರುವುದು. ತೆಂಗು, ಮಾವು ಮೊದಲಾದ ಫಲವೃಕ್ಷಗಳ ಪಾಲನೆಯು ಇದಕ್ಕೆ ಒಳ್ಳೆಯ ದೃಷ್ಟಾಂತವಾಗಿರುವುದು. ಫಲಪ್ರಾಪ್ತಿಯಾಗುವವರೆಗೆ ಎಷ್ಟು ಕಾಲವೇ ಆದರೂ ತಡೆದುಕೊಂಡು ನಿರೀಕ್ಷಿಸಲೇ ಬೇಕಾಗುವುದು. ಏನೂ ಮಾಡದೆ ಕೆಲವುಕಾಲ ಸುಮ್ಮನಿರು ವುದು, ಬಳಿಕ ಹಗಲೂ ರಾತ್ರಿಯೂ ಹೆಚ್ಚಾಗಿ ದುಡಿದು ಕೆಲಸಮಾಡು ವುದು ಇಂಥ ಅಕ್ರಮಗಳಿಂದ ಆರೋಗ್ಯಕ್ಕೆ ಕೂಡ ಹಾನಿ ಬರುವುದುಂಟು. ಅನೇಕ ವಿದ್ಯಾರ್ಥಿಗಳು ಆದಿಯಿಂದಲೂ ವ್ಯರ್ಥ ಕಾಲಕ್ಷೇಪ ಮಾಡಿ ಪರೀ ಕ್ಷೆಯು ಸಮೀಪಿಸಿದಾಗ ಎಡೆಬಿಡದೆ ನಿದ್ದೆಗೆಟ್ಟು ಓದುತ್ತ ರೋಗಗ್ರಸ್ತರಾ ಗುತ್ತಿರುವುದು ಈ ಕಾಲದಲ್ಲಿ ಸರ್ವರಿಗೂ ತಿಳಿದ ಅಂಶವೇ ಆಗಿದೆ.

ತನ್ನ ಶಕ್ತಿಮೀರಿ ಹೆಚ್ಚಾಗಿ ಕೆಲಸಮಾಡುವುದಾಗಿ ಹೊರಟು ಅದನ್ನು ಕೆಡಿಸುವುದಕ್ಕಿಂತಲೂ ಸ್ವಲ್ಪ ಕೆಲಸವನ್ನೇ ಆದರೂ ಚೆನ್ನಾಗಿ ಮಾಡುವುದು

ಬಳ್ಳಿಯದು. ಯಾವ ಕೆಲಸವನ್ನೇ ಆದರೂ ನ್ಯಾಯವಾದ ಮಾರ್ಗದಲ್ಲಿ ಸಾಧಿಸಬೇಕೇ ಹೊರತು ಯಾವುದಾದರೊಂದು ಮೋಸದ ದಾರಿಯಿಂದ ಅದನ್ನು ನೆರವೇರಿಸಿಕೊಳ್ಳುವುದಕ್ಕೆ ಯತ್ನಿಸಬಾರದು. ಕಣಗಾರನಾಗಬೇಕೆಂದು ಕದಿಯುವುದು, ತೇರ್ಗಡೆಯಾಗಬೇಕೆಂದು ಪರೀಕ್ಷೆಯಲ್ಲಿ ಕಾಪೀ ಮಾಡುವುದು ಇಂಥವು ಕೆಟ್ಟ ಕೆಲಸಗಳು. ನ್ಯಾಯವಾದ ಮಾರ್ಗದಲ್ಲಿ ಕೆಲಸ ಮಾಡುತ್ತಿದ್ದರೆ ಸದ್ಯಕ್ಕೆ ಬಂದುವೇಳೆ ಆ ಕೆಲಸವು ನೆರವೇರದಿದ್ದರೂ ಚಿಂತೆಯಿಲ್ಲ. ನಮ್ಮ ನಡತೆಯಾದರೂ ಕೆಡದೆ ಕ್ರಮದಲ್ಲಿರುತ್ತದೆ. ಮತ್ತು ನಾವು ನ್ಯಾಯವಾದ ದಾರಿಯಲ್ಲಿ ನಡೆದೆವು ಎಂದು ಮನಸ್ಸು ಸಮಾಧಾನ ಸ್ಥಿತಿಯಲ್ಲಿರುತ್ತದೆ. ಅಲ್ಲದೆ ನಮ್ಮ ಗೌರವಕ್ಕೂ ಹಾನಿಯಿಲ್ಲ. ಅನ್ಯಾಯದಿಂದ ಕಾರ್ಯವು ಕೈಗೂಡಿದರೂ ಅದು ಗೌರವಾವಹವಲ್ಲ. ಮತ್ತು ನಾವು ತಪ್ಪು ದಾರಿಯಲ್ಲಿ ನಡೆದುದಕ್ಕಾಗಿ ನಮ್ಮ ಅಂತರಾತ್ಮವೂ ಕೊರಗುತ್ತಿರುವುದು.

ಯಾವ ಕೆಲಸವೂ ನಮ್ಮಿಂದ ಆಗದೆಂದು ಹೇಳಬಿಡದೆ ಸಾಧ್ಯವಾದ ಮಟ್ಟಿಗೂ ಪ್ರಯತ್ನಪಟ್ಟು ನೋಡಬೇಕು. ಪ್ರಯತ್ನ ಪಡದೆಯೇ ಇದ್ದರೆ ಯಾವ ಸಣ್ಣಪುಟ್ಟ ಕೆಲಸಗಳೂ ಕೂಡ ನಡೆಯಲಾರವು. ಆಸಕ್ತಿಯಿಂದ ಕೆಲಸಮಾಡುತ್ತ ಬಂದರೆ ಅದರಲ್ಲಿ ಸಂಭವಿಸಬಹುದಾದ ಎಂಥ ತೊಂದರೆಗಳೂ ಸುಲಭವಾಗಿ ಪರಿಹಾರವಾಗುವುವು. ಶಕ್ತಿಯಿರುವಾಗ ಕೆಲಸಮಾಡಿದ್ದರೆ ಅಶಕ್ತರಾದಾಗ ಅದರ ಫಲವನ್ನು ಅನುಭವಿಸಬಹುದು. ಯೌವನದಲ್ಲಿ ದುಡಿದು ಸಂಪಾದಿಸಿದ್ದರೆಮುಪ್ಪಿನಲ್ಲಿ ಇತರರ ಹಂಗಿಲ್ಲದೆ ಜೀವನ ಮಾಡಿಕೊಳ್ಳಬಹುದು, ಉದಾಸೀನತೆಯಿಂದ, ಅರ್ಧ ಮನಸ್ಸಿನಿಂದ ಕಡ್ಡಾಯದಿಂದ ಅಥವಾ ನಿರ್ಬಂಧದಿಂದ ಕೆಲಸಮಾಡಬಾರದು. ಹೀಗೆ ಮಾಡಿದರೆ ಕೆಲಸವು ನೆರವೇರುವುದಿಲ್ಲ. ಅಥವಾ ಆದರೂ ಚೆನ್ನಾಗಿ ನಡೆಯುವುದಿಲ್ಲ ನಮ್ಮ ಕಾಲವೂ ಶಕ್ತಿಯೂ ವ್ಯರ್ಥವಾಗಿ ವೆಚ್ಚವಾಗುವುವು. ಇತರರ ನಿಂದೆಗೂ ಪಾತ್ರರಾಗಬೇಕಾದೀತು. ಮತ್ತು ಇದೊಂದು ಕೆಟ್ಟಚಾಳಿಯು

ನಮ್ಮಲ್ಲಿ ಬೇರೂರಿ ಅಭಿವೃದ್ಧಿಯಾಗುವುದರಿಂದ ನಮ್ಮ ಜೀವಮಾನವೇ ಕೆಟ್ಟು ಹೋದೀತು.

(26) ಕೆಲಸಮಾಡುವುದರಲ್ಲಿರುವ ಘನತೆ.

ಕೆಲಸಮಾಡುವುದು ಏನೋ ಹೀನಾಯವೆಂದು ಕೆಲವರು ತಿಳಿದುಕೊಂಡಿರುವರು. ಕೆಲಸಮಾಡಿದ ಹೊರತು ಯತ್ನವಿಲ್ಲ, ಆದುದರಿಂದ ಮಾಡಬೇಕಾಗಿದೆ ಎಂದು ಇನ್ನು ಕೆಲವರು ತಿಳಿದುಕೊಂಡಿರುವರು. ಮತ್ತೆ ಕೆಲವರು ಕೆಲಸಮಾಡಿ ಅನ್ಯಾಯವಾಗಿ ಕಷ್ಟ ಪಡಬೇಕಲ್ಲಾ ಎಂದು ಅಸಮಾಧಾನ ಪಡುವರು. ಇದನ್ನೆಲ್ಲಾ ನೋಡಿದರೆ ಕಷ್ಟಪಟ್ಟು ಕೆಲಸಮಾಡುವುದಕ್ಕಿಂತಲೂ ವಿನೋದವಾಗಿ ಕಾಲವನ್ನು ತಳ್ಳುವುದೇ ಉತ್ತಮವೆಂದು ನಮ್ಮ ಮನಸ್ಸಿಗೆ ಬಂದೀತು. ಆದರೆ ಹಾಗೆ ಮಾಡದೆ ಕುಳಿತಿರುವುದೇ ಸೋಮಾರಿತನ. ಲೋಕದಲ್ಲಿ ಎಲ್ಲರೂ ಸೋಮಾರಿಗಳೇ ಆಗಿದ್ದಲ್ಲಿ ನಮಗೆ ಅಥವಾ ಇತರರಿಗೆ ಈಗಿನ ಅನುಕೂಲತೆಗಳು ದೊರೆಯುತ್ತಲೇ ಇರಲಿಲ್ಲ.

ಪ್ರತಿಯೊಬ್ಬರೂ ದೇಹದಿಂದ ಅಥವಾ ಬುದ್ಧಿಯಿಂದ ದುಡಿಯಲೇಬೇಕು. ರೈತ, ಬಡಗಿ, ಗಣಿಯಕೂಲಿ, ನೆಯ್ಗೆಯವನು, ಕಮ್ಮಾರ, ಕಲ್ಕುಟಿಗ ಮೊದಲಾದವರು ಕಾಯಶಕ್ತಿಯಿಂದ ಕಷ್ಟಪಟ್ಟು ಕೆಲಸಮಾಡತಕ್ಕವರು. ಉಪಾಧ್ಯಾಯ, ಕವಿ, ಚಿತ್ರಗಾರ, ನ್ಯಾಯವಾದಿ, ವೈದ್ಯ, ನ್ಯಾಯಾಧಿಪತಿ, ಶಾಸ್ತ್ರಶೋಧಕ, ಸರ್ಕಾರದ ಅಧಿಕಾರಿಗಳು, ವರ್ತಕ ಇಂಥವರೆಲ್ಲಾ ತಮ್ಮ ಬುದ್ಧಿಬಲದಿಂದ ಕೆಲಸಮಾಡುತ್ತ ಲೋಕೋಪಕಾರ ಮಾಡುವರು. ನಾವೆಲ್ಲರೂ ಕೆಲಸಮಾಡಿಕೊಂಡು ಪರಸ್ಪರ ಸಹಾಯಕರಾಗಿದ್ದುಕೊಂಡಿರಲಿ ಎಂಬ ಉದ್ದೇಶದಿಂದಲೇ ದೇವರು ನಮ್ಮನ್ನು ಸೃಷ್ಟಿಸಿರುವನೇ ಹೊರತು ಸುಮ್ಮನೆ ಕುಳಿತಿರುವುದಕ್ಕಲ್ಲ, ಕೆಲಸ ಮಾಡುವುದರಿಂದ ಹೀಗೆ ಪರಸ್ಪರ ಸಹಾಯವಾಗುವುದಲ್ಲದೆ ಚಟುವಟಿಕೆಯೂ ಆರೋಗ್ಯವೂ ಹೆಚ್ಚುವುವು.

ಲೋಕದಲ್ಲಿ ನಾನಾಜನರು ನಾನಾವಿಧವಾದ ಕೆಲಸಗಳನ್ನು ಮಾಡುತ್ತಾರೆ. ಆದರೆ ದೇವರ ಸೃಷ್ಟಿಯಲ್ಲೇನೋ ಈ ಎಲ್ಲಾ ಕೆಲಸಗಳೂ ಸಮಾ

ನವೇ. ನಮ್ಮಲ್ಲಿ ಬಡಗಿ, ಕಮ್ಮಾರ, ಅಕ್ಕಸಾಲೆ, ಕುಂಬಾರ, ವರ್ತಕ, ಬೇಸಾಯಗಾರ, ಚಮ್ಮಾರ ಮೊದಲಾದ ಹಲವು ಬಗೆಯ ವೃತ್ತಿಗಳನ್ನವಲಂಬಿಸಿರುವವರುಂಟಷ್ಟೆ. ಇವುಗಳಲ್ಲಿ ಯಾರ ವೃತ್ತಿಯಿಲ್ಲದಿದ್ದರೂ ಲೋಕದಲ್ಲಿ ಜನಗಳಿಗೆ ತೊಂದರೆಯೇ ಎಂಬುದು ಎಲ್ಲರಿಗೂ ತಿಳಿದೇ ಇರುವುದು. ಆದರೂ ನಮ್ಮವರು ಆಯಾ ವೃತ್ತಿಯವರನ್ನೇ ಬೇರೆಬೇರೆ ಒಂದೊಂದು ಜಾತಿಯನ್ನಾಗಿ ವಿಂಗಡಿಸಿರುವರು. ಮತ್ತು ಆಯಾ ಜಾತಿಯಲ್ಲಿ ಹುಟ್ಟಿದವರೇ ಆಯಾ ವೃತ್ತಿಗಳನ್ನವಲಂಬಿಸಬೇಕೆಂಬ ನಿರ್ಬಂಧವನ್ನು ಕೂಡ ಕಲ್ಪಿಸಿಕೊಂಡಿದ್ದರು. ಆದರೆ ಈ ವಿಷಯದಲ್ಲಿ ಮುಸಲ್ಮಾನರ ಮತ್ತು ಪಾಶ್ಚಾತ್ಯರ ನಡೆವಳಿಕೆಗಳು ಬೇರೆ ವಿಧವಾಗಿವೆ. ಅವರಲ್ಲಿ ಒಂದು ಮನೆಯಲ್ಲಿ ಐದಾರುಜನ ಸಹೋದರರಿದ್ದರೆ ಒಬ್ಬನು ನ್ಯಾಯವಾದಿ, ಮತ್ತೊಬ್ಬನು ಬಡಗಿ, ಇನ್ನೊಬ್ಬನು ವರ್ತಕ, ನಾಲ್ಕನೆಯವನು ಬೇಸಾಯಗಾರ, ಐದನೆಯವನು ಸಂಗೀತಗಾರ, ಆರನೆಯವನು ಯೋಧ, ಹೀಗೆ ಅವರವರ ಇಷ್ಟಕ್ಕೆ ತಕ್ಕಂಥ ಬೇರೆಬೇರೆ ವೃತ್ತಿಗಳನ್ನು ಕೈಗೊಳ್ಳುವರು. ಇದೊಂದು ವಿಧದಲ್ಲಿ ಸರಿ. ಹೇಗೆಂದರೆ—ಒಂದೇ ಜಾತಿಯಲ್ಲಿ, ಕಡೆಗೆ ಒಂದೇ ವಂಶದಲ್ಲಿ ಹುಟ್ಟಿದವರಿಗೆಲ್ಲಾ ಒಂದೇ ವಿಧವಾದ ವೃತ್ತಿಯನ್ನವಲಂಬಿಸಲು ಅನುಕೂಲಿಸುವ ಪಾಟವವಿರುವುದೆಂದು ನಂಬಲಾಗುವುದಿಲ್ಲ. ಈಚೀಚೆಗೆ ನಮ್ಮವರಲ್ಲೂ ಇಂಥ ತಿಳಿವಳಿಕೆಯು ಹೆಚ್ಚುತ ಬಂದಂತೆಲ್ಲಾ ಬ್ರಾಹ್ಮಣರು ವ್ಯವಸಾಯ, ವ್ಯಾಪಾರ ಅಥವಾ ಯಂತ್ರಕೌಶಲ ಮುಂತಾದುವನ್ನೂ, ಒಕ್ಕಲಿಗರು ಸರ್ಕಾರದ ಉದ್ಯೋಗ ಅಥವಾ ಬೇರೆ ವಿಧವಾದ ಕೈಗಾರಿಕೆ ಮೊದಲಾದುವುಗಳನ್ನೂ ಶೆಟ್ಟಿಯು ನ್ಯಾಯವಾದಿತ್ವ, ಉಪಾಧ್ಯಾಯತೆ ಅಥವಾ ಮತ್ತೆ ಯಾವುದಾದರೊಂದು ಬೇರೆ ವೃತ್ತಿಯನ್ನೂ ಕೈಗೊಳ್ಳುತ್ತಿರುವುದು ಒಂದು ಸಂತೋಷಕರವಾದ ಸಂಗತಿಯಾಗಿದೆ. ಇದರಿಂದ ಇವರ ಯೋಗ್ಯತೆಗಾಗಲಿ ಇವರ ಚಾತುರ್ಯಕ್ಕಾಗಲಿ ಏನೂ ಲೋಪವಿಲ್ಲ.

ಪೂರ್ವದಂತೆ ಆಯಾ ಜಾತಿಯವರೇ ಆಯಾ ವೃತ್ತಿಗಳನ್ನು ನಡೆಯಿಸು ವುದು ವಿಷನಿಗೆ ಈಡುವುದು ಹೇಗೋ ಹಾಗೆ ಸುಲಭವಾಗುವುದೆಂದೂ ಅಂಥ ವರು ಈಗಿನ ನವನಾಗರಿಕತೆಗೆ ತಕ್ಕಂತೆ ತಮ್ಮತಮ್ಮ ವೃತ್ತಿಗಳನ್ನೇ ಅಭಿ ವೃದ್ಧಿ ಪಡಿಸಿಕೊಳ್ಳುವುದು ಬಹಳ ಅನುಕೂಲವಾದುದೆಂದೂ ಪ್ರಾಜ್ಞರಾದ ಕೆಲವರು ಅಭಿಪ್ರಾಯಪಡುವರು. ಇದೂ ಉತ್ತಮವಾದ ಮಾರ್ಗವೇ ಸರಿ. ಆದರೆ ಬಗೆಬಗೆಯಾದ ವೃತ್ತಿಗಳನ್ನು ಕೈಗೊಂಡಿರುವವರಲ್ಲಿ ಇವರು ಮೇಲು, ಇವರು ಕೀಳು ಎಂದು ಉಚ್ಚನೀಚತೆಗಳನ್ನು ಕಲ್ಪಿಸುವುದು ಅಷ್ಟು ಉಚಿತವಲ್ಲ. ಎಲ್ಲಾವೃತ್ತಿಗಳನ್ನೂ ಸಮವಾದ ಮರ್ಯಾದೆಯಿಂದ ಗೌರವಿಸಬೇಕು. ಪ್ರತಿಯೊಬ್ಬರೂ ಸ್ವಪ್ರಯೋಜನಕ್ಕೆಂದೇ ಕೆಲಸ ಮಾಡುತ್ತಾರೆಯಾದರೂ ಆ ಕೆಲಸದಿಂದ ಇತರ ಎಷ್ಟೋ ಜನಗಳಿಗೂ ಫಲ ವಾಗಿಯೇ ಆಗುವುದು. ವರ್ತಕನು ತನ್ನ ಲಾಭಕ್ಕೆಂದೇ ವ್ಯಾಪಾರ ಮಾಡಿ ದರೂ ಪದಾರ್ಥಗಳನ್ನು ಉತ್ಪತ್ತಿಮಾಡಿದರಿಗೂ ಕೊಳ್ಳುವವರಿಗೂ ಎಷ್ಟು ಅನುಕೂಲವಾಗುವುದು! ಕುಂಬಾರನಿಂದ ಎಷ್ಟುಜನ ಬಡವರಿಗೆ ಪಾತ್ರೆಯು ಸಿಕ್ಕುವುದು! ಇತರ ಸಕಲವಿಷಯಗಳಲ್ಲೂ ಹೀಗೆಯೇ. ಇದು ಲೋಕೋ ಪಕಾರವಲ್ಲವೆ? ಹೀಗೆ ನಾವು ನ್ಯಾಯವಾಗಿ ಕಷ್ಟಪಟ್ಟು ಮಾಡುವ ಪ್ರತಿ ಯೊಂದು ಕೆಲಸವೂ ದೇವರ ಆರಾಧನೆಯೆಂದು ತಿಳಿಯಬೇಕು.

ನಮ್ಮ ಬಲದಿಂದ ನಮ್ಮ ಜೀವನವನ್ನು ಸಂಪಾದಿಸಿಕೊಳ್ಳುವುದು ಬಹಳ ಗೌರವವಾದುದು. ಈ ಕಾರಣದಿಂದಲೇ ಯಾರು ಕೆಲಸಕ್ಕೆ ಮೈಗಳ್ಳ ರೋ ಅಂಥವರು ಆಹಾರವನ್ನು ತಿನ್ನಕೂಡದು ಎಂದು ಹೇಳುವುದು ನ್ಯಾಯವಾದ ನುಡಿಯು. ಆದುದರಿಂದ ಕೆಲಸಮಾಡುವುದು ಹೀನಾಯವೆಂದು ತಿಳಿದುಕೊಂಡು ನಾಚಿಕೆಪಡಬಾರದು. ಲೋಕದಲ್ಲಿ ಪ್ರತಿಯೊಬ್ಬರೂ ಇತ ರರ ಸೇವೆಗೋಸ್ಕರವೇ ಹುಟ್ಟಿರುವುದರಿಂದ ಎಲ್ಲರೂ ಪರಸ್ಪರ ಸೇವಕರೇ. ಇತರರು ಕೆಲಸಮಾಡುತ್ತಿರುವುದನ್ನು ಸುಮ್ಮನೆ ಮಿಟಗುಟ್ಟುತ್ತ ನೋಡಿ

ಕೊಂಡಿರುವುದು ನಮ್ಮ ಕರ್ತವ್ಯವಲ್ಲ. ಕಷ್ಟಪಟ್ಟು ದುಡಿಯುವ ಬಟ್ಟನೆ ಸಂಪಾದನೆಯಿಂದ ಎಂಟು ಹತ್ತು ಜನ ಸೋಮಾರಿಗಳು ನಾಚಿಕೆಯಿಲ್ಲದೆ ಜೀವನ ಮಾಡುತ್ತಿರುವಂಥ ಕೆಟ್ಟ ನಡವಳಿಕೆಯು ನಮ್ಮಲ್ಲಿ ಬೇರೂರಿರುವುದರಿಂದಲೇ ಅಷ್ಟೈಶ್ವರ್ಯ ಸಂಪನ್ನವಾದ ಭಾರತಭೂಮಿಯಲ್ಲೇ ಸಾವಿರಾರು ವರ್ಷಗಳಿಂದ ನೆಲೆಗೊಂಡು ಭಾರತೀಯರೆಂದೆನಿಸಿಕೊಳ್ಳುತ್ತಿದ್ದರೂ ನಮಗೆ ಇಂಥ ದರಿದ್ರಾವಸ್ಥೆಯು ಪ್ರಾಪ್ತವಾಗಿರುವುದು.

ಜೀವನಕ್ಕೋಸ್ಕರವೆಂದು ಕೂಡ ಅಯುಕ್ತವಾದ ಕೆಲಸವನ್ನು ಎಂದಿಗೂ ಮಾಡಬಾರದು. ನಾವುಮಾಡುವ ಕೆಲಸದಿಂದ ಇತರರಿಗೆ ಯಾವ ಕೆಡಕೂ ಆಗಕೂಡದಲ್ಲದೆ ಸಾಧ್ಯವಾದ ಮಟ್ಟಿಗೂ ಅವರಿಗೆ ಏನಾದರೊಂದು ಪ್ರತ್ಯಕ್ಷಫಲವು ತೋರಬೇಕು.

(27) ಹೊತ್ತಿಗೆ ಸರಿಯಾಗಿ ಕೆಲಸಮಾಡಿಸುವುದು.

ಪ್ರತಿಯೊಂದು ಕೆಲಸಕ್ಕೂ ಕ್ಲುಪ್ತವಾದ ಒಂದೊಂದು ಹೊತ್ತನ್ನು ಗೊತ್ತುಮಾಡಿಕೊಂಡು ಆಯಾ ಕಾಲಗಳಲ್ಲಿ ಅದದನ್ನು ತಪ್ಪದೆ ಮಾಡಬೇಕು. ಹೀಗೆ ಮಾಡತಕ್ಕವರಿಗೆ ಆತ್ಮಗೌರವವು ಉಂಟಾಗುತ್ತದೆ. ಮತ್ತು ಹಿಡಿದ ಕೆಲಸವೂ ಚೆನ್ನಾಗಿ ನಡೆಯುತ್ತದೆ. ಆಗಾಗಿನ ಕೆಲಸಗಳನ್ನು ಆಗಾಗಲೆ ಮಾಡಿ ಮುಗಿಸದಿದ್ದರೆ ಮುಂದಕ್ಕೆ ಎಲ್ಲಾ ಕೆಲಸಗಳೂ ಒಟ್ಟುಗೂಡಿ ರಾಶಿಯಾಗುವುದರಿಂದ ಆಗ ಮಾಡುವುದಕ್ಕೆ ಬೇಸರವಾಗುವುದು. ಹಾಗಿಲ್ಲದೆ ಒಂದು ಕ್ರಮವಾದ ನಿಯಮವನ್ನು ಅನುಸರಿಸಿದರೆ ಕಾಲವೂ ವ್ಯರ್ಥವಾಗುವುದಿಲ್ಲ. ಯಾವ ಸಣ್ಣಪುಟ್ಟ ಕೆಲಸಗಳೂ ಬಿಟ್ಟುಹೋಗದೆ ಸರಿಯಾಗಿ ನೆರವೇರುತ್ತವೆ.

ಹೊತ್ತಿಗೆ ಸರಿಯಾಗಿ ನಡೆಯುವವರನ್ನು ಎಲ್ಲರೂ ಮೆಚ್ಚುವರು. ದೇವರ ಸೃಷ್ಟಿಯಲ್ಲಿ ಸೂರ್ಯಚಂದ್ರಾದಿಗಳೂ ಕೂಡ ತಪ್ಪದೆ ಕಾಲ ನಿಯಮಕ್ಕೆ ಬದ್ಧರಾಗಿ ನಡೆಯುತ್ತಾರೆ. ಉದಯಾಸ್ತಗಳು, ಹುಣ್ಣಿಮೆ ಅಮಾ

ವಾಸ್ಯೆಗಳು, ಗ್ರಹಣಗಳು ಇತ್ಯಾದಿಗಳೇ ಇವಕ್ಕೆ ಸಾಕ್ಷಿಯಾಗಿವೆ. ಅಲ್ಲದೆ ಹಸಿವು ನಿದ್ರೆ ಮೊದಲಾದುವುಗಳು ಕೂಡ ಪ್ರಕೃತಿಯ ಅಪ್ಪಣೆಯಂತೆ ಕ್ಲುಪ್ತಕಾಲಗಳಲ್ಲಿ ತಲೆದೋರುತ್ತವೆ. ಹೊತ್ತಿಗೆ ಸರಿಯಾಗಿ ಕೆಲಸಮಾಡು ವುದರಿಂದ ನಮ್ಮಲ್ಲಿ ನಮಗೆ ನಂಬಿಕೆ ಹುಟ್ಟುವುದು. ಯಾರು ಕಾಲವನ್ನು ವ್ಯರ್ಥವಾಗಿ ಕಳೆಯುವರೋ ಅಂಥವರು ಎಲ್ಲವನ್ನೂ ಹಾಳುಮಾಡ ಬಲ್ಲರು. ಒಂದುಸಲ ಕಳೆದುಹೋದ ಕಾಲವನ್ನು ಪುನಃ ಎಂದಿಗೂ ಪಡೆಯ ಲಾಗುವುದಲ್ಲ. ಕಾಲವು ನಮ್ಮನ್ನು ಪರೀಕ್ಷಿಸಿಕೊಂಡು ಎಂದಿಗೂ ನಡೆ ಯದೆ ನಿಲ್ಲುವುದಿಲ್ಲ. 'ನಾಳೆಯೆಂದವನಿಗೆ ನಾಶ' ಎಂದು ನಮ್ಮಲ್ಲಿ ಪ್ರಸಿ ದ್ಧವಾದ ಗಾದೆಯುಂಟು

ಒಂದು ಕೆಲಸಮಾಡುವ ಹೊತ್ತಿನಲ್ಲಿ ಮತ್ತೊಂದು ಕೆಲಸವನ್ನು ಮಾಡುವುದು, ಒಂದು ಕೆಲಸವನ್ನು ಅರ್ಧಾರ್ಧಮಾಡಿಬಿಟ್ಟು ಮತ್ತೊಂದು ಕೆಲಸಕ್ಕೆ ಕೈಹಾಕುವುದು ಇಂಥದೆಲ್ಲಾ ಅಕ್ರಮ. ಹೊತ್ತಿಗೆ ಸರಿಯಾಗಿ ಕೆಲಸಮಾಡುವ ಅಭ್ಯಾಸವೊಂದಿದ್ದರೆ ಒಂದು ದೊಡ್ಡನಿಧಿಯನ್ನೇ ನಮ್ಮ ವಶದಲ್ಲಿ ಪಡೆದಿದ್ದಂತೆ ಆಗುವುದು. ಯಾರಾದರೊಬ್ಬರು ಇಷ್ಟುಹೊತ್ತಿಗೆ ನಮ್ಮದೊಂದು ಕೆಲಸವನ್ನು ಮಾಡಿಕೊಡುವುದಾಗಿ ಮಾತುಕೊಟ್ಟರೆ ನಾವು ಎಷ್ಟು ನಂಬಿಕೆಯಿಂದಲೂ ಆತುರದಿಂದಲೂ ಆ ಹೊತ್ತನ್ನೇ ಎದುರುನೋಡು ತ್ತಿರುವೆವು! ಹೀಗೆಯೇ ನಮ್ಮ ಮಾತಿನಲ್ಲಿಯೂ ಇತರರು ನಂಬಿಕೆಯಿಟ್ಟು ಕೊಂಡಿರುವರಲ್ಲವೆ? ಅದಕ್ಕೆ ತಪ್ಪಿದರೆ ನಮ್ಮನ್ನು ಅವರು ನಂಬುವುದಿಲ್ಲ.

ಹೊತ್ತಿಗೆ ಸರಿಯಾಗಿ ಕೆಲಸಮಾಡದವರು ತಮ್ಮ ಕಾಲವನ್ನು ಕಳೆದು ಕೊಳ್ಳುವುದು ಮಾತ್ರವಲ್ಲದೆ ಇತರರ ಹೊತ್ತನ್ನೂ ವ್ಯರ್ಥವಾಗಿ ಕಳೆಯು ತ್ತಾರೆ. ಪಾಠಶಾಲೆ, ಸರ್ಕಾರದಕೆಲಸ, ರೈಲು, ಮೀಟಿಂಗ್, ಉಪನ್ಯಾಸ, ಇಂಥವಕ್ಕೆ ಹೋಗತಕ್ಕವರಿಗಂತು ಕಾಲದ ಬೆಲೆಯು ಇತರರಿಗಿಂತಲೂ ಚೆನ್ನಾಗಿ ಗೊತ್ತಿರುವುದು. ಊಟಕ್ಕೂ ವಿನೋದಗಳಿಗೂ ಕೂಡ ಕಾಲ

ವನ್ನು ಗೊತ್ತುಮಾಡಿಕೊಂಡು ನಡೆಯಬೇಕು. ಕಾಲ ಕ್ಲುಪ್ತವಿಲ್ಲದೆ ಸ್ವೇಚ್ಛೆಯಾಗಿ ಮಾಡಿದ ಕೆಲಸವು ಕೆಟ್ಟುಹೋಗುವುದಲ್ಲದೆ ಹಾಗೆ ಮಾಡ ತಕ್ಕವರು ಅಪಹಾಸಕ್ಕೂ ಈಡಾಗುವರು.

## (28) ಕರ್ತವ್ಯ.

ನಾವು ಯಾವುದನ್ನು ತಪ್ಪದೆ ಮಾಡಲೇ ಬೇಕಾಗಿರುವುದೋ ಅದಕ್ಕೆ ಕರ್ತವ್ಯವೆಂದು ಹೆಸರು. ನಾವು ನಮ್ಮ ಕರ್ತವ್ಯವನ್ನು ಇತರ ಕಾರ್ಯಗಳಿಗಿಂತ ಮೊದಲು ಮಾಡಬೇಕು. ನಮ್ಮ ಕರ್ತವ್ಯವನ್ನು ನಾವು ಮಾಡುವುದರಿಂದ ಇತರರು ನಮ್ಮನ್ನು ಹೊಗಳಲಿ ಅಥವಾ ಇನ್ನು ಯಾವುದಾದರೊಂದು ವಿಧದಲ್ಲಿ ಸಹಾಯಮಾಡಲಿ ಎಂಬಂಥ ಉದ್ದೇಶಗಳಿರಕೂಡದು. ಕರ್ತವ್ಯವನ್ನು ಶ್ರದ್ಧೆಯಿಂದ ಚೆನ್ನಾಗಿ ಮಾಡಬೇಕು. 'ನಮ್ಮಂತೆ ಇರತಕ್ಕ ಇತರರು ಮಾಡಲಿಲ್ಲವಲ್ಲಾ ನಾವೇಕೆಮಾಡಬೇಕು ? ಎಂದು ಪೇಚಾಡುತ್ತ ನಾವು ನಮ್ಮ ಕರ್ತವ್ಯವನ್ನು ನಡೆಯಿಸುವುದರಲ್ಲಿ ಹಿಂದೆಗೆಯಬಾರದು. ಕರ್ತವ್ಯದ ವಿಷಯವಾಗಿ ಸರಿಯಾದ ನಿದರ್ಶನಗಳು ದೊರೆಯುವುವು. ಕರ್ತವ್ಯವನ್ನು ಮಾಡುವುದರಲ್ಲಿ ತಮಗೆ ಹೀಗೆ ತೋರುವುದೆಂದಾಗಲಿ ಇದನ್ನು ಹೀಗೆ ಮಾಡಬಹುದೆ ಎಂದು ಸಂಶಯಪಡುವುದಾಗಿಯಾಗಲಿ ಯಾವುದನ್ನು ಹೇಳುವುದಕ್ಕೂ ಅಧಿಕಾರವಿಲ್ಲ.

ಪರಸ್ಪರ ಹಕ್ಕುಬಾಧ್ಯತೆಗಳಿಗೆ ಲೋಪವಿಲ್ಲದಂತೆ ಜನಗಳು ನಡೆಯ ತಕ್ಕ ಧರ್ಮವೇ ಕರ್ತವ್ಯವೆಂದೂ ಇದರಿಂದ ದೇವರ ವಿಷಯದಲ್ಲಿ ನಾವು ಆಚರಿಸಬೇಕಾದ ಕರ್ತವ್ಯವೂ ನೆರವೇರುವುದೆಂದೂ ತತ್ವಜ್ಞಾನಿಗಳಾದ ಕೆಲವರು ಹೇಳುವರು. 'ನಾನು ಯಾವದಕ್ಕೂ ಜವಾಬ್ದಾರನಲ್ಲ, ನನಗೆ ಯಾವ ಕರ್ತವ್ಯವೂ ಇಲ್ಲ' ಎಂದು ಯಾವ ಮನುಷ್ಯನೂ ಹೇಳಲಾರನು. ಯಾಕೆಂದರೆ—ಲೋಕದಲ್ಲಿ ಪ್ರತಿಯೊಬ್ಬರಿಗೂ ಯಾವುದಾದರೂ ಕರ್ತವ್ಯಗಳು ಇದ್ದೇ ಇರುವುವು. ಅಂದರೆ ನಮ್ಮ ಸ್ವಂತ ವಿಷಯದಲ್ಲಿಯೂ ಇತ

ರರ ವಿಷಯದಲ್ಲಿಯೂ ದೇವರ ವಿಷಯದಲ್ಲೂ ನಮಗೆ ಎಷ್ಟೋ ಕರ್ತವ್ಯ ಗಳುಂಟು. ಇವಾವಕ್ಕೂ ಸಿಕ್ಕದೆ ಮನುಷ್ಯರು ಸುಮ್ಮನೆ ಹುಟ್ಟುವುದು ಸಾಯುವುದು ಅಸಂಭವ.

ವಿಧಿಗಳಿಗೆ ಬದ್ಧರಾಗಿ ನಡೆಯತಕ್ಕುದೂ ಕರ್ತವ್ಯವೇ. ಮೇಲಾದ ನಾಗರಿಕತೆಯನ್ನು ಮತ್ತು ಉತ್ತಮವಾದ ಮತಬೋಧೆಯನ್ನು ಪಡೆದಂಥ ದೇಶಗಳಲ್ಲಿ ಜನಗಳಿಗೆ ತಮ್ಮ ಕರ್ತವ್ಯಗಳೇನು ಎಂಬ ತಿಳಿವಳಿಕೆಯು ಚೆನ್ನಾಗಿರುತ್ತದೆ. ಸಣ್ಣಪುಟ್ಟವುಗಳೆಂದು ಕರ್ತವ್ಯವನ್ನು ಯಾವಾಗಲೂ ತಾತ್ಸಾರ ಮಾಡಬಾರದು. ಸಾಮಾನ್ಯವಾಗಿ ನಿತ್ಯಗಟ್ಲೆ ಒಂದೇ ಬಗೆಯಾದ ಕರ್ತವ್ಯವನ್ನು ನಡೆಯಿಸುವುದರಲ್ಲಿ ಮನಸ್ಸು ಬೇಸರಪಟ್ಟು ಹಿಂದೆಗೆಯುವು ದುಂಟು. ಆದರೂ ಅದನ್ನು ಹದ್ದಿನಲ್ಲಿಟ್ಟುಕೊಂಡು ಕರ್ತವ್ಯವನ್ನು ನೆರವೇ ರಿಸುವುದರಿಂದ ಪರಿಣಾಮದಲ್ಲಾದರೂ ಒಳ್ಳೆಯದಾಗುವುದು ಖಂಡಿತ. ಉದಾ—ನಿತ್ಯಗಟ್ಲೆ ಅಂಗಸಾಧನೆಯನ್ನು ಮಾಡಬೇಕೆಂದರೆ ಮನಸ್ಸು ಹಿಂದೆ ಗೆಯುವುದು. ಆದರೂ ತಪ್ಪದೆ ನಿತ್ಯವೂ ಅದನ್ನು ಸಾಧಿಸುತ್ತ ಬಂದರೆ ಯಾವಾಗಲೂ ಆರೋಗ್ಯದೃಢಕಾಯರಾಗಿರಬಹುದು. ಹೀಗೆ ಫಲಿತಾಂಶದಲ್ಲಿ ಒಳ್ಳೆಯವಾದರೂ ಪ್ರಕೃತಕ್ಕೆ ಕಷ್ಟವೆಂದು ತೋರುವ ಕೆಲಸಗಳು ಎಷ್ಟೋ ಉಂಟು. ಇಂಥ ಕೆಲಸಗಳನ್ನು ಮಾಡಗೊಳಿಸದೆ ಸದ್ಯಃ ವಿನೋದಕರವಾಗಿ ಮುಂದಕ್ಕೆ ನಮ್ಮನ್ನು ತಪ್ಪುದಾರಿಗೆಳೆಯುವಂಥ ಸನ್ನಿವೇಶಗಳು ಒದಗಿ ನಮ್ಮನ್ನು ಚಪಲಗೊಳಿಸುವುವು. ಅವಕ್ಕೆ ನಾವು ಮನಸ್ಸುಕೊಡಬಾರದು. ವಿಧೇಯತೆ, ಪ್ರೀತಿ, ಅಸ್ವಾರ್ಥಪರತೆ, ಇತ್ಯಾದಿಗಳು ಬಾಲ್ಯದಿಂದಲೂ ಮನೆಯಲ್ಲಿ ಆಚರಿಸಲ್ಪಡಬೇಕಾದ ಕರ್ತವ್ಯಗಳು ಇನ್ನು ಸ್ವಲ್ಪ ವಯಸ್ಸಾ ದನಂತರ ಪಾಠಶಾಲೆಯಲ್ಲಿ ನಡೆಯಿಸತಕ್ಕ ಕರ್ತವ್ಯಗಳೂ ಎಷ್ಟೋ ಉಂಟು. ತಮಗೋಸ್ಕರ ತಾವು ಮಾಡಿಕೊಳ್ಳಬೇಕಾದ ಕರ್ತವ್ಯಗಳು, ಅವುಗಳ ಜವಾಬ್ದಾರಿ ಇಂಥವುಗಳನ್ನೆಲ್ಲಾ ಮಕ್ಕಳಿಗೆ ದೊಡ್ಡವರು ತಿಳಿ

ಯಿಸುತ್ತಿರಬೇಕು. ಮತ್ತು ನಾವು ಈ ಪ್ರಪಂಚದಲ್ಲಿ ಹತ್ತು ಜನಗಳ ನಡುವೆ ಸರಿಯಾಗಿ ಬಾಳಬೇಕಾದರೆ ಯಾವಯಾವ ಕರ್ತವ್ಯಗಳನ್ನು ನಡೆಯಿಸಬೇಕು, ಹಾಗೆ ನಡೆಯಿಸುವುದಕ್ಕೆ ಕಾರಣವೇನು, ಇಂಥವುಗಳನ್ನೆಲ್ಲಾ ಪ್ರತಿಯೊಬ್ಬರೂ ತಿಳಿದುಕೊಂಡು ಅದರಂತೆ ನಡೆಯುವುದು ಒಳ್ಳೆಯದು. ಎಲ್ಲರೂ ಹೀಗೆ ನಡೆದರೆ ಈ ನಮ್ಮ ಭೂಲೋಕವೇ ಸ್ವರ್ಗಲೋಕವಾಗುವುದರಲ್ಲಿ ಸಂಶಯವೇನು ?

ತಿಳುವಳಿಕೆಯು ಹೆಚ್ಚುತ ಬಂದಂತೆಲ್ಲಾ ನಾಗರಿಕತೆಯೂ ಹೆಚ್ಚಿ ಪ್ರಬಲರದೆಸೆಯಿಂದ ದುರ್ಬಲರಿಗೆ ಬಾಧೆಯಾಗದಂತೆ ಕಾಪಾಡುವುದು, ನ್ಯಾಯಕ್ಕೆ ಲೋಪಬಾರದಂತೆ ನೋಡಿಕೊಳ್ಳುವುದು, ಇತರ ಲೋಕೋಪಕಾರ ಕಾರ್ಯಗಳು ಇವೆಲ್ಲಾ ಬಲು ಹೆಚ್ಚಾಗಿ ನಡೆಯುವುವು. ಕರ್ತವ್ಯಕ್ಕೋಸ್ಕರ ಎಷ್ಟೋ ಸಂದರ್ಭಗಳಲ್ಲಿ ಆತ್ಮಾರ್ಪಣೆಯನ್ನೇ ಮಾಡಿ ಬಿಡಬೇಕಾದೀತು. ಯೋಧರು ಕದನದಲ್ಲಿಯೂ, ವೈದ್ಯರು ರೋಗಗಳಲ್ಲಿಯೂ, ಉಪಚಾರಕರು ಸಾಂಕ್ರಾಮಿಕಜಾಡ್ಯಗಳಲ್ಲಿಯೂ, ಕೂಲಿಗಳು ದೊಡ್ಡದೊಡ್ಡ ಅನಾಹುತಗಳಲ್ಲಿಯೂ ಪ್ರಾಣವೊಪ್ಪಿಸುತ್ತಿರುವುದೇ ಇದಕ್ಕೆ ನಿದರ್ಶನವಾಗಿದೆ. ಇವರು ಹೀಗೆ ಗತಿಸಿದರೂ ಇವರ ಮರಣವು ಶ್ಲಾಘ್ಯವಾದುದು. ಇವರ ನಡತೆಯು ಪೂಜ್ಯವಾದುದು.

ಕರ್ತವ್ಯಕ್ಕೆ ತಪ್ಪಿ ನಡೆಯುತಕ್ಕವರು ದುರ್ಬಲರೂ ಹೇಡಿಗಳೂ ಅಪ್ರಯೋಜಕರೂ ಎನಿಸಿಕೊಳ್ಳುತ್ತಾರೆ ಕರ್ತವ್ಯವು ವ್ಯಸನಕಾಲದಲ್ಲಿ ಸಮಾಧಾನವನ್ನೂ ನಿರಾಶೆಯಾದಾಗ ಉತ್ತೇಜನವನ್ನೂ ಉಂಟುಮಾಡುತ್ತದೆ. ಲೋಕದಲ್ಲಿ ಕೆಲವು ಕರ್ತವ್ಯಗಳು ಸರ್ವರಿಗೂ ಉಂಟು—ತಾಯ್ತಂದೆಗಳಲ್ಲಿ ಗೌರವ, ವಿನಯ, ವಿಧೇಯತೆ, ಇಂಥ ಸುಗುಣಗಳಿಂದ ನಡೆಯುತಕ್ಕದ್ದು ಮಕ್ಕಳಕರ್ತವ್ಯ. ಕಾಲ ಕಾಲಕ್ಕೆ ಅನ್ನವಸ್ತ್ರಾದಿಗಳಿಂದ ಪೋಷಿಸಿ ಮಕ್ಕಳನ್ನು ದೃಢಾಂಗರನ್ನಾಗಿ ಮಾಡುವುದು, ಒಳ್ಳೆಯ ನಡತೆ

ಗಳನ್ನು ಕಲಿಸಿ ಅವರಿಂದ ಲೋಕಕ್ಕೂ ಲೋಕದಿಂದ ಅವರಿಗೂ ಪರಸ್ಪರ ಉಪಕಾರವುಂಟಾಗುವಂತೆ ಮಾಡುವುದು, ಉತ್ತಮವಾದ ಮಾರ್ಗದಲ್ಲಿ ಒಳ್ಳೆಯ ವಿದ್ಯೆಯನ್ನು ಕಲಿಸಿ ಅವರಿಗೆ ಜ್ಞಾನವನ್ನು ಹೆಚ್ಚಿಸುವುದು, ದೈವಭಕ್ತಿಯುಂಟಾಗುವಂತೆ ಮಾಡುವುದು, ಇಂತವುಗಳೆಲ್ಲಾ ತಾಯ್ತಂದೆಗಳ ಕರ್ತವ್ಯಗಳು. ಉಪಾಧ್ಯಾಯರು ಬೋಧಿಸುವ ಪಾಠವನ್ನು ಗಮನವಿಟ್ಟು ಗ್ರಹಿಸುವುದು, ಅವರಿಗೆ ವಿಧೇಯರಾಗಿರುವುದು, ಕಷ್ಟಪಟ್ಟು ವ್ಯಾಸಂಗಮಾಡುವುದು, ಇಂಥವೆಲ್ಲಾ ವಿದ್ಯಾರ್ಥಿಯ ಕರ್ತವ್ಯಗಳು. ಇವನು ಹೀಗೆ ನಡೆಯದಿದ್ದರೆ ಉಪಾಧ್ಯಾಯರು ಎಷ್ಟು ಶ್ರಮಪಟ್ಟು ಬೋಧಿಸಿದರೂ ಒಡಕು ಮಡಿಕೆಯಲ್ಲಿ ಸುರಿದ ನೀರಿನಂತೆ ವ್ಯರ್ಥವಾಗುವುದು. ಉತ್ತಮವಾದ ರೀತಿಯಲ್ಲಿ ಪಾಠಗಳನ್ನು ಬೋಧಿಸುವುದು, ಸರಿಯಾಗಿ ಮೇಲ್ವಿಚಾರಣೆಮಾಡುವುದು, ಜವಾಬ್ದಾರಿಯನ್ನು ವಹಿಸಿ ಶಿಷ್ಯರನ್ನು ತಿದ್ದಿ ಸನ್ಮಾರ್ಗಕ್ಕೆ ತರುವುದು, ಸದ್ಗುಣಗಳಿಗೆಲ್ಲಾ ತಾವು ಮೇಲ್ಪಂಕ್ತಿಯಾಗಿರುವುದು. ಇಂಥವುಗಳೆಲ್ಲಾ ಉಪಾಧ್ಯಾಯರ ಕರ್ತವ್ಯಗಳು. ಇವರು ಈ ಕೆಲಸಗಳನ್ನು ಅಶ್ರದ್ಧೆಯಿಂದ ನಡೆಯಿಸಿದರೆ ಮಕ್ಕಳು ಕೆಟ್ಟುಹೋಗಿ ಮುಂದೆ ಅಯೋಗ್ಯ ಪ್ರಜೆಗಳಾಗಿ ಪರಿಣಮಿಸುವುದರಿಂದ ಒಟ್ಟು ದೇಶಕ್ಕೇ ಅಪಾಯವು ಸಂಭವಿಸೀತು. ತನ್ನ ಕೆಲಸಗಾರರ ಯೋಗಕ್ಷೇಮವನ್ನು ನೋಡಿಕೊಳ್ಳತಕ್ಕುದು ದಣಿಗೂ ದಣಿಯ ಲಾಭನಷ್ಟಗಳನ್ನು ಯೋಚಿಸಿ ನಡೆದುಕೊಳ್ಳತಕ್ಕುದು ಕೆಲಸಗಾರರಿಗೂ ಕರ್ತವ್ಯಗಳು. ಸರ್ವದಾ ಪರಸ್ಪರ ಸಹಾಯಕರಾಗಿರತಕ್ಕುದು ನೆರೆಹೊರೆಯವರ ಕರ್ತವ್ಯ. ಹೀಗೆಯೇ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಪರಿಪಾಲಿಸುತ್ತ ಪ್ರಜೆಗಳನ್ನು ನೆಮ್ಮದಿಯಾಗಿಟ್ಟುಕೊಂಡಿರತಕ್ಕುದು ರಾಜನಿಗೆ ಕರ್ತವ್ಯವು. ಆತನ ಸರ್ಕಾರದ ವಿಧಿಗಳಿಗೆ ತಗ್ಗಿ ನಡೆಯುತ್ತಲೂ ತಮ್ಮ ಕಷ್ಟಸುಖಗಳನ್ನು ವಿನಯ ವಿಧೇಯತೆಗಳಿಂದ ವಿಜ್ಞಾಪಿಸಿಕೊಳ್ಳುತ್ತಲೂ ರಾಜ್ಯಭಾರವನ್ನು ನಿರ್ವಹಿಸುವುದರಲ್ಲಿ ದೊರೆಗೆ ಒತ್ತಾಸೆಮಾಡುತ್ತಲೂ ಇರತಕ್ಕುದು ಪ್ರಜೆಗಳ ಕರ್ತವ್ಯ

ಮೇಲೆ ಹೇಳಿದಂತೆ ಎಲ್ಲರೂ ತಮ್ಮತಮ್ಮ ಕರ್ತವ್ಯಗಳನ್ನು ಸರಿಯಾಗಿ ನೆರವೇರಿಸುವುದರಿಂದ ಬಹಳ ಪ್ರಯೋಜನಗಳುಂಟು. ನಡತೆಯು ಕೆಡದೆ ಸರ್ವದಾ ಮೇಲಾದ ಮಾರ್ಗದಲ್ಲಿರುವುದು. ಘನತೆಯೂ ಅದರಿಂದ ಕೀರ್ತಿಯೂ ಲಭಿಸುವುವು. ಮತ್ತು ಇದರಿಂದ ಯಾವ ರೂಪದಲ್ಲಾದರೂ ಇತರರಿಗೆ ಸಹಾಯವಾಗಿಯೇ ಆಗುವುದು.

## (29) ಮಿತವ್ಯಯ.

ಆಗಾಗ್ಗೆ ಜೀವನಕ್ಕೆ ಸಂಪಾದಿಸಿಕೊಳ್ಳುವುದೇ ಕಷ್ಟವಾಗಿ ಮುಂದಕ್ಕೆ ಏನೂ ಕೂಡಿಸಿಟ್ಟುಕೊಳ್ಳಲಾರದಂಥ ಕಡು ಬಡವರೇನೋ ಉಂಟು. ಆದರೆ ಅಂಥವರ ಸಂಖ್ಯೆಯು ಅತಿಸ್ವಲ್ಪ. ಇತರರನೇಕರು ಪುಷ್ಟರಾಗಿಯೇ ಇರುವರು. ಅಂಥವರು ಮುಂದಾಲೋಚನೆಯನ್ನಿಟ್ಟುಕೊಂಡು ಕೆಲಸಮಾಡುತ್ತಾ ಸ್ವಲ್ಪಸ್ವಲ್ಪ ಹಣವನ್ನು ಶೇಖರಿಸುತ್ತ ಬಂದರೂ ಕಡೆಗಾಲದಲ್ಲಿ ತಮಗೆ ಕಷ್ಟಬಾರದಂತೆ ಮಾಡಿಕೊಳ್ಳಬಹುದು. ಮುಂದಾಲೋಚನೆಯೂ ಜಾಗರೂಕತೆಯೂ ಇದ್ದರೆ ಮಿತವ್ಯಯವನ್ನು ಸುಲಭವಾಗಿ ನಡೆಯಿಸಿಕೊಳ್ಳಬಹುದು.

ಮಿತವ್ಯಯವು ಉತ್ತಮವಾದುದೆಂದು ಒಟ್ಟುಲೋಕವೇ ಹೊಗಳುತ್ತಿರುವುದು. ನಮ್ಮ ನಿತ್ಯಗಟ್ಟಳೆಯ ಜೀವಮಾನದಲ್ಲಿ ಮಿತವಾಗಿ ನಡೆಯುತ್ತಲೂ, ಮುಂದಕ್ಕೆ ಅನುಕೂಲಿಸುವಂತೆ ಕ್ಲುಪ್ತವಾಗಿ ಸ್ವಲ್ಪಸ್ವಲ್ಪವನ್ನಾದರೂ ಶೇಖರಿಸುತ್ತಲೂ, ಬರುವುದೇ ಮಿತವ್ಯಯವೆಂದೂ ಸಂಗ್ರಹವೆಂದೂ ಎನಿಸಿಕೊಳ್ಳುವುದು. ಮಿತವ್ಯಯವು ದುಂದುಗಾರಿಕೆಗೆ ವಿರುದ್ಧವಾದ ನಡತೆಯು ಆದರೆ ಮಿತವ್ಯಯವೆಂದರೆ ಯಾವುದನ್ನೂ ಸಾಲದಿರುವಂತೆ ಹ್ರಸ್ವವಾಗಿ ನಡೆಯಿಸುವುದೆಂಬುದಲ್ಲ. ಎಷ್ಟಾಗಬೇಕೋ ಅಷ್ಟನ್ನು ಮಾತ್ರ ನ್ಯೂನತೆಯಿಲ್ಲದೆ ನಡೆಯಿಸತಕ್ಕದ್ದು. ಮಿತವ್ಯಯವನ್ನು ಧನದ ವಿಷಯದಲ್ಲಿ ಮಾತ್ರ ಆಚರಿಸಬೇಕೆಂದು ತಿಳಿಯಬಾರದು. ಕಾಲ, ವಸ್ತು, ಆರೋಗ್ಯ, ಶಕ್ತಿ, ಸಂದರ್ಭ, ಇಂಥವುಗಳಲ್ಲೆಲ್ಲಾ ಮಿತಾಚರಣೆಯು ಅವಶ್ಯಕ. ಉದಾ—ಒಬ್ಬನು ತನಗೆ ಪ್ರಾಪ್ತವಾಗಬಹುದಾದ ಅನಾರೋಗ್ಯವನ್ನು ಪರಿಗಣಿಸದೆ ಹೆಚ್ಚಾಗಿ ದುಡಿದು ಹಣವನ್ನು ಸಂಪಾದಿಸುತ್ತಾನೆಂದು

ಭಾವಿಸೋಣ. ಇದರಿಂದ ಏನಾಗುವುದು ? ಹೆಚ್ಚಾಗಿ ಕಷ್ಟಪಟ್ಟು ಸಂಪಾದಿಸಿದ ದ್ರವ್ಯವೆಲ್ಲಾ ವೈದ್ಯರಪಾಲಾಗುವುದು. ಮತ್ತು ರೋಗದಲ್ಲಿ ನರಳುತ್ತಿರುವ ಕಾಲದಲ್ಲಿ ಸಂಪಾದನೆ ಮಾಡುವುದಕ್ಕೂ ಅವಕಾಶ ತಪ್ಪುವುದು. ಇತರ ವಿಷಯಗಳಲ್ಲಿಯೂ ಹೀಗೆಯೆ.

ಅನಾವಶ್ಯಕಗಳಾದ ಭೋಗ್ಯವಸ್ತುಗಳಿಗೋಸ್ಕರ ವೆಚ್ಚಮಾಡದೆ ಆವಶ್ಯಕವಾದುದಕ್ಕೆ ಮಾತ್ರ ದ್ರವ್ಯವನ್ನು ವಿನಿಯೋಗಿಸಬೇಕು. ಯಾವುದು ಇಲ್ಲದಿದ್ದರೆ ಯತ್ನವೇ ಇಲ್ಲವೋ ಅಂಥದು ಆವಶ್ಯಕವಸ್ತು. ಯಾವುದು ಇಲ್ಲದಿದ್ದರೂ ತೊಂದರೆಯಾಗುವುದಿಲ್ಲವೋ ಅಂಥದು ಭೋಗ್ಯವಸ್ತುವು ಉದಾ—ಸಾಮಾನ್ಯವಾದ ಬಟ್ಟೆಯು ಆವಶ್ಯಕವಸ್ತು. ಏಕೆಂದರೆ ಅದು ಇದ್ದ ಹೊರತು ಚಳಿಯನ್ನು ತಡೆಯಲಿಕ್ಕಾಗುವುದಿಲ್ಲ. ಆದರೆ ರೇಷ್ಮೆಯ ಅಥವಾ ಕಲಾಪತ್ತಿನ ಪೀತಾಂಬರವು ಭೋಗ್ಯವಸ್ತು. ಹೇಗೆಂದರೆ—ಅಂಥಾ ಪೀತಾಂಬರವಿಲ್ಲದಿದ್ದರೂ ಚಳಿಯನ್ನು ಸಾಮಾನ್ಯವಾದ ಬಟ್ಟೆಗಳಿಂದಲೇ ತಡೆಯುವುದು ಸಾಧ್ಯ. ಭೋಗ್ಯವಸ್ತುಗಳಿಗೆ ಹೆಚ್ಚಾಗಿ ಆಶೆಪಡುತ್ತ ಬಂದಂತೆಲ್ಲಾ ದುಂದುಗಾರಿಕೆಯು ಹೆಚ್ಚುತ್ತ ಹೋಗುವುದರಿಂದ ಮಿತವ್ಯಯಕ್ಕೆ ಅವಕಾಶವಿಲ್ಲದೆ ಹೋಗುವುದು. ಯಾವುದಾದರೊಂದು ವಸ್ತುವು ಅಗ್ಗವಾಗಿದ್ದಮಾತ್ರಕ್ಕೆ ಅದನ್ನು ಕೊಂಡುಕೊಳ್ಳಬಾರದು. ಹಾಗೆ ಕೊಳ್ಳುವುದು ಮಿತವ್ಯಯಕ್ಕೆ ವಿರುದ್ಧ. ಏಕೆಂದರೆ--ಒಳ್ಳೆಯ ಪದಾರ್ಥಗಳು ಅಗ್ಗವಾಗಿರುವುದು ಯಾವಾಗಲೂ ಅಸಂಭವ. ಕೆಲವು ವಸ್ತುಗಳು ಒಂದುವೇಳೆ ಅಗ್ಗವಾಗಿ ಕಂಡರೂ ಅವು ಲೊಡ್ಡು ಪದಾರ್ಥಗಳೇ. ಅಗ್ಗವೆಂದರೆ ಕೊಳ್ಳತಕ್ಕವರಿಗೆ ತಾನು ಏನೋ ದೊಡ್ಡ ಉಪಕಾರವನ್ನು ಮಾಡುವಂತೆ ನಟಿಸಿ ಮಾರತಕ್ಕವನು ನಿಜವಾಗಿಯೂ ಮೋಸಮಾಡತಕ್ಕುದೇ. ಮತ್ತು ಅನಾವಶ್ಯಕವಾದ ವಸ್ತು ಎಷ್ಟೇ ಅಗ್ಗವಾಗಿದ್ದರೂ ಅದನ್ನು ಕೊಳ್ಳಬಾರದು. ಕಂಡಕಂಡುದಕ್ಕೆಲ್ಲಾ ಚಾಪಲ್ಯಪಡದೆ ಮನಸ್ಸನ್ನು ಹದ್ದಿನಲ್ಲಿಟ್ಟುಕೊಂಡು ಇದ್ದುದರಲ್ಲಿಯೇ ತೃಪ್ತರಾಗಿರಬೇಕು. ಕೆಲವರು ಇದು ಲುಬ್ಧಸ್ವಭಾವವೆಂದು ತಪ್ಪಾಗಿ ತಿಳಿದುಕೊಂಡಿದ್ದಾರೆ ಮುಂದೆ ತಾವು ಬಡವರಾಗಿ ಕೆಡಬಾರದಲ್ಲಾ ಎಂಬುದಕ್ಕೋಸ್ಕರ ತನ್ನ ಖರ್ಚುವೆಚ್ಚಗ

ಳನ್ನು ಮಿತವಾಗಿ ನಡೆಯಿಸಿಕೊಳ್ಳತಕ್ಕದು ಪ್ರತಿಯೊಬ್ಬರಿಗೂ ಕರ್ತವ್ಯ. ಆಗಬೇಕಾದ ಯಾವ ಕೆಲಸಗಳಿಗೂ ಇದರಿಂದ ಲೋಪವಿಲ್ಲ. ಮತ್ತು ಸ್ವಸಂಬಂಧದಲ್ಲಿಯೇ ಇದು ಪರ್ಯವಸಿತವಾಗುವುದು. ಲುಬ್ಧತ್ವವಾದರೋ ಇಂಥದಲ್ಲ. ಲುಬ್ಧನು ತನ್ನಲ್ಲಿರುವುದನ್ನು ತಾನೂ ಉಪಯೋಗಿಸುವುದಿಲ್ಲ. ಇತರರಿಗೂ ಕೊಡುವುದಿಲ್ಲ.

ಹೆಚ್ಚಾಗಿ ಹಣಗಾರರಾಗಿದ್ದ ಮಾತ್ರಕ್ಕೇ ಮಿತವ್ಯಯವನ್ನು ಆಚರಿಸ ಕೂಡದೆಂಬುದಾಗಲಿ, ಬಡವರು ಮಾತ್ರ ಇದನ್ನು ಆಚರಿಸಬೇಕೆಂಬುದಾಗಲಿ ಏನೂ ಇಲ್ಲ. ಐಶ್ವರ್ಯವಂತರೂ ಮಿತವ್ಯಯವನ್ನು ಆಚರಿಸುತ್ತ ಬಂದರೆ ಇದರಲ್ಲಿ ಶೇಖರಿಸಬಹುದಾದ ದ್ರವ್ಯಗಿಂದ ಬಡಬಗ್ಗರಿಗೆ ಹಲವು ಬಗೆಯ ಉಪಕಾರಗಳನ್ನು ಮಾಡಿ ಪುಣ್ಯವನ್ನು ಸಂಪಾದಿಸಿಕೊಳ್ಳಬಹುದು. ಜಾರ್ಜ್ ವಾಷಿಂಗ್ಟನ್ನನನ್ನು ಉತ್ತರ ಅಮೇರಿಕಾದ ಸಂಯುಕ್ತ ಸಂಸ್ಥಾನಗಳ ಪ್ರೆಸಿಡೆಂಟ್ ಕೆಲಸಕ್ಕೆ ಕರೆವುದಕ್ಕೆ ಹೋದಾಗ್ಗೆ ಆತನು ತನ್ನ ಹೊಲವನ್ನು ತಾನೇ ಉಳುತ್ತಿದ್ದನಂತೆ! ನಂದರನ್ನು ನಿರ್ಮೂಲಮಾಡಿ ಚಂದ್ರಗುಪ್ತನಿಗೆ ಪಟ್ಟಾಭಿಷೇಕಮಾಡಿದ ಚಾಣಕ್ಯನು ಒಂದು ಹುಲ್ಲು ಗುಡಿಸಿಲಿನಲ್ಲಿ ವಾಸ ಮಾಡುತ್ತಿದ್ದನಂತೆ!

ಮಿತವ್ಯಯಾಚರಣೆಯು ಹುಟ್ಟುವಾಗಲೇ ಜತೆಯಲ್ಲಿ ಬರುವಂಥ ಸ್ವಾಭಾವಿಕವಾದ ಗುಣವಲ್ಲ. ಮಿತವ್ಯಯಾಚರಣೆಯುಳ್ಳವರನ್ನು ನೋಡುವುದು, ಅಥವಾ ಸ್ವಂತ ಅನುಭವ, ವಿದ್ಯಾಭ್ಯಾಸ, ನಾಗರಿಕತೆ, ಮುಂದಾಲೋಚನೆ ಇತ್ಯಾದಿಗಳ ಮೂಲಕ ಕಲಿಯತಕ್ಕದಾಗಿದೆ. ಮನುಷ್ಯನು ಮುಂದಿನ ಅನುಕೂಲತೆಗೋಸ್ಕರ ಈಗ ಕೆಲಸಮಾಡುತ್ತಲೂ ಮುಂದೆ ಬರುವ ತೊಂದರೆ ನಿವಾರಿಸಿಕೊಳ್ಳುವುದಕ್ಕೋಸ್ಕರ ಸನ್ನದ್ಧನಾಗುತ್ತಲೂ ಇರುವನು. ಕಾಸುಗಳನ್ನು ನಾವು ಕೂಡಿಹಾಕುತ್ತ ಬಂದರೆ ರೂಪಾಯಿಗಳನ್ನು ಕೂಡಿ ಹಾಕುವ ಕೆಲಸವನ್ನು ಆ ಕಾಸುಗಳು ತಾವಾಗಿಯೇ ಮಾಡಿಕೊಳ್ಳುವುವು.

ಇದು ಶೇಖರಿಸುವ ವಿಧಾನವಾಯಿತಷ್ಟೆ. ದುಂದುಗಾರಿಕೆಯ ವಿಚಾರವೂ ಹೀಗೆಯೇ. ಒಂದು ದೊಡ್ಡ ಪಾತ್ರೆಗೆ ಒಂದೇ ಒಂದು ಸಣ್ಣ ರಂಧ್ರವಿ

ದ್ದರೂ ಸ್ವಲ್ಪ ಹೊತ್ತಿನಲ್ಲಿಯೇ ಅದನ್ನು ಬರಿದು ಮಾಡಬಲ್ಲನು. ಆದ್ದರಿಂದ ಖರ್ಚುವೆಚ್ಚಗಳ ವಿಷಯದಲ್ಲಿ ಸರ್ವದಾ ಸಮತೆಯಿರಬೇಕು. 'ಇದ್ದಾಗ ಇರಿಯಣ್ಣ ಇಲ್ಲದಾಗ ಕಿರಿಯಣ್ಣ,' ಎಂಬಂತೆ ನಡೆವುದು ಸುತರಾಂ ನಿಷಿದ್ಧ. ಈ ವಿಷಯವಾಗಿ ಎಷ್ಟೋ ದೃಷ್ಟಾಂತಗಳಿವೆ. ಆಹಾರ—ವಿಹಾರಾದಿಗಳಲ್ಲಿ ಕೂಡ ಮಿತಾಚರಣೆಯಿಂದ ಬಹಳ ಪ್ರಯೋಜನಗಳುಂಟು. ಇದರಿಂದ ಆರೋಗ್ಯವು ಕೆಡದಂತೆ ಇರುವುದು. ಆಹಾರದಲ್ಲಿ ಮಿತಿಮೀರಿ ನಡೆಯುವುದರಿಂದ ಅಜೀರ್ಣ ಮೊದಲಾದ ವ್ಯಾಧಿಗಳುಂಟಾಗುವುವು ಹಣಗಾರರು ಹೀಗೆ ಮಿತಿಮೀರಿ ನಡೆಯುವುದರಿಂದ ಬೊಜ್ಜು ಬೆಳೆಯಿಸಿಕೊಂಡು ನಿತ್ಯರೋಗಿಗಳಾಗಿರುವರು. ದುಂದುಗಾರನು ಎಷ್ಟು ವೆಚ್ಚ ಮಾಡಿದರೂ ಇನ್ನು ಮುಂದಕ್ಕೂ ಆಸೆಪಡುತ್ತಲೇ ಇರುವುದರಿಂದ ಅವನಿಗೆ ಯಾವಾಗ್ಗೂ ತೃಪ್ತಿಯೇ ಇಲ್ಲ. ಮಿತಾಚರಣೆಯುಳ್ಳವನಿಗಾದರೂ ಮನಸ್ಸು ಸರ್ವದಾ ತೃಪ್ತವಾಗಿಯೂ ಶಾಂತವಾಗಿಯೂ ಇರುವುದು. ಮಿತಾಚರಣೆಯುಳ್ಳವರು ಸ್ವತಂತ್ರರಾಗಿ ಬಾಳುವರು. ಸ್ವಾತಂತ್ರ್ಯವು ತುಂಬಾ ಗೌರವಪ್ರದವು. ಹಾಗಿಲ್ಲದೆ ಇತರರ ಹಂಗಿಗೆ ಬೀಳುವುದು ಬಲುಹೀನಾಯ. ತಿರುಪೆ ಯಾಚನೆ, ದೈನ್ಯ ಇಂಥವೆಲ್ಲಾ ಮನುಷ್ಯನ ಘನತೆಯನ್ನು ಹಾಳುಮಾಡುತ್ತವೆ. ಲೋಕದಲ್ಲಿ ಎಷ್ಟೋ ಕೆಲಸಗಳು ನಡೆದೂ ನಡೆಯುತ್ತಲೂ ಇರುವುವೆಲ್ಲಾ ಮಿತಾಚರಣೆಯನ್ನು ಪಡೆದಿದ್ದ ಮಹನೀಯರಾದ ಧನಿಕರು ಶೇಖರಿಸಿದ್ದ ದ್ರವ್ಯದಿಂದಲೇ. ಉದಾ—ಕಟ್ಟಡಗಳು, ಸೇತುವೆಗಳು, ಕಾರ್ಖಾನೆಗಳು:—ರೈಲ್ವೆಗಳು, ಮೊದಲಾದುವುಗಳು ಏರ್ಪಟ್ಟು ಲೋಕದಲ್ಲೆಲ್ಲಾ ಪರಸ್ಪರೋಪಕಾರವನ್ನೂ ನಾಗರಿಕತೆಯನ್ನೂ ಹರಡುತ್ತಿರುವುದು ಮಿತವ್ಯಯದ ಪ್ರಭಾವದಿಂದಲೇ ಅಲ್ಲವೆ ? ಮಿತವ್ಯಯಾಚರಣೆಯಿಂದ ಆತ್ಮಸಂಯಮನವೂ ನಿಗರ್ವಿತ್ವವೂ ಉಂಟಾಗುವುವು. ಒಬ್ಬೊಬ್ಬರು ಸ್ವಲ್ಪ ಸ್ವಲ್ಪವಾಗಿ ಶೇಖರಿಸಿದರೂ ಒಟ್ಟು ಜನಾಂಗವೇ ಭಾಗ್ಯಶಾಲಿಯಾಗುವುದು ಪೋಸ್ಟ್ ಆಫೀಸ್, ಸೇವಿಂಗ್ಸ್ ಬ್ಯಾಂಕ್, ಲೈಫ್ ಇನ್ ಷ್ಯೂರೆನ್ಸ್ ಮೊದಲಾದವುಗಳಲ್ಲಿ ಸ್ವಲ್ಪ ಸ್ವಲ್ಪವಾಗಿಯೇ ಕೂಡಹಾಕಿದ ದ್ರವ್ಯವು ಕೂಡ ಕಾಲಕ್ರಮದಲ್ಲಿ ಬಹಳವಾಗಿ ಹೆಚ್ಚುವುದು. ಹೀಗೆಯೇ ಅನೇಕರು ಅಲ್ಪ ಸ್ವಲ್ಪ ಚಂದಾಹಣವನ್ನು

ಹಾಕಿ ಕಾರ್ಖಾನೆ, ರೈಲ್ವೆ ಅಥವಾ ಮತ್ತೆ ಯಾವುದಾದರೊಂದು ವ್ಯಾಪಾರ, ಇಂಥವುಗಳನ್ನು ನಡೆಯಿಸಿಕೊಳ್ಳುವುದರಿಂದ ಒಟ್ಟು ಎಲ್ಲರಿಗೂ ಲಾಭವು ದೊರೆತು ಆ ಜನಾಂಗವೆಲ್ಲಾ ಊರ್ಜಿತಸ್ಥಿತಿಗೆ ಬರುವುದು. ಯಾವುದನ್ನಾದರೂ ನಿಶ್ಯವೂ ತಪ್ಪದೆ ಸ್ವಲ್ಪಸ್ವಲ್ಪವಾಗಿಯೇ ಕೂಡಿಟ್ಟರೂ ಅದರಿಂದ ಉಂಟಾಗತಕ್ಕ ಪ್ರಯೋಜನಗಳೇನೋ ಹೆಚ್ಚಾಗಿರುವುವು. ನಮ್ಮ ಸಂಪಾದನೆಯಲ್ಲಿ ನಿತ್ಯವೂ ಒಂದು ಸಣ್ಣ ಅಂಶವನ್ನಾದರೂ ಒಂದುಕಡೆ ಕೂಡಿಹಾಕುತ್ತಿರಬೇಕು. ನಮಗೆ ರೋಗಾದ್ಯುಪದ್ರವಗಳು ಸಂಭವಿಸಿದಾಗ ಅಥವಾ ಇತರವಿಧವಾದ ಖರ್ಚುವೆಚ್ಚಗಳು ಒದಗಿದಾಗ್ಗೆ ಅಥವಾ ಅಕಸ್ಮಾತ್ತಾಗಿ ಏನಾದರೂ ಗಂಡಗಳು ಸಂಭವಿಸಿದಾಗ್ಗೆ ಈ ಹಣದಿಂದ ಪ್ರಯೋಜನವನ್ನು ಪಡೆಯಬಹುದು. ಒಂದುವೇಳೆ ಇಂಥ ತೊಂದರೆಗಳು ಯಾವುವೂ ಸಂಭವಿಸದಿದ್ದರೂ ಮುಪ್ಪುಬರುವುದೇನೋ ಖಂಡಿತವಷ್ಟೆ. ಆಗಲಾದರೂ ಈ ದ್ರವ್ಯದಿಂದ ತುಂಬ ಸಹಾಯವಾಗುವುದು. ಅಂಥ ಸಮಯಕ್ಕೆ ಒದಗುವಂತೆ ಆಪದ್ಧನವನ್ನು ಕೂಡಿಸಿಟ್ಟುಕೊಳ್ಳದಿದ್ದರೆ ನಾವು ಇತರರ ಹಂಗಿಗೆ ಒಳಪಡಬೇಕಾದೀತು. ಒಂದುವೇಳೆ ಅವರು ನಮ್ಮನ್ನು ಎಷ್ಟೇ ಪ್ರೀತಿಯಿಂದ ಆದರಿಸಿದರೂ ನಮ್ಮ ಮನಸ್ಸಿಗೇನೋ ಒಂದು ವಿಧವಾದ ಸಂಕೋಚವು ಇದ್ದೇಇರುವುದು, ಮೇಲೆಹೇಳಿರುವ ಯಾವ ತೊಂದರೆಗಳು ಬಂದರೂ ತಡೆದುಕೊಳ್ಳುವುದಕ್ಕೆ ತಕ್ಕಂತೆ ಬೇಕಾದಷ್ಟು ಹಣವಿದ್ದರೂ ನಾವು ದುಂದುಗಾರರಾಗಬಾರದು. ಏಕೆಂದರೆ ದುಂದುಗಾರಿಕೆಯಿಂದ ಅನ್ಯಾಯವಾಗಿ ವೆಚ್ಚವಾಗುವ ದ್ರವ್ಯವನ್ನು ಒಂದುಕಡೆ ಕೂಡಿಹಾಕಿದ್ದರೆ ಇತರರಿಗೆ ಕಷ್ಟಬಂದವೇಳೆಗಳಲ್ಲಾದರೂ ಸಹಾಯಮಾಡಬಹುದು.

ಅನೇಕರು ಜಂಭದಿಂದಲೋ ಇತರರು ತಮ್ಮನ್ನು ಆಡಿಕೊಂಡಾರೆಂಬ ಶಂಕೆಯಿಂದಲೋ 'ನಾಳೆಯಾರೋ ನಾವುಯಾರೋ, ಈಗ ಆದದ್ದೆ ನಮ್ಮದು' ಎಂಬ ಬಾಯಿಮಾತಿನ ವೇದಾಂತದಿಂದಲೋ ಅಥವಾ ದೊಡ್ಡವರನ್ನು ಮೆಚ್ಚಿಸಿ ಪ್ರತಿಷ್ಠೆಯನ್ನು ಪಡೆಯಬೇಕೆಂಬ ಉದ್ದೇಶದಿಂದಲೋ ತಮ್ಮ ಯೋಗ್ಯತೆಗೆ ಮೀರಿ ವೆಚ್ಚಮಾಡಿ ದ್ರವ್ಯವನ್ನು ದುಂದುಮಾಡುವರು. ಮದುವೆ ಮುಂಜಿ ಮೊದಲಾದ ಶುಭಕಾರ್ಯಗಳಲ್ಲಿ, ಸಮಾರಾಧನೆ,ಚಪ್ಪರ

ಮೆರವಣಿಗೆ, ಮೇಳ, ಮುಯ್ಯಿ, ಮೊದಲಾದುವುಗಳಲ್ಲಿಯೂ, ಸ್ನೇಹಿತರಿಗೆ ಅಥವಾ ನೆಂಟರಿಷ್ಟರಿಗೆ ನಡೆಯಿಸುವ ಔತಣ ಉಪಚಾರಗಳಲ್ಲಿಯೂ, ಮೃತರಾದವರ ಉತ್ತರಕ್ರಿಯಾದಿಗಳಲ್ಲಿ ದಾನಧರ್ಮಗಳರೂಪದಲ್ಲಿಯೂ, ಉಡಿಗೆ, ತೊಡುಗೆ, ವಾಹನ, ಸೇವಕರು ಇತ್ಯಾದಿಗಳಲ್ಲಿಯೂ ಮಿತಿಮೀರಿ ದ್ರವ್ಯವನ್ನು ದುರುಪಯೋಗಪಡಿಸುವರು. ಸರ್ಕಾರದವರು ತನ್ನ ಔದಾರ್ಯಕ್ಕೆ ಮೆಚ್ಚಿ ಏನಾದರೂ ಬಿರುದುಗಳನ್ನು ಕೊಡುವರೆಂಬ ಹಾರಯಿಕೆಯಿಂದಲೂ ಹಲವರು ದುಂದುಗಾರರಾಗುವದುಂಟು. ಒಬ್ಬ ದಡ್ಡನು ತನಗೆ ಸರ್ಕಾರದಿಂದ ಏನೋ ಒಂದು ದೊಡ್ಡಬಿರುದು ಬರಬಹುದೆಂದು ನಂಬಿಕೊಂಡು ಇದ್ದ ಆಸ್ತಿಯನ್ನೆಲ್ಲಾ ಮಾರಿ ಯಾವುದೋ ಒಂದು ಧರ್ಮದಫಂಡಿಗೆಂದು ಕೊಟ್ಟು ಬಿರುದು ಇಂದು ಬಂದೀತು, ನಾಳೆ ಬರಬಹುದು ಎಂದು ನಿತ್ಯ ಗಟ್ಲೆ ಟಪಾಲನ್ನು ನಿರೀಕ್ಷಿಸುತ್ತ ಎಷ್ಟೋ ತಿಂಗಳುಗಳನ್ನು ಕಳೆದನು. ಆದರೆ ಸರ್ಕಾರದವರು ನಿಜವಾದ ಯೋಗ್ಯತೆಯುಳ್ಳವರನ್ನು ಮಾತ್ರ ಮೆಚ್ಚುವರೆಂಬುದನ್ನು ತಿಳಿಯಲಾರದವನಾಗಿದ್ದನು. ಅಂತು ಅವನಿಗೆ ಯಾವಬಿರುದೂ ಬರಲಿಲ್ಲ. ಹಣವು ತಲಪಿದುದಕ್ಕೆ ವಂದನಾ ಪತ್ರಿಕೆ ಬಂದಿತು. ಇಷ್ಟಕ್ಕೇ ತೃಪ್ತನಾಗದೆ ಅವನು ಪುನಃ—ನನ್ನ ಧರ್ಮವು ಪ್ರಭುಗಳ ಕಟಾಕ್ಷಕ್ಕೆ ಪಾತ್ರವಾದಂತಿಲ್ಲವೆಂದು ಅರಿಕೆಮಾಡಿಕೊಂಡನು. ಆಗ ಮತ್ತೆ ಸರ್ಕಾರದವರು—ಈ ವಿಷಯವಾಗಿ ಹಿಂದೆಯೇ ನಿಮಗೆ ವಂದನಾ ಪತ್ರಿಕೆಯನ್ನು ಕಳುಹಿಸಿದ್ದೇವೆ ಅದು ತಲಪದಿದ್ದಲ್ಲಿ ಪುನಃ ನಿಮ್ಮನ್ನು ವಂದಿಸುತ್ತೇವೆ ಎಂದು ಉತ್ತರವನ್ನು ಕೊಟ್ಟರಂತೆ! ಇಂಥ ಪೆಚ್ಚುತನಕ್ಕೆ ಗುರಿಯಾದ ದುಂದುಗಾರನ ಪಾಡನ್ನು ಏನೆಂದು ಹೇಳೋಣ! ಅಯ್ಯೋ ಪಾಪ! ತಿನ್ನುವುದಕ್ಕೆ ಕೂಡ ಗತಿಯಿಲ್ಲದಂತಾಯಿತು. ಇನ್ನೊಬ್ಬ ಮರುಳನು ಮನೆಯಲ್ಲಿ ಶ್ರೀಗಂಧದ ಎಣ್ಣೆಯನ್ನುರಿಸಿ ನಿರ್ಗತಿಕನಾದನಂತೆ! ಮತ್ತೊಬ್ಬ ಉದಾರಿಯು ತಮ್ಮ ಶ್ರೀಮನ್ಮಹಾರಾಣಿಯವರಿಗೆ ಕಾಫಿ ಟೀ ಗಳನ್ನು ಕಾಯಿಸುವುದಕ್ಕೋಸ್ಕರ ಲಕ್ಷಾಂತರ ರೂಪಾಯಿಗಳ ಬೆಲೆಯ ನೋಟುಗಳನ್ನು ಒಲೆಗಿಟ್ಟು ಉರಿಸಿದನಂತೆ.

ಮಿತವ್ಯಯದಿಂದ ದ್ರವ್ಯವನ್ನು ಶೇಖರಿಸುವುದನ್ನು ಚಿಕ್ಕಂದಿನಿಂದಲೂ ಅಭ್ಯಾಸಮಾಡಿಸಬೇಕು. ಮಿತವ್ಯಯ ವಿಚಾರದಲ್ಲಿ ಪುರುಷರು ಮಾತ್ರ

ಗವುನ ಕೊಟ್ಟರೆ ಸಾಲದು ಮುಖ್ಯವಾಗಿ ಸ್ತ್ರೀಯರು ಮನೆಗೆ ತಂದ ವಸ್ತು ಗಳನ್ನು ಒಪ್ಪವಾಗಿ ಬಳಸುತ್ತ ಮಿತವಾಗಿರಬೇಕು. ಅನಾವಶ್ಯಕವಾಗಿ ಸೌದೆಯನ್ನು ಹೆಚ್ಚಾಗಿ ಉರಿಸುವುದು, ಅಜಾಗರೂಕತೆಯಿಂದ ದೀಪ ಗಳನ್ನು ದೊಡ್ಡವಾಗಿ ಉರಿಸಿ ಚಿಮ್ನಿಗಳನ್ನು ಹಾಳುಮಾಡುವುದು, ತಂದ ದಿನಸುಗಳನ್ನು ಸರಿಯಾಗಿ ಮುಚ್ಚಿಡದೆ ಇಲಿ ಹೆಗ್ಗಣಗಳ ಪಾಲುಮಾಡು ವುದು, ಹೆಚ್ಚಾಗಿ ಅಡಿಗೆಯನ್ನು ಮಾಡಿ ಮಿಗಿಸಿ ವ್ಯರ್ಥಪಡಿಸುವುದು, ಇಂಥ ಕೆಟ್ಟ ಚಾಳಗಳಿಗೆ ಅವಕಾಶ ಕೊಡದಂತೆ ನಡೆಯಬೇಕು. ಉಡುಪುಗಳು ಸ್ವಲ್ಪ ಹರಿದರೂ ಮನೆಬಾಗಿಲುಗಳು ಸ್ವಲ್ಪ ಕೆಟ್ಟರೂ ಆಗಾಗಲೇ ಸರಿ ಮಾಡಿಕೊಳ್ಳುತ್ತ ಮುಂದೆ ಹೆಚ್ಚಿನ ನಷ್ಟಕ್ಕೆ ಅವಕಾಶವಿಲ್ಲದಂತೆ ನೋಡಿ ಕೊಳ್ಳಬೇಕು.

ಒಟ್ಟು ನೋಡಿದರೆ ಈ ಮುಂದೆ ಹೇಳುವ ಅಂಶಗಳನ್ನು ಗ್ರಹಿಸಿ ಆಚರಣೆಗೆ ತರಬೇಕಾದುದು ಪ್ರತಿಯೊಬ್ಬರಿಗೂ ಆವಶ್ಯಕವಾದ ಕರ್ತವ್ಯ ವಾಗಿದೆ ಖರ್ಚು ವೆಚ್ಚಗಳ ವಿಷಯದಲ್ಲಿ ಲೆಕ್ಕಪತ್ರಗಳನ್ನು ಕ್ರಮ ವಾಗಿಟ್ಟುಕೊಂಡು ಪದೇ ಪದೇ ನೋಡುತ್ತಿರುವುದು. ಆದಾಯಕ್ಕೆ ತಕ್ಕಷ್ಟು ಮಾತ್ರ ವೆಚ್ಚಮಾಡುವುದು; ಏಕೆಂದರೆ—ಒಬ್ಬರಿಗೆ ಆಗುವ ಸಂಪಾ ದನೆಯ ಮೇಲೆ ಆತನ ಆಸ್ತಿಯು ಇಷ್ಟೆಂದು ನಿರ್ಧರಿಸಲಾಗುವುದಿಲ್ಲ. ಅದನ್ನು ಆತನು ಯಾವರೀತಿಯಲ್ಲಿ ವಿನಿಯೋಗಿಸುವನು ಎಂಬುದರ ಮೇಲೆ ಅದು ನಿಷ್ಕರ್ಷೆಯಾಗಬೇಕು. ಸಾಧ್ಯವಾದ ಮಟ್ಟಿಗೂ ಸಾಲಮಾಡದಿರು ವುದು, ಪೋಸ್ಟಲ್ ಸೇವಿಂಗ್ಸ್‌ಬ್ಯಾಂಕ್, ಕೋ ಆಪರೇಟಿವ್ ಸೊಸೈಟಿ ಇಂಥವುಗಳಿಂದ ಪ್ರಯೋಜನಗಳನ್ನು ಪಡೆವುದು ಹೀಗೆ ಮಿತವ್ಯಯವನ್ನು ಆಚರಿಸುತ್ತಾ ಏಳಿಗೆ ಬರುವುದಕ್ಕೆ ಪ್ರತಿಯೊಬ್ಬರೂ ಪ್ರಯತ್ನಪಡಬೇಕು.

## (30). ಕಾಲವನ್ನು ಸದುಪಯೋಗಪಡಿಸಿಕೊಳ್ಳುವಿಕೆ.

ಭಗವತ್ಸೃಷ್ಟಿಗೆ ಒಳಪಟ್ಟಿರುವ ಪ್ರತಿಯೊಂದು ವಸ್ತುವೂ ಅದು ಪ್ರಾಣಿಯಾಗಿರಲಿ ಸಸ್ಯವಾಗಿರಲಿ ಅಥವಾ ಧಾತುವೇ ಆಗಿರಲಿ ಸರ್ವದಾ ಏನಾದರೊಂದು ಬಗೆಯ ಕೆಲಸವನ್ನು ಮಾಡುತ್ತಲೇ ಇರುವುದು. ಆದರೆ ಹೀಗೆ ಮಾಡತಕ್ಕ ಪ್ರತಿಯೊಂದು ಕೆಲಸಕ್ಕೂ ಒಂದು ವಿಧವಾದ ನಿಯಮ

ವುಂಟು. ಇವುಗಳೆಲ್ಲಾ ಆಯಾಕಾಲದಲ್ಲಿ ತಪ್ಪದೆ ನಡೆಯುವಂತೆ ಮೇಲ್ವಿಚಾರಣೆ ಮಾಡಿಕೊಳ್ಳುತ್ತಿರುವುದು ಪ್ರಕೃತಿಯ ಕೆಲಸವು. ಪ್ರಕೃತಿಯನ್ನು ಮೀರಿನಡೆಯುವುದು ಯಾರಿಗೂ ಸಾಧ್ಯವಿಲ್ಲ. ಮೇಲೆ ಕಂಡಂತೆ ನಿಯಮಕ್ಕೂ ಕ್ರಮಕ್ಕೂ ಅನುಸಾರವಾಗಿ ಪ್ರಪಂಚವು ನಡೆದುಕೊಳ್ಳಲಿ ಎಂಬ ಉದ್ದೇಶದಿಂದ ಪ್ರಕೃತಿಯು ಎಷ್ಟೋ ಬಗೆಯ ಸೌಕರ್ಯಗಳನ್ನು ಒದಗಿಸಿಕೊಟ್ಟಿದ್ದಾಳೆ. ಅವುಗಳಲ್ಲಿ ಕಾಲವು ಅತಿಮುಖ್ಯವಾದ ಒಂದು ಅಂಶವಾಗಿದೆ. ಆದುದರಿಂದಲೇ ಪ್ರತಿಯೊಂದಕ್ಕೂ ಕಾಲದ ತಿಳವಳಿಕೆಯು ಅತ್ಯಾವಶ್ಯಕವಾಗಿದೆ

ಬೆಳಗಾಯಿತೆಂದು ತಿಳಿದ ಹೊರತು ಹಕ್ಕಿಗಳು ಹೊರಕ್ಕೆ ಹೊರಡವು, ತಾವರೆಗಳು ಅರಳವು. ಜನಗಳು ಎಚ್ಚರಗೊಳ್ಳರು. ಹೀಗೆಯೇ ರಾತ್ರಿಯಾಯಿತೆಂದು ತಿಳಿದರೇನೆ ಹಗಲು ಕೆಲಸಮಾಡಿ ದಣಿದಿರುವುವುಗಳೆಲ್ಲಾ ವಿಶ್ರಾಂತಿಯನ್ನು ಪಡೆಯುವುವು. ಮತ್ತು ಹಗಲು ನಿದ್ರಿಸುತ್ತಿದ್ದ ಹುಲಿ ನರಿ ಗೂಬೆ ಮೊದಲಾದುವುಗಳೆಲ್ಲಾ ಸಂಚರಿಸತೊಡಗುವುವು. ಹೀಗೆ ಲೋಕದಲ್ಲಿರತಕ್ಕ ಸಮಸ್ತ ಚರಾಚರವಸ್ತುಗಳಿಗೂ ಕಾಲವನ್ನು ತಿಳಿಯಿಸುವುದಕ್ಕೋಸ್ಕರ ಅಂತರಿಕ್ಷದಲ್ಲಿ ತೇಜೋಮಯವಾದ ಒಂದು ದೊಡ್ಡ ಗೋಳವನ್ನು ತೇಲಬಿಟ್ಟು ಸೂರ್ಯನೆಂದು ಹೆಸರಿಟ್ಟು ಅವನಿಂದ ಕಾಲವನ್ನು ತಿಳಿಯಿಸುವುದು ಮಾತ್ರವಲ್ಲದೆ ಶಾಖ, ವೃಷ್ಟಿ ಮೊದಲಾದ ಇತರ ಸಹಾಯಗಳನ್ನು ಒದಗಿಸಿ ಲೋಕವು ಸರ್ವದಾ ಊರ್ಜಿತ ಸ್ಥಿತಿಯಲ್ಲಿರುವಂತೆ ಮಾಡುವುದು ಮಹಾನುಭಾವನಾದ ಜಗದೀಶ್ವರನ ಮಹಾಮಹಿಮೆಯಾಗಿದೆ. ಕಾಲಪರ್ಯಾಯಗಳನ್ನು ತಿಳಿಯಿಸುವುದಕ್ಕೋಸ್ಕರ ವಸಂತ ಋತು, ವರ್ಷಋತು, ಹೇಮಂತಋತು ಮೊದಲಾದ ಭೇದಗಳನ್ನು ಕಲ್ಪಿಸಿ ಅವು ಬಂದಾಗುತ್ತ ಮತ್ತೊಂದರಂತೆ ಪುನಃಪುನಃ ಬರುತ್ತ ಚಕ್ರದಂತೆ ಆವೃತ್ತಿಯಾಗುವ ಹಾಗೆ ಮಾಡಿರುವುದೂ ಅದೇಸ್ವಾಮಿಯ ಕೆಲಸವೇ. ಹೀಗಿಲ್ಲದೆ ಸದಾ ಮಳೆಗಾಲ, ಸದಾ ರಾತ್ರಿ, ಅಥವಾ ಸದಾ ಚಳಿ ಹೀಗೆ ಕಾಲವನ್ನು ಒಂದೇ ರೀತಿಯಲ್ಲಿಟ್ಟಿದ್ದರೆ ಎಲ್ಲರಿಗೂ ಲೋಕದಲ್ಲಿ ಜುಗುಪ್ಸೆಯೂ ಬದುಕುವುದೆಂದರೆ ಬೇಸರವೂ ಉಂಟಾಗಿ ಪ್ರಪಂಚವೇ ಹಾಳಾಗುತ್ತಿದ್ದಿತು. ಆದರೆ ಹಾಗೆ ನಾಶಪಡಿಸತಕ್ಕದ್ದು ಭಗವಂತನ ಸಂಕಲ್ಪ

ವಲ್ಲ. ಪರಿಪುಷ್ಟವಾದ ಅನುಕೂಲ್ಯಗಳನ್ನು ಕಲ್ಪಿಸಿ, ಅವನ್ನು ಪಯೋಗಿಸಿ ಕೊಳ್ಳುವ ಶಕ್ತಿಯನ್ನು ದಯೆಪಾಲಿಸಿ ಸರ್ವರಿಗೂ ಬದುಕುವುದೆಂದರೆ ಸಂತೋಷವೂ ಈ ಲೋಕವನ್ನು ಬಿಟ್ಟು ತೊಲಗಿಸುವ ಮರಣವೆಂದರೆ ಭೀತಿಯೂ ಉಂಟಾಗುವಷ್ಟು ಮಟ್ಟಿಗೂ ಇಲ್ಲಿ ಅಸಂದಕರವಾದ ವಿಷಯ ಗಳನ್ನು ಕೊಟ್ಟಿದ್ದಾನೆ. ಹಿಂದೆ ಹೇಳಿದಂತೆ ಸಕಲ ಚರಾಚರವಸ್ತುಗಳೂ ಕಾಲನಿಯಮಕ್ಕೆ ಬದ್ಧವಾಗಿವೆಯಷ್ಟೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಜನನ ಮರಣಗಳುಂಟು, ಕಾಲನಿಯಮವಿಲ್ಲದಿದ್ದರೆ ಇವು ನಡೆಯುವ ಬಗೆ ಹೇಗೆ? ಆದುದರಿಂದ ಪ್ರಪಂಚದ ಸ್ಥಿತಿಗೆ ಕಾಲವೇ ಮುಖ್ಯಕಾರಣ ವೆಂದಾಯಿತು.

ಯಾವಯಾವಾಗ ಏನೇನು ಆಗಬೇಕೋ ಆಗಾಗ ಆಯಾ ಕೆಲಸಗಳನ್ನು ನಡೆಯಿಸತಕ್ಕದ್ದು ಪ್ರಕೃತಿಯ ಕೆಲಸವೆಂದು ಮೊದಲೇ ಹೇಳಿದೆಯಷ್ಟೆ. ಮನುಷ್ಯನೂ ಪ್ರಕೃತಿಗೆ ಅಧೀನನೇ ಆಗಿದ್ದರೂ ಇನ್ನಾವುದಕ್ಕೂ ಇಲ್ಲ ದಂಥ ಅಸಾಧಾರಣವಾದ ಬುದ್ಧಿಬಲವೊಂದನ್ನು ಪಡೆದಿರುವುದರಿಂದ ಕೆಲವು ವಿಷಯಗಳಲ್ಲಾದರೂ ಇವನು ಸ್ವತಂತ್ರನಾಗಿ ಪ್ರವರ್ತಿಸಬಲ್ಲನು, ಆದು ದರಿಂದ ಕಾಲದ ವಿಷಯವಾಗಿ ಈತನು ತಿಳಿದು ನಡೆಯಬೇಕಾದ ಸಂಗತಿ ಗಳು ಎಷ್ಟೋ ಇರುವುವು. ಕಾಲವೇ ನಮ್ಮ ಜೀವಮಾನವು. ಮನುಷ್ಯ ನಿಗೆ ಒಂದುನೂರು ವರ್ಷ ಆಯುಸ್ಸೆಂದು ನಮ್ಮ ಪೂರ್ವಿಕರು ಹೇಳುತ್ತಿ ದ್ದರು. ಆದರೆ ಈಗಿನ ಸ್ಥಿತಿಯನ್ನು ನೋಡಿದರೆ ನಮ್ಮ ದೇಶದಲ್ಲಿ ಅರು ವತ್ತು ವರ್ಷಗಳಿಗೆ ಮೀರಿ ಬದುಕತಕ್ಕವರ ಸಂಖ್ಯೆಯು ಹೆಚ್ಚಾಗಿಲ್ಲ. ಮತ್ತು ನಿದ್ರೆಯಲ್ಲಿ ಸುಮಾರು ಮೂರನೆಯ ಒಂದು ಭಾಗ ಆಹಾರಾದಿಗ ಳನ್ನು ತೆಗೆದುಕೊಳ್ಳುವುದರಲ್ಲಿ ಕೆಲವು ಕಾಲ, ಪ್ರಯಾಣದಲ್ಲಿ ಎಷ್ಟೋ ಕಾಲ, ವಿನೋದಗಳಲ್ಲಿ ಸ್ವಲ್ಪಕಾಲ, ಮತಕ್ಕೂ ಸಮಾಜಕ್ಕೂ ಸಂಬಂಧ ಪಟ್ಟ ಕೆಲಸಗಳಲ್ಲಿ ಸ್ವಲ್ಪಭಾಗ, ನಮ್ಮ ಸಂಬಂಧಿಗಳ ರೋಗಮರಣಾದಿಗ ಳಲ್ಲಿ ಸ್ವಲ್ಪಭಾಗ, ನಮಗೆ ಸಂಭವಿಸಬಹುದಾದ ವ್ಯಾಧಿಗಳಲ್ಲಿ ಕೆಲವು ಕಾಲ, ಹೀಗೆ ಎಷ್ಟೋ ಕಾಲವು ಕಳೆದುಹೋದರೆ ನಿಜವಾಗಿ ನಮಗೆ ಕೆಲಸ ಮಾಡಲಿಕ್ಕೆ ದೊರೆಯುವ ಕಾಲವು ೧೫--೨೦ ವರ್ಷಗಳಿಗಿಂತ ಹೆಚ್ಚಾಗಿರ ಲಾರದು. ಈ ವಿಧವಾದ ಲೆಕ್ಕಾಚಾರವನ್ನು ಸರಿಯಾಗಿ ಅರಿತವರು ಎಂ

ದಿಗೂ ವೃಥಾ ಕಾಲಹರಣ ಮಾಡಲಾರರು. ಇದರಿಂದಲೇ ಕಾಲವನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬುದು ವ್ಯಕ್ತಪಡುವುದು. ಮನುಷ್ಯನಿಗೆ ಕೆಲಸ ಮಾಡುವುದಕ್ಕೆ ದೊರೆಯುವ ಕಾಲವು ಸ್ವಲ್ಪವೇ ಆದರೂ ಅದನ್ನು ಸರಿಯಾಗಿ ವಿನಿಯೋಗಿಸಿಕೊಳ್ಳುವುದರಿಂದ ಅದರ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಬಹುದು. ಹೇಗೆಂದರೆ— ನೂರು ವರ್ಷಗಳ ಪೂರ್ಣಾಯುವೂ ಬದುಕಿ ಸೋಮಾರಿಯಾಗಿದ್ದು ಗತಿಸಿಹೋದ ಮನುಷ್ಯನಿಗಿಂತಲೂ ಸ್ವಶಕ್ತಿಯಿಂದ ಸತ್ಕಾರ್ಯಗಳನ್ನು ಮಾಡಿ ಸುಪ್ರಸಿದ್ಧನಾಗಿದ್ದು ಐವತ್ತು ವರ್ಷಗಳಗೇ ಪರಲೋಕಕ್ಕೆ ತೆರಳಿದ ಮನುಷ್ಯನೇ ಉತ್ತಮನು. ಆತನ ಜೀವಿತ ಕಾಲವು ತುಂಬಾ ಶ್ರೇಷ್ಠವಾದುದು. ಹೇಗೆಂದರೆ— ಆತನು ಬೇಗ ಸ್ವರ್ಗಸ್ಥನಾದರೂ ಆತನು ಮಾಡಿದ ಸತ್ಕಾರ್ಯಗಳ ಮಹಿಮೆಯು ಇನ್ನು ಮುಂದಕ್ಕೂ ಬಹುಕಾಲದವರೆಗೂ ಊರ್ಜಿತವಾಗಿರುವುದು. ಆದುದರಿಂದಲೇ ಮನುಷ್ಯನ ಆಯುಷ್ಕಾಲವನ್ನು ಬರೀ ವರ್ಷಗಳಿಂದ ಎಣಿಸಿ ಗೊತ್ತುಮಾಡುವುದಕ್ಕಿಂತಲೂ ಆತನು ಆ ಕಾಲವನ್ನುಪಯೋಗಿಸಿಕೊಂಡು ನಡೆಯಿಸಿದ ಕಾರ್ಯಗಳಿಂದ ಪರಿಗಣಿಸತಕ್ಕದು ಯುಕ್ತವಾದುದೆಂದು ಪ್ರಾಜ್ಞರು ಹೇಳುವರು. ಹೀಗೆ ಕಾಲವೇ ನಮ್ಮ ಜೀವಮಾನವಾಗಿರುವಲ್ಲಿ ಅದನ್ನು ನಿರುದ್ಯೋಗದಿಂದ ವ್ಯರ್ಥವಾಗಿ ಕಳೆಯುತಕ್ಕದು ಒಂದು ಬಗೆಯ ಆತ್ಮಹತ್ಯವೇ ಆಗುವುದು. ಮನುಷ್ಯನ ಆಯುಷ್ಕಾಲವೆಲ್ಲಾ ಮುಖ್ಯವಾದುದೇ ಸರಿ. ಆದರಲ್ಲಿಯೂ ಬಾಲ್ಯಯೌವ್ವನಗಳು ಮುಖ್ಯತಃ ಜ್ಞಾನವನ್ನು ಆರ್ಜಿಸುವುದಕ್ಕೆ ಮೊದಲನೆಯದೂ, ಅದನ್ನುಪಯೋಗಿಸಿಕೊಂಡು ದ್ರವ್ಯ ಮೊದಲಾದುವುಗಳ ಸಂಪಾದನೆ, ಪರೋಪಕಾರ ಮಾಡುವುದು ಇತ್ಯಾದಿಗಳಿಗೆ ಎರಡನೆಯದೂ ಉತ್ತಮವಾದ ಕಾಲಗಳು. ಬಾಲ್ಯದಲ್ಲಿ ಸಂಪಾದಿಸಿದ ಜ್ಞಾನವು ಬಡ್ಡಿಗೆ ಹಾಕಿದ ಹಣದಂತೆ ಮುಂದಕ್ಕೆ ಸರ್ವದಾ ತನ್ನ ಫಲವನ್ನು ಕೊಡುತ್ತಲೇ ಇರುವುದು. ಇಷ್ಟು ಬೆಲೆಯಾದ ಕಾಲವನ್ನು ನಾವು ಉದಾಸೀನಮಾಡಿದರೆ ಮುಂದೆ ಎಂದೆಂದಿಗೂ ಪುನಃ ಅದು ನಮಗೆ ದೊರೆಯಲಾರದು. ನಾವು ಮೂವತ್ತೈದಕ್ಕೆ ಮೇಲ್ಪಟ್ಟು ವಯಸ್ಕರಾಗುತ್ತ ಬಂದಂತೆಲ್ಲಾ ನಮ್ಮ ದೇಹಬುದ್ಧಿಶಕ್ತಿಗಳು ದಿನೇದಿನೇ ಸ್ವಲ್ಪವಾಗಿ ಕುಂದುತ್ತ ಬರುವುವು. ಆದುದರಿಂದ ಕಾಲವನ್ನು ಸರಿಯಾಗಿ ಉಪ

ಯೋಗಿಸಿಕೊಂಡು ಕೆಲಸ ಮಾಡುತ್ತ ಬಂದರೆ ನಾವು ಸಕಲ ವಿಷಯಗಳಲ್ಲಿಯೂ ಏಳಿಗೆಯನ್ನು ಪಡೆಯಬಹುದಲ್ಲದೆ ಇತರರಿಗೂ ಸಹಾಯ ಮಾಡಬಹುದು.

ಕಾಲವೇ ದ್ರವ್ಯವು—ಹಣವನ್ನು ಕೊಟ್ಟರೆ ಎಂಥ ಪದಾರ್ಥಗಳನ್ನಾದರೂ ಪಡೆಯಬಹುದು ಎಂಥ ಕೆಲಸಗಳನ್ನಾದರೂ ಮಾಡಿಸಬಹುದು. ವಿದ್ವಾಂಸರಿಗೆ ಸಹಾಯ ಮಾಡಿ ತನ್ಮೂಲಕವಾಗಿ ಜ್ಞಾನವನ್ನು ಗಳಿಸಿಕೊಳ್ಳಬಹುದು. 'ದುಡ್ಡಿಗಿಂತ ದೊಡ್ಡದೇವರಿಲ್ಲ' ಎಂಬ ಗಾದೆಯಂತೆ ಈ ಪ್ರಪಂಚದಲ್ಲಿ ದ್ರವ್ಯಕ್ಕಿಂತಲೂ ಮುಖ್ಯವಾದದು ಮತ್ತೊಂದೂ ಇಲ್ಲವಷ್ಟೆ. ಅಂಥ ದ್ರವ್ಯವನ್ನು ಸಂಪಾದಿಸಿಕೊಳ್ಳಬೇಕಾದರೆ ಕಾಲವನ್ನು ಸರಿಯಾಗಿ ವಿನಿಯೋಗಿಸಿಕೊಳ್ಳಬೇಕು. ಎಂದರೆ ಸುಖಭೋಗಾದಿಗಳಿಗೆ ದ್ರವ್ಯಾರ್ಜನೆಯೂ ದ್ರವ್ಯಾರ್ಜನೆಗೆ ಸಕಾಲದಲ್ಲಿ ಕೆಲಸ ಮಾಡುವುದೂ ಕಾರಣವೆಂದಾಯಿತು. ಆದುದರಿಂದ ಕಾಲವನ್ನೇ ದ್ರವ್ಯವೆಂದೂ ಅಥವಾ ಅದಕ್ಕಿಂತಲೂ ಹೆಚ್ಚಿನದೆಂದು ಹೇಳಿದರೂ ಬಾಧಕವಾಗದು. ಹೇಗೆಂದರೆ—ಚಿನ್ನ, ಬೆಳ್ಳಿ, ಮುತ್ತು, ರತ್ನ, ಮೊದಲಾದುವುಗಳಿಂದ ಆದ ನಗನಾಣ್ಯಗಳ ಅಥವಾ ಮತ್ತೆ ಯಾವುದಾದರೊಂದು ರೂಪದಲ್ಲಿರುವ ದ್ರವ್ಯವನ್ನು ಒಂದುವೇಳೆ ಕಳೆದುಕೊಂಡರೂ ಪುನಃ ಶ್ರಮಪಟ್ಟಾದರೂ ಅದನ್ನು ಸಂಪಾದಿಸಿಕೊಳ್ಳುವುದು ಸಾಧ್ಯವು. ಆದರೆ ಕಳೆದು ಹೋದ ಕಾಲದಲ್ಲಿ ಒಂದು ಕ್ಷಣವನ್ನಾದರೂ ಹಿಂದಕ್ಕೆ ಪಡೆಯಬೇಕೆಂದು ಕೋಟ್ಯಂತರ ದ್ರವ್ಯವನ್ನು ವೆಚ್ಚ ಮಾಡಿದರೂ ಅಥವಾ ಯಾರು ಎಷ್ಟು ವಿಧದಲ್ಲಿ ಕಷ್ಟಪಟ್ಟರೂ ಎಂದೆಂದಿಗೂ ಸಾಧ್ಯವಾಗಲಾರದು. ದೇವರು ನಮಗೆ ಇಷ್ಟು ವರ್ಷಗಳ ಆಯುಸ್ಸೆಂದು, ನಾವು ಹುಟ್ಟುವಾಗಲೇ ಗೊತ್ತುಮಾಡಿರುವನು. ನಾವು ಹುಟ್ಟಿದಂದು ಮೊದಲು ಆ ಆಯುಸ್ಸಿನಲ್ಲಿ ಸರ್ವದಾ ಸ್ವಲ್ಪಸ್ವಲ್ಪವಾಗಿ ವ್ಯಯವಾಗುತ್ತಲೇ ಬಂದು ಎಲ್ಲವೂ ಮುಗಿದುಹೋದರೆ ಕೊನೆಗೆ ಮರಣವುಂಟಾಗುವುದು. ಆದುದರಿಂದ ನಮ್ಮ ಬಾಲ್ಯಯೌವ್ವನಗಳಲ್ಲಿ, ನಮ್ಮ ದೇಹಬುದ್ಧಿಶಕ್ತಿಗಳು ಚೆನ್ನಾಗಿ ಬೆಳೆಯುತ್ತಿರುವಾಗ ಕೂಡ ನಮ್ಮ ಆಯುಸ್ಸೇನೋ ಕ್ಷೀಣಿಸುತ್ತಲೇ ಇರುವುದೆಂದಾಯಿತು

ಯಾರು ಯಾವುದೊಂದು ಕೆಲಸವನ್ನು ಮಾಡಬೇಕಾದ ಒಂದು ಕ್ಲುಪ್ತವಾದ ಕಾಲವನ್ನು ಗೊತ್ತುಮಾಡಿಕೊಂಡಿರುವುದುತ್ತಮ. ಈ ವಿಷಯದಲ್ಲಿ ನಮಗೆಲ್ಲಾ ಪ್ರಕೃತಿಯೇ ಮೇಲ್ಪಂಕ್ತಿಯಾಗಿದೆ. ಋತುಧರ್ಮಗಳೂ ವಯೋಧರ್ಮಗಳೂ ಮಳೆಬೆಳೆಗಳೂ ಇದಕ್ಕೆ ಒಳ್ಳೆಯ ದೃಷ್ಟಾಂತವಾಗಿವೆ. ಕ್ಲುಪ್ತವಾದ ಕಾಲಗಳಲ್ಲಿ ಆಯಾ ಕೆಲಸಗಳನ್ನು ಮಾಡದೆ ಹೋಗುವುದರಿಂದಲೂ, ಕೊಂಚ ತಡವಾದರೇನು ಬಾಧಕ? ಎಂಬ ಅಭಿಪ್ರಾಯಪಡುವಂಥ ತಾಮಸ ಸ್ವಭಾವವನ್ನು ಪಡೆದಿರುವುದರಿಂದಲೂ ಯಾವುದನ್ನೂ ಸ್ವಲ್ಪಸ್ವಲ್ಪವಾಗಿ ಹಿಂದು ಹಿಂದಕ್ಕೆ ಒತ್ತರಿಸುತ್ತಲೂ ಕಾಲವನ್ನು ಮುಂದುಮುಂದಕ್ಕೆ ಹಾಕುತ್ತಲೂ ಬರುವುದರಿಂದಲೂ ಬಹಳ ಅಪಾಯಗಳೂ ನಷ್ಟಗಳೂ ಸಂಭವಿಸಿಯಾವು. ಪ್ಲೇಗು, ವಾಂತಿಭೇದಿ ಮೊದಲಾದ ವ್ಯಾಧಿಗಳು ತಗಲಿದ ಕೂಡಲೆ ಎಚ್ಚತ್ತು ಔಷಧವನ್ನು ತೆಗೆದುಕೊಳ್ಳದಿರುವುದು, ಮಕ್ಕಳಿಗೆ ಕೇವಲ ಬಾಲ್ಯದಲ್ಲಿ ಸಿಡುಬು ಹಾಕಿಸದೆ ಉದಾಸೀನ ಮಾಡುವುದು, ಮಳೆ ಬಂದು ನೆಲವು ಚೆನ್ನಾಗಿ ನೆನೆದಿದ್ದಾಗ ಉತ್ತು ಬಿತ್ತದೆ ಆಲಸ್ಯಮಾಡುವುದು, ಇಂಥವು ಇವಕ್ಕೆ ಉದಾಹರಣೆಗಳಾಗಿವೆ. ಕೆಲಸ ಮಾಡುವುದರಲ್ಲಿ ಒಂದು ಕಾಲನಿಯಮವನ್ನನುಸರಿಸಿ ನಡೆಯದಿದ್ದರೆ ನಮಗೆ ಮಾತ್ರವಲ್ಲದೆ ನಮ್ಮ ಕೆಲಸಗಳಿಗೆ ಸಂಬಂಧಪಟ್ಟ ಇತರರಿಗೂ ತುಂಬಾ ತೊಂದರೆಯಾಗುವುದು. "ನಾನು ಇಂಥ ಹೊತ್ತಿನಲ್ಲಿ ನಿನ್ನನ್ನು ಇಂಥ ಸ್ಥಳದಲ್ಲಿ ಕಾಣುವೆನು ನೀನು ಅಲ್ಲಿಗೆ ಬಂದಿರು" ಎಂಬಿಂಥ ಮಾತುಗಳನ್ನಾಡಿ ಇದಕ್ಕೆ ತಪ್ಪಿ ನಡೆಯುವ ಮನುಷ್ಯನಿಂದ ಇತರರಿಗೆ ಆಗುವ ಅನನುಕೂಲವೂ ಇವನ ವಿಷಯದಲ್ಲಿ ಅವರ ಮನಸ್ಸಿನಲ್ಲಿ ಹುಟ್ಟುವ ಬೇಸರ ಮತ್ತು ಅಗೌರವ ಇವೂ ಬಲುಹೀನಾಯವಾದುವುಗಳು. ರೈಲಿನ ಪ್ರಯಾಣ, ಪಾಠಶಾಲೆಗೆ ಹೋಗುವುದು, ಉದ್ಯೋಗಸ್ಥರುಗಳು ಆಫೀಸುಗಳಿಗೆ ಹೋಗುವುದು, ಇಂಥವುಗಳಲ್ಲೆಲ್ಲಾ ಹೊತ್ತು ಮೀರಿ ನಡೆಯುವುದರಿಂದ ಆಗುವ ನಷ್ಟಗಳು ಎಲ್ಲರಿಗೂ ಗೊತ್ತೇ ಇವೆ "ಇಂದು ಮಾಡುವುದನ್ನು ನಾಳೆಗಿಡಬೇಡ, ನಾಳೆಯೆಂದವನಿಗೆ ನಾಶ" ಎಂದು ಲೋಕೋಕ್ತಿಗಳು ಘಂಟಾಘೋಷವಾಗಿ ಹೇಳುತ್ತಿರುವುವು. ಯಾಚಕನಾಗಿ ಬಂದಿದ್ದ ಬ್ರಾಹ್ಮಣನಿಗೆ ಸುವರ್ಣಪಾತ್ರೆಯನ್ನು ಎಡಗೈಯಿಂದಲೇ ದಾನಮಾಡಲೆಳಸಿದ

ಕರ್ಣನ ಮೋಕ್ಷಪ್ರಾಪ್ತಿಯೂ ಅನುಭವಾಮೃತಪ್ರಾಯವಾಗಿದೆ. ಈ ಹೊತ್ತು ಮಾಡಬೇಕಾದುದನ್ನು ನಾಳೆ ಮಾಡೋಣವೆಂದು ಯೋಚಿಸಿದರೆ ನಾಳೆಯ ವೇಳೆಗೆ ನಮ್ಮ ಮನಸ್ಸೇ ಬದಲಾಯಿಸೀತು, ಅಥವಾ ಅನಿವಾರ್ಯಗಳಾದ ತೊಂದರೆಗಳೇ ಸಂಭವಿಸಿಯಾವು. ಅಂತು ಆ ಕಾರ್ಯವು ನಿಂತೇ ಹೋದೀತು.

ಕೆಲಸ ಮಾಡುವಾಗ ಕಾಲಹರಣ ಮಾಡುವುದು, ವಿಶ್ರಾಂತಿಯನ್ನು ಪಡೆಯಬೇಕಾದಾಗ ಅಥವಾ ಶಕ್ತಿಯಿಲ್ಲದಾಗ ನಿರ್ಬಂಧಕ್ಕಾಗಿ ಅಥವಾ ಹಠದಿಂದ ಕೆಲಸ ಮಾಡುವುದು ಇವೆಲ್ಲಾ ಕೆಟ್ಟಚಾಳಿಗಳು, ಹಗಲೆಲ್ಲಾ ನಿದ್ರೆಯಲ್ಲಿಯೂ ಹರಟೆಯಲ್ಲಿಯೂ ಕಾಲಕಳೆಯುತ್ತಿದ್ದು ರಾತ್ರಿಯೆಲ್ಲಾ ಜಾಗರಣೆ ಮಾಡುತ್ತ ಓದಿ ಕಣ್ಣಿಗೆ ಅಪಾಯವನ್ನುಂಟುಮಾಡಿಕೊಂಡು, ಸರ್ವದಾ ನರಳುತ್ತಿರುವ ಎಷ್ಟೋ ಜನ ವಿದ್ಯಾರ್ಥಿಗಳನ್ನು ನಾವು ನಿತ್ಯಗಟ್ಲೆ ನೋಡುತ್ತಿರುವುದರಿಂದಲೇ ಎಷ್ಟೋ ಮಟ್ಟಿಗೆ ಎಚ್ಚತ್ತುಕೊಳ್ಳಬಹುದಾಗಿದೆ. ಕೆಲಸವಿಲ್ಲದೆ ಸುಮ್ಮನೆ ಕುಳಿತಿರುವುದು ಸುಖವಾಗಿರುವುದೆಂದು ತಿಳಿಗೇಡಿಗಳನೇಕರು ದೃಢ ಮೂಲವಾದ ಅಭಿಪ್ರಾಯವನ್ನು ಪಡೆದಿರುವರು. ಆದರೆ ಒಂದೆರಡು ದಿನಗಳು ಹಾಗೆ ಸುಮ್ಮನಿದ್ದು ನೋಡಿದರೆ ಅದರ ಅಸಹ್ಯತೆಯು ಗೊತ್ತಾಗುವುದು. ಆಗ ತಡೆಯಲಾರದಷ್ಟು ಬೇಸರವುಂಟಾಗುವುದು

ಕಾಲವನ್ನು ಸ್ವಲ್ಪವೂ ವ್ಯರ್ಥವಾಗಿ ಕಳೆಯದೆ ಸದಾ ಕೆಲಸ ಮಾಡುತ್ತಿರಬೇಕೆಂದರೆ ಯಾವಾಗಲೂ ಒಂದೇ ಕೆಲಸವನ್ನು ಮಾಡುತ್ತಿರಬೇಕೆಂಬುದಲ್ಲ. ಹಾಗೆ ಸದಾ ಒಂದೇ ಕೆಲಸವನ್ನು ಮಾಡುತ್ತಿದ್ದರೆ ಬುದ್ಧಿಗೂ ದೇಹಕ್ಕೂ ಬೇಸರವಾಗಿ ಮಂಕುತನವೂ ಅನಾರೋಗ್ಯವೂ ಉಂಟಾಗುವುವು. ಆದುದರಿಂದ ಆಟಪಾಟಗಳು, ಮಕ್ಕಳನ್ನು ಮುದ್ದಿಸುವುದು, ಕಾದಂಬರಿಗಳನ್ನೂ ವರ್ತಮಾನಪತ್ರಿಕೆಗಳನ್ನೂ ಓದುವುದು, ಸಮಾನಸ್ಕಂಧರಾದ ಸನ್ಮಿತ್ರರೊಡನೆ ಸಲ್ಲಾಪಗಳು, ಇತರ ವಿಧವಾದ ವಿನೋದಗಳು ಇವುಗಳಿಗಾಗಿಯೂ ತಕ್ಕಮಟ್ಟಿಗೆ ಕಾಲವನ್ನುಪಯೋಗಿಸಿಕೊಳ್ಳುವುದೊಳ್ಳೆಯದು. ಮತ್ತು ಕೆಲಸಗಳನ್ನು ಪದೇ ಪದೇ ಬದಲಾಯಿಸಿಕೊಳ್ಳುತ್ತಲೂ ಇರಬೇಕು. ಇದರಿಂದ ಬುದ್ಧಿಗೂ ದೇಹಕ್ಕೂ ವಿಶ್ರಾಂತಿಯೂ ಮನಸ್ಸಿಗೆ ಹರ್ಷವೂ ಉಂಟಾಗುವುವಲ್ಲದೆ, ಚೆನ್ನಾಗಿ ಲೋಕಪರಿಜ್ಞಾನ

ವಾಗುವುದರಿಂದ ನಾಗರಿಕತೆಯೂ ಹೆಚ್ಚುವುದು. ಮತ್ತು ಇದರಿಂದ ಯಾವ ಕೆಡಕೂ ಇಲ್ಲ. ಕಾಲವನ್ನು ವ್ಯರ್ಥವಾಗಿ ಕಳೆಯದೆ ಸರಿಯಾಗಿ ಉಪಯೋಗಿಸಿಕೊಳ್ಳುವುದರಿಂದ ಒಳ್ಳೆಯ ನಡತೆಯು ನಮ್ಮಲ್ಲಿ ನೆಲೆಗೊಳ್ಳುವುದು. ಮನಸ್ಸೆಂಬ ಕಬ್ಬಿಣಕ್ಕೆ ಸೋಮಾರಿತನವೇ ತುಕ್ಕು ಎಂತಲೂ ಸೋಮಾರಿತನದಿಂದ ಕೂಡಿದ ಮನಸ್ಸು ಪಿಶಾಚದ ಕೆಲಸದ ಕಾರ್ಖಾನೆಯೆಂತಲೂ ತಿಳಿದವರು ಹೇಳುವರು. ಮಾಡುವುದಕ್ಕೆ ಯಾವಾಗ ಏನೂ ಕೆಲಸವಿರುವುದಿಲ್ಲವೋ ಆಗ ಮನಸ್ಸು ದುರ್ಮಾರ್ಗದಲ್ಲಿ ಪ್ರವರ್ತಿಸಿ ಇತರರಿಗೆ ಕೇಡನ್ನೆಣಿಸುವುದೆಂದೂ ಪರಿಣಾಮದಲ್ಲಿ ಇದರಿಂದ ಬಹಳ ಹಾನಿಯುಂಟೆಂದೂ ಪ್ರಾಜ್ಞರ ಅಭಿಪ್ರಾಯವಿರುವುದು. ಆದುದರಿಂದ ಎಲ್ಲರೂ ಉಚಿತವಾದ ಕೆಲಸಗಳನ್ನು ಸಕಾಲಗಳಲ್ಲಿ ಮಾಡುತ್ತಿರತಕ್ಕುದು ತುಂಬ ಶ್ರೇಯಸ್ಕರವಾದುದು.

## (31) ಜೀವಮಾನ.

ನಾವು ಹೇಗೆ ಬದುಕಬೇಕೆಂಬುದನ್ನು ತಿಳಿದುಕೊಳ್ಳಬೇಕಾದುದು ಬಹುಮುಖ್ಯ. ಬದುಕುವುದಕ್ಕಿಂತಲೂ ಪ್ರಿಯವಾದುದು ಈ ಲೋಕದಲ್ಲಿ ಇನ್ನಾವುದೂ ಇಲ್ಲ, ಆದರೂ ಅದನ್ನು ಉದಾಸೀನಮಾಡಿರುವಷ್ಟು ಮತ್ತಾವುದನ್ನೂ ಮಾಡಿಲ್ಲ. ಆಯುಸ್ಸು ಅಲ್ಪವಾದುದು. ಕಲಿಯಬೇಕಾದುದೋ ಬಹಳವಿದೆ. ಸಮಯಸಂದರ್ಭಗಳೂ ಅವಕಾಶಗಳೂ ಹಾರಿಹೋಗುತ್ತಿವೆ. ಸುಖಪಡಬೇಕೆಂಬ ಆಶೆಯೇನೋ ಎಲ್ಲರಿಗೂ ಇದ್ದೇ ಇದೆ. ಆದರೆ ಸುಖಕ್ಕೆ ಸನ್ನಿವೇಶಗಳೇ ಕಾರಣವೆಂದು ಕೆಲವರು ಹೇಳುವರು. ಇದು ಸರಿಯಲ್ಲ. ಕಷ್ಟಸುಖಗಳೂ ಕೆಡುವುದು ಬದುಕುವುದೂ ನಮ್ಮ ಕೈಯಲ್ಲೇ ಇವೆ. ಎಷ್ಟೋ ಜನರು ತಮ್ಮನ್ನು ತಾವೇ ಹಾಳುಮಾಡಿಕೊಂಡಿದ್ದಾರೆ. ಎಷ್ಟೋ ಪಟ್ಟಣಗಳೂ ಮನೆಗಳೂ ಭೂಕಂಪದಿಂದಲೂ ಗುಡುಗು ಸಿಡಿಲುಗಳಿಂದಲೂ ಹಾಳಾಗಿರುವುದಕ್ಕಿಂತ ಹೆಚ್ಚಾಗಿ ಮನುಷ್ಯನ ಕೈಯಿಂದಲೇ ನಾಶವಾಗಿವೆ. ಪ್ರತಿಯೊಂದರ ನಾಶಕ್ಕೂ ಎರಡು ಕಾರಣಗಳುಂಟು. ಒಂದನೆಯದು ಕಾಲ, ಎರಡನೆಯದು ಮನುಷ್ಯ, ಆದರೆ ಕಾಲದಿಂದ ಆಗುವ ನಾಶಕ್ಕಿಂತಲೂ ಮನುಷ್ಯನಿಂದ ಆಗುವ ನಾಶವು ಶೋಚನೀಯವಾದುದು. ಪ್ರಾಣಿಯು ವಾರ್ಧಕ್ಯದಲ್ಲಿ ತಾನಾಗಿ ಸಾಯುವುದಕ್ಕಿಂತಲೂ ಮನುಷ್ಯನ

ಕ್ಕೈಯು ಕತ್ತಿಯು ತಡಿತದಿಂದ ಸಾಯುವುದು ಶೋಚನೀಯವಲ್ಲವೆ? ದೇವರ ಸೃಷ್ಟಿಯಲ್ಲಿ ಕೆಟ್ಟದ್ದೆಂಬುದು ಯಾವುದೂ ಇಲ್ಲ. ಆದರೆ ಆತನು ನಮಗೆ ದಯೆಪಾಲಿಸಿರುವ ಸ್ವಾತಂತ್ರ್ಯವನ್ನು ದುರುಪಯೋಗಪಡಿಸಿಕೊಂಡು ಕೆಡಕನ್ನು ಮಾಡಿಕೊಳ್ಳುತ್ತೇವೆ. ಇದು ನಮ್ಮ ತಪ್ಪಾದುದರಿಂದ ನಾವೇ ಶಿಕ್ಷಾರ್ಹರು, ದೇವರನ್ನು ದೂಷಿಸಬಾರದು.

ಜನಗಳಲ್ಲಿ ನಾನಾ ಸ್ವಭಾವದವರಿರುವರು. ಅನೇಕರು ತಮ್ಮ ಹೆಚ್ಚು ಹೊತ್ತನ್ನೆಲ್ಲಾ ಇತರರಿಗೆ ತೊಂದರೆ ಮಾಡುವುದರಲ್ಲಿಯೇ ಕಳೆಯುವರು. ಇನ್ನು ಕೆಲವರು ಪ್ರಾಯದಲ್ಲಿ ರಕ್ತಮದದಿಂದ ದುಡುಕಿನಡೆದು ಸಾಯುವವರೆಗೂ ಇಡೆಗೆ ಸತ್ತಮೇಲೆಯೂ ಕೂಡ ಆದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುತ್ತಾರೆ. ತಪ್ಪಿಗೆ ಶಿಕ್ಷೆಯು ತಪ್ಪದು. ಸುಖವೆಂದು ಭ್ರಮಿಸಿ ಮಾಡಿದ ಅಕೃತ್ಯಗಳ ದುಷ್ಫಲಗಳನ್ನು ತಪ್ಪಿಸಿ ಕೊಳ್ಳಲಾಗುವುದಿಲ್ಲ. ಜನರು ತಾವು ಚೆನ್ನಾಗಿ ಬದುಕುವ ದಾರಿಯನ್ನೇ ಅರಿಯರು. ಸ್ವಾರ್ಥಪರತೆ, ಪರದೂಷಣೆ, ದುರಹಂಕಾರ, ದುಂದುಗಾರಿಕೆ, ಸಾಲ, ಮಿತಿಮೀರಿ ತಿನ್ನುವುದು, ಕುಡಿಯುವುದು, ಇಂಥವುಗಳಲ್ಲಿ ತೇಲಿ ಮುಳುಗುತ್ತಲಿರುವರು. ಇಂಥವರಿಗೆ ಸುಖವು ಎಲ್ಲಿಂದ ಬಂದೀತು? ಸುಖವಾಗಿರಬೇಕಾದರೆ ಏನು ಮಾಡಬೇಕೆಂಬುದನ್ನು ಇದರಿಂದಲೇ ಊಹಿಸಬಹುದು. ಸುಖಕ್ಕೆ ಪಾರವೇ ಇಲ್ಲವೆಂದು ಅತಿಯಾಗಿ ಆಶೆಪಡಬಾರದು. ಸದಾ ಸುಖವೇ ಇರುವುದು ಸರ್ವದಾ ಸುಖಪಡುವುದೆಂಬಂತೆಯೇ ಅಸಂಭವ. ಜೀವಮಾನವು ಹೂವಿನ ಹಾಸುಗೆಯಂತೆ ಸದಾ ಸುಖಕರವಲ್ಲ. ಅಥವಾ ರಣರಂಗದಂತೆ ಸದಾ ಪ್ರಾಣಗಂಡಗಳುಳ್ಳುದೂ ಅಲ್ಲ. ಹಗಲು, ರಾತ್ರಿ, ಬೆಳಕು, ನೆರಳು. ಇವುಗಳಂತೆ ಸುಖದುಃಖಗಳೂ ಪರಿವರ್ತನೆಯಿಂದ ವಿನಿಮಯವಾಗುತ್ತಲೇ ಇರುವುವು. ತಮಗೆ ದೊರೆಯಲಾರವೆಂದು ತಿಳಿದು ತಿಳಿದೂ ಅಂಥವಕ್ಕೆ ಆಶೆಪಡುತ್ತಲೂ ಏನು ಮಾಡಿದರೂ ತಪ್ಪಲಾರದಂಥ ಗಂಡಗಳಿಗಾಗಿ ಗೋಳಾಡುತ್ತಲೂ, ತಮಗೆ ತಿಳಿಯದ ಸಂಗತಿಗಳಲ್ಲಿ ಹರಟುತ್ತಲೂ ವೃಥಾ ಕಾಲವನ್ನು ಕಳೆಯುವುದು ತಿಳಿಗೇಡಿಗಳನೇಕರಲ್ಲಿ ಬಹಳ ರೂಢಿಯಾಗಿದೆ. ಅದೇ ಕಾಲವನ್ನು ಸರಿಯಾಗಿ ಉಪಯೋಗಿಸಿದರೆ ಎಷ್ಟೋ ಮೇಲಾದೀತು! ಯಾವುದಾದರೊಂದು ಒಳ್ಳೆಯದನ್ನೇ ಒಳ್ಳೆಯದಾರಿಯಲ್ಲಿ

ಉಪಯೋಗಿಸದಿದ್ದರೆ ಅದೇಕೆಟ್ಟುದಾಗುವುದು ಚಕ್ರವನ್ನು ಚಪ್ಪಟೆಯಾಗಿಟ್ಟರೆ ಉರುಳೀತೆ? ನಾವು ಲೋಕಕ್ಕೆ ಅನುಸಾರವಾಗಿಯೂ ನಡೆಯಬೇಕು. ಅದಿಲ್ಲದೆ ತನ್ನ ಇಷ್ಟವೇ ಲೋಕದ ಇಷ್ಟವೆಂದೂ ತನ್ನದಾರಿದ್ರ್ಯವೇ ಲೋಕದ ದಾರಿದ್ರ್ಯವೆಂದೂ ಭಾವಿಸಿ ನಡೆಯುವುದು ತಪ್ಪು. ಏಕೆಂದರೆ ಒಬ್ಬರಿಗೆ ಅಮೃತವಾಗುದು ಮತ್ತೊಬ್ಬರಿಗೆ ವಿಷವಾಗುವುದುಂಟು.

ನಿಜವಾಗಿನೋಡಿದರೆ ನಮಗೆ ನಾವೇ ಕೇಡುಕು ಮಾಡಿಕೊಳ್ಳುತ್ತೇವೆ ಇದಕ್ಕೆ ಎರಡು ಕಾರಣಗಳುಂಟು (೧) ತಿಳಿಗುತಿಳಿದೂ ತಪ್ಪು ಮಾಡುವುದು. (೨) ಅರಿಯದೆ ತಪ್ಪು ಮಾಡುವುದು. ಎರಡನೆಯದಕ್ಕೆ ಕ್ಷಮೆಯುಂಟು ಒಂದನೆಯದಕ್ಕೆ ಶಿಕ್ಷೆಯು ತಪ್ಪದು ಎರಡನೆಯದು ನಡೆಯದಿರಬೇಕಾದರೆ ಒಳ್ಳೆಯ ವಿದ್ಯಾಭ್ಯಾಸ, ತಾಯ್ತಂದೆಗಳ ಮತ್ತು ಗುರು ಹಿರಿಯರ ಶಿಕ್ಷೆ, ಸನ್ಮಿತ್ರರ ಸಲಹೆ ಮತ್ತು ಸ್ವಬುದ್ಧಿ ಇಷ್ಟೂ ಅವಶ್ಯಕ

ಪಾಠಶಾಲೆಯನ್ನು ಬಿಟ್ಟ ಮಾತ್ರಕ್ಕೇ ವಿದ್ಯಾಭ್ಯಾಸವು ಮುಗಿದಂತೆ ಆಗುವುದಿಲ್ಲ. ದೇಹಕ್ಕೆ ಗಮನ ಕೊಡುವಂತೆ ಬುದ್ಧಿಗೂ ಭೋಜನಕ್ಕೊಳಿಸುವಂತೆ ಸದ್ಗುಣಕ್ಕೆ ಹಾಯಿಸುತ್ತಬಂದರೆ ಎಷ್ಟು ಮೇಲು! ಹಲವರು ಅದೃಷ್ಟವನ್ನೇ ನಂಬಿದ್ದಾರೆ. ಆದರೆ ಅದು ನಮ್ಮ ಕೈಯಲ್ಲಿಯೇ ಇದೆ. ದೇವರು ಕೆಲಸಮಾಡುವವರಿಗೆ ಸತ್ಫಲಗಳನ್ನು ಕೊಡುವ ಮಹಾಪ್ರಭುವೇ ಹೊರತು ಸೋಮಾರಿಗಳ ಸ್ನೇಹಿತರಲ್ಲ. ಆದ್ದರಿಂದ ಸುಖದುಃಖಗಳೂ ನಮ್ಮಧೀನವೇ ನಾವು ಹೇಗಾಗಬೇಕೆಂದು ಕೆಲಸ ಮಾಡುವೆವೋ ಹಾಗೆಯೇ ಆಗಬಲ್ಲೆವು ಏಕೆಂದರೆ ಅದು ಅಂತರಾತ್ಮನ ಪ್ರೇರಣೆಯು ಜೀವಮಾನದಲ್ಲಿ ನಾವು ಸರ್ವೋತ್ತಮವಾಗಿ ಬಾಳಬೇಕೆಂಬ ಒಂದು ಉತ್ಕ್ರೇಶವಿರಬೇಕು.

ಆದರೆ "ನಮ್ಮ ಮಟ್ಟಿಗೆ ನಾವು" ಎಂದು ಸ್ವಾರ್ಥಪರರಾಗಬಾರದು. ಪ್ಲೇಟೋ ಅರಿಸ್ಟಾಟಿಲ್, ಬುದ್ಧ ಮೊದಲಾದ ತತ್ವಜ್ಞರು ಅಷ್ಟು ಶ್ರಮಪಟ್ಟುದಕ್ಕೂ ಪರೋಪಕಾರ ಬುದ್ಧಿಯೇ ಕಾರಣವು ಆದರೆ ಯಾವ ಆಸಕ್ತಿಯಿಂದ ಬಂದು ನಮ್ಮನ್ನು ಕೇಳುವರೋ ಅಂಥವರಿಗೆ ಸಹಾಯ ಮಾಡುವುದುಚಿತವು ತಮಗೆ ಸುಖವೇ ಇಲ್ಲವೆಂದು ಜನಗಳು ಗೋಳಾಡುವುದೇತಕ್ಕೆ? ಅದು ಹೊರಗಿನಿಂದ ಬರಬೇಕಾದುದಲ್ಲ. ಸುಖವೆಂಬು

ದು ಮನಸ್ಸಿನ ಒಂದು ಬಗೆಯ ಅವಸ್ಥೆಯು. ಅದನ್ನು ನಾವೇ ಮಾಡಿಕೊಳ್ಳಬಹುದು. ಹೊರಗಣ ಸನ್ನಿವೇಶಗಳಿಗನುಸಾರವಾಗಿ ಮನಸ್ಸನ್ನು ತಿದ್ದಿಕೊಂಡರಾಯಿತು. ಅದಿಲ್ಲದೆ ನಮ್ಮ ಮನಸ್ಸಿಗನುಸಾರವಾಗಿ ಹೊರಗಣ ಪ್ರಪಂಚವನ್ನೆಲ್ಲಾ ತಿದ್ದುವೆನೆಂಬುವನು ದಡ್ಡನು. ಮನಸಸ್ವಾಸ್ಥ್ಯದಿಂದ ತೃಪ್ತನಾದ ಬಬ್ಬ ಬಡ ಬಡವನು ಕೋಟೀಶ್ವರನಿಗಿಂತಲೂ ಮೇಲು ಏಕೆಂದರೆ:—ಧನಕ್ಕೂ ಸೌಖ್ಯಕ್ಕೂ ಸ್ನೇಹವಿಲ್ಲ. ಆದ್ದರಿಂದಲೇ ಬಡವನನ್ನು ದೇವರು ಕೈಬಿಟ್ಟಿಲ್ಲವೆನ್ನಬಹುದು ದೇಹ, ಬುದ್ಧಿ ಪ್ರಪಂಚ ಇತ್ಯಾದಿಗಳು ಅವರಿಗೇ ಬೇರೆಯಾಗಿಲ್ಲ. ಕೆಲವು ತೊಂದರೆಗಳೇನೋ ಉಂಟು ಅವನ್ನು ಧೈರ್ಯದಿಂದ ಇದಿರಿಸಿದರಾಯಿತು. ಕೆಲಸವನ್ನೇ ಮಾಡದಿರುವುದು ಸುಖವೆಂದು ಕೆಲವರೂ ಇಂದ್ರಿಯಗಳನ್ನು ತೃಪ್ತಿಪಡಿಸಿಕೊಳ್ಳುವುದು ಸುಖವೆಂದು ತಪ್ಪಾಗಿ ತಿಳಿದುಕೊಂಡಿದ್ದಾರೆ. ಇವೆರಡೂ ಕ್ಷಣಿಕ. ಮತ್ತು ಪರಿಣಾಮದಲ್ಲಿ ಅಪಾಯಕರ. ಮನಸ್ವಾಸ್ಥ್ಯವೇ ನಿಜವಾದ, ಕೆಡುಕಿಲ್ಲದ ಶಾಶ್ವತವಾದ ಸೌಖ್ಯವು. ಇದನ್ನು ಪಡೆಯಲು ಬುದ್ಧಿ, ಜ್ಞಾನ, ಸ್ಮೃತಿ, ವಿಚಾರಶಕ್ತಿ ಇವು ಸಾಧನಗಳು. ಈ ಸುಖಸಾಧನಗಳಿಗೆ ದೇಹವೇ ಮೂಲಾಧಾರ. ಈಗ ಹಲವರು ದೇಹವೊಂದನ್ನು ಮಾತ್ರ ದುಡಿಸುತ್ತಿರುವುದು ಅನ್ಯಾಯ. ನ್ಯಾಯವಾಗಿ ಪಡೆಯಬೇಕಾದ ಸುಖದಲ್ಲಿ ವೀಸಪಾಲನ್ನು ಕೂಡ ನಾವು ಪಡೆದಿಲ್ಲ. ಲೋಕದಲ್ಲಿ ಎಂಥೆಂಥ ಕೈಗಾರಿಕೆಗಳೂ, ಕುಶಲವಿದ್ಯೆಗಳೂ ಇವೆ! ಅವುಗಳ ಸ್ವರೂಪವಾದರೂ ನಮಗೆ ಚೆನ್ನಾಗಿ ಗೊತ್ತಿದೆಯೆ? ಈ ಭೂಮಿಯಲ್ಲಿ ಸ್ವಾಮಿಯು ಎಂಥೆಂಥ ವಿಚಿತ್ರವಸ್ತುಗಳನ್ನು ಸೃಷ್ಟಿಸಿದಾನೆ! ಒಂದು ತಿಲಾಂಶವನ್ನಾದರೂ ಚೆನ್ನಾಗಿ ತಿಳದಿದ್ದೇವೆಯೆ? ದಿವ್ಯತೇಜಃಪುಂಜರಂಜಿತವಾದ ನಕ್ಷತ್ರಗಳಿಂದಲೂ, ಗ್ರಹಮಂಡಲಗಳಿಂದಲೂ ಶೋಭಿಸುವ ಆಕಾಶವನ್ನು ಕತ್ತೆತ್ತಿಯಾದರೂ ನೋಡಿ ಚೆನ್ನಾಗಿ ಗ್ರಹಿಸುತ್ತಿರ-ವೆವೆ? ಇವನ್ನೆಲ್ಲಾ ತಿಳಿದರೆ ಇನ್ನೂ ಎಷ್ಟು ಸುಖಪಡಬಹುದು. ಇಂಥ ಅನ್ಯಾದೃಶಸುಖಕ್ಕೆಳಸದೆ ವ್ಯಥೆ, ತೊಂದರೆ, ಭಯ, ಸಂಶಯ ಕುತೂಹಲ ಇವುಗಳಿಂದ ಸದಾ ಚಿಂತಿಸುತ್ತ ಸುಮ್ಮನೆ ಹಲುಬುತ್ತಿದೇವೆ. ಅಲ್ಲದೆ ಯಾವುದಕ್ಕೂ ಅದೃಷ್ಟ ಅದೃಷ್ಟ ಎಂದು ಹೇಳುವೆವು. ಇವಕೆ

ಮನಸ್ಸುಕೊಡದೆ ಸದಾ ಒಳ್ಳೆಯತನದಲ್ಲೇ ಇದ್ದರೆ ದುಃಖಕ್ಕೆ ಅವಕಾಶ ವೆಲ್ಲಿಯದು ?

ಲೋಕವನ್ನು ಒಳ್ಳೆಯತನದಲ್ಲಿಟ್ಟಿರಬೇಕೆಂಬುದೇ ದೇವರ ಉದ್ದೇಶವು. ಮಕ್ಕಳನ್ನು ನೋಡಿದರೆ ಇದು ವ್ಯಕ್ತವಾಗುವುದು. ಅವರು ದಿನ ಕ್ರಮೇಣ ಕೆಡುತ್ತಿರುವುದು ನಮ್ಮಿಂದಲೇ ಮನುಷ್ಯನು ಕೂಪಕೂರ್ಮದಂತೆ ಇದ್ದಾನೆ ಇವನಿಗೇನು ಗೊತ್ತಿದೆ ? ಯಾವ ಒಂದು ವಸ್ತುವಿನ ವಿಷಯವನ್ನಾದರೂ ಸಂಪೂರ್ಣವಾಗಿ ತಿಳದಿದ್ದಾನೆಯೇ ? ಸಮುದ್ರತೀರದಲ್ಲಿ ಒಂದು ಕಪ್ಪೆಯ ಚಿಪ್ಪನ್ನು ಹಿಡಿದುಕೊಂಡು ಸಮುದ್ರದ ವಿಷಯವೆಲ್ಲಾ ಗೊತ್ತಾಯಿತೆಂದು ಮರುಳುತನದಿಂದ ಹಿಗ್ಗಿ ಕುಣಿದಾಡುವ ಮಗುವಿನಂತೆ ಇದ್ದಾನೆ. ಎಲ್ಲರೂ ಬೆಳಗ್ಗೆಯಿಂದ ರಾತ್ರಿಯವರೆಗೂ ದುಡಿಯುತ್ತೇವೆ. ಏನುಫಲ ? ಬುದ್ಧಿಯೇನೋ ಪೂರ್ಣವಾಗಿ ಬಳೆದಿಲ್ಲ. ನೀರಾವಿ, ವಿದ್ಯುಚ್ಛಕ್ತಿ, ವಿಮಾನ ಇತ್ಯಾದಿಗಳ ಸಂಗತಿ ಎಷ್ಟುಮಂದಿಗೆ ಗೊತ್ತಿದೆ ? ಹೀಗೆ ನಮಗೆ ತಿಳಯದಿರುವುದು ಎಷ್ಟುಕೋಟಿಯಿದೆಯೋ ? ಅಷ್ಟೇಕೆ ? ಮಹಾಧಾರ್ಮಿಕರೆಂದೂ ನಾಗರಿಕಶಿರೋಮಣಿಗಳೆಂದೂ ಖ್ಯಾತಿಗೊಂಡ ಜನಾಂಗಗಳು ಯುದ್ಧವೆಂಬ ಹೆಸರಿನಿಂದ ಪರಸ್ಪರವಾಗಿ ಕಡಿದಾಡುವುದನ್ನು ನೋಡಿದರೆ ಜನರು ಇನ್ನೂ ಕಾಡುಮೃಗದ ಅವಸ್ಥೆಯಲ್ಲೇ ಇರುವುದು ಗೊತ್ತಾಗುವುದು. ದುರ್ವ್ಯಾಪಾರಗಳನ್ನು ಶೌರ್ಯವೆಂದು ಹೇಳುವ ದುಷ್ಟರೂ ಉಂಟು. ಇವನ್ನು ಯಾವ ಕುಂತನಾದರೂ ಮಾಡಬಲ್ಲನು. ಆದರೆ ಕಳ್ಳನು ಕೂಲಿಗಿಂತಲೂ ಶೂರನಾದಾನೆ ? ಕತ್ತೆ ಕತ್ತೆಯೇ, ಕುದುರೆ ಕುದುರೆಯೇ. ಅವಿವೇಕಿಯ ಆಡಳತದಲ್ಲಿ ಸುಖಕ್ಕೂ ಶಾಂತಿಗೂ ಅವಕಾಶವೆಲ್ಲಿಯದು ?

ಡೆಕಾರ್ಟ್ ಎಂಬಾತನು ಮನುಷ್ಯನ ಮೇಲ್ಮೆಗೆ ನಾಲ್ಕುದಾರಿಗಳುಂಟೆನ್ನುವನು—(೧) ತನ್ನ ಮತಧರ್ಮಗಳಗೆ ಬದ್ಧನಾಗಿ ನಡೆಯುವುದು, (೨) ಸಮಯಸಂದರ್ಭಗಳಗೆ ಅನುಸಾರವಾಗಿ ನಡೆಯುವುದು, (೩) ಕಾಮ್ಯಗಳನ್ನು ಕಡಿಮೆಮಾಡಿಕೊಂಡು ಜೀವಿಸುವುದು, (೪) ಲೋಕದಲ್ಲಿ ನಿಜಸ್ಥಿತಿಯನ್ನು ಕಂಡುಹಿಡಿಯುತ್ತ ಯಾವುದಾದರೊಂದು ಸಾತ್ವಿಕವೃತ್ತಿಯಿಂದ ಜೀವಿಸುವುದು. ಲಿಲ್ಲಿ ಎಂಬ ಇನ್ನೊಬ್ಬಪಂಡಿತನು—ದನಗಳೊಡನೆ ಮಲಗುವುದು, ಹಕ್ಕಿಗಳೊಡನೆ ಏಳುವುದು, ಸಂತೋಷಶೀಲತೆ, ವಿನಯ, ಧೈರ್ಯ,

ಸದ್ಧಾಲೋಚನೆ, ತಾಳ್ಮೆ, ಒಳ್ಳೆಯ ಉಡುಪು, ಆರೋಗ್ಯಕರವಾದ ಆಹಾರ ಸೌಮ್ಯವಾದ ವಿನೋದ, ಇತರರಲ್ಲಿ ನಿಷ್ಕಾರಣವಾಗಿ ಸಂಶಯಪಡದಿರುವುದು, ರುಜುವಾತಿನಿಂದಲೇ ನಂಬುವುದು, ಕಂಡಕಂಡವರ ಮಾತನ್ನೆಲ್ಲಾ ಕೇಳದಿರುವುದು, ಹಠವಿಲ್ಲದಿರುವುದು, ದೇವರಲ್ಲಿ ಭಯಭಕ್ತಿಗಳು, ಇಷ್ಟರಿಂದ ಸುಖವನ್ನು ಪಡೆಯಬಹುದೆನ್ನುವನು. ತಿಳಗೇಡಿಗಳು ತಾವೂ ಕೆಟ್ಟು ಇತರರನ್ನೂ ಕೆಡಿಸಿ ದೇವರನ್ನು ವೃಥಾ ಬಯ್ಯುವರು. ದೈವಿಕವಾದ ಕೆಲವು ತೊಂದರೆಗಳೇನೋ ಸಂಭವಿಸುವುದುಂಟು ಮುಳ್ಳಿಲ್ಲದ ಗುಲಾಬಿಯುಂಟೆ? ಇಂಥ ಮುಳ್ಳುಗಿಡದಲ್ಲಿ ಒಳ್ಳೆಯ ಹೂ ದೊರೆಯುವುದು ನಮ್ಮ ಪುಣ್ಯವಲ್ಲವೆ?

ಕಷ್ಟಗಳೆಲ್ಲಾ ನಮಗೆ ಒಳ್ಳೆಯದನ್ನೇ ಮಾಡುವುವು. ಮೋಡಕವಿಯುವುದು ಮಳೆಗರೆಯುವುದಕ್ಕೇ ಅಲ್ಲವೆ? ಎಷ್ಟೋ ಜನರು ಲೋಕೋದ್ಧಾರಕ್ಕಾಗಿ ಬಾಲ್ಯದಲ್ಲೇ ತಾವಾಗಿ ಕಷ್ಟವನ್ನು ಕೈಗೊಂಡಿದ್ದಾರೆ. ಶಂಕರಾಚಾರ್ಯ, ಬುದ್ಧ ಮೊದಲಾದವರೇ ಇದಕ್ಕೆ ಉದಾಹರಣೆಗಳಾಗಿದ್ದಾರೆ.

ಪ್ರಪಂಚವು ಕನ್ನಡಿಯಂತಿದೆ. ಅತ್ತರೆ ಅಳುವುದು, ನಕ್ಕರೆ ನಗುವುದು, ಮತ್ತು ದೀಪದ ಬೆಳಕನ್ನು ಯಾವ ಗಾಜಿನಿಂದ ನೋಡಿದರೆ ಆ ಬಣ್ಣವಾಗಿ ಕಾಣುವಂತೆ ಹೇಗೆ ಭಾವಿಸಿಕೊಂಡರೆ ಹಾಗಾಗುವುದು. ಆದುದರಿಂದ ಸರ್ವತ್ರ ಗುಣಗ್ರಹಣಮಾಡುವುದು ಮೇಲು. ನಮಗೆ ಕೊಟ್ಟಿರುವ ಅನುಕೂಲ್ಯಕ್ಕಾಗಿ ದೇವರಲ್ಲಿ ಕೃತಜ್ಞರಾಗಿರಬೇಕು. ಭಗವದ್ಭಕ್ತರಿಗೆ ಇಹಪರಗಳೆರಡರಲ್ಲಿಯೂ ಸುಖವುಂಟು. ಯಾರೂ ಸುಖದುಃಖಗಳಲ್ಲಿ ಮಿತಿಮೀರಿದ ಹರ್ಷವಿಷಾದಗಳನ್ನು ಪಡೆಯಕೂಡದು. ಲೋಕದಲ್ಲಿ ಕೆಟ್ಟುದೇ ಮನೋಹರವಾಗಿಯೂ ಒಳ್ಳೆಯದು ಅಸಹ್ಯಕರವಾಗಿಯೂ ತೋರುವುದುಂಟು. ಆದರೆ ಪರಮಫಲವನ್ನು ನೋಡಬೇಕು. ಐಶ್ವರ್ಯ, ಅಧಿಕಾರ, ಸದ್ವಂಶ, ಇಂಥವು ದುರ್ಲಭವಾದರೂ ಒಳ್ಳೆಯವರಾಗಿರುವುದೇನೂ ಕಷ್ಟತರವಲ್ಲ.

ಈ ಪ್ರಪಂಚವೆಂಬ ನಾಟ್ಯರಂಗದಲ್ಲಿ ಸ್ವಾಮಿ ಭೃತ್ಯ, ಧನಿಕ ಬಡವ, ರಾಜ ಪ್ರಜೆ, ಇವರೆಲ್ಲಾ ವೇಷಧಾರಿಗಳಾದ ಪಾತ್ರಗಳು ಇವರು ಈ ಲೋಕವನ್ನು ಬಿಟ್ಟಮೇಲೆ ನಿಜಸ್ಥಿತಿಯು ಗೊತ್ತಾಗುವುದು. ಬಳಿಕ ಈ ಭೇದವ

ಳೇನೂ ಇರುವುದೇ ಇಲ್ಲ. ಆರಾರು ಏನೇನು ಮಾಡಿರುವರು ಎಂಬುದು ಮಾತ್ರ ಮುಖ್ಯವಾಗಿ ಗಮನಿಸಲ್ಪಡುವುದು. ಎಷ್ಟೆಷ್ಟು ಎಂಬುದು ಬೇಕಿಲ್ಲ. ಹೇಗೆ ಹೇಗೆ ಮತ್ತು ಯಾವ ಯಾವ ಉದ್ದೇಶದಿಂದ ಮಾಡಿರುವರೆಂಬುದು ಬೇಕಾಗುವುದು ಅದದಕ್ಕೆ ತಕ್ಕಂತೆಯೇ ಫಲವೂ ದೊರೆಯುವುದು.

## (32) ನ್ಯಾಯ.

ನ್ಯಾಯವೆಂಬುದು ಮನುಷ್ಯಕುಲದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿರುವ ಒಂದು ಒಳ್ಳೆಯ ನೀತಿಯಾಗಿದೆ ನ್ಯಾಯವಿಮರ್ಶೆಯು ನಾಗರಿಕತೆಯ ಜತೆಯಲ್ಲಿಯೇ ದಿನದಿನಕ್ಕೂ ಅಭಿವೃದ್ಧಿಯನ್ನು ಪಡೆಯುತ್ತಲಿರುವುದು. ನ್ಯಾಯಕ್ಕೆ ರಾಜನೇ ಮಾತೃಸ್ಥಾನ. ನ್ಯಾಯವು ಜನಗಳ ಯೋಗ್ಯತೆಯಲ್ಲಿ ತಾರತಮ್ಯವನ್ನರಿತು ತಕ್ಕಂತೆ ನಡೆಯುವುದು. ಯಾವ ಕಾರಣದಿಂದಲೂ ಒಂದು ಪಕ್ಷವನ್ನು ದ್ವೇಷಿಸದೆಯೂ ಮತ್ತೊಂದು ಪಕ್ಷವನ್ನು ಪ್ರೀತಿಸದೆಯೂ ನಿಷ್ಪಕ್ಷಪಾತವಾಗಿ ಪ್ರತಿಯೊಬ್ಬರಿಗೂ ಅವರವರಿಗೆ ಸಲ್ಲತಕ್ಕದನ್ನು ಸಲ್ಲಿಸುವುದು ನ್ಯಾಯವು.

ನ್ಯಾಯದಲ್ಲಿ ಘನತೆಯೂ ಔದಾರ್ಯವೂ ಸೇರಿವೆ. ಅನ್ಯಾಯವು ಅಮರ್ಯಾದೆಯನ್ನು ತರುವುದು. ನಮಗೆ ಹಗೆಯಾದವರಿಗೆ ಕೂಡ ಅವರಿಗೆ ಸಲ್ಲತಕ್ಕದನ್ನು ಸಲ್ಲಿಸುವುದೇ ಔದಾರ್ಯದಿಂದಲೂ ಪ್ರಾಮಾಣಿಕತೆಯಿಂದಲೂ ಕೂಡಿದ ಧರ್ಮವು. ಶತ್ರುತ್ವವಿರುವುದರಿಂದ ಅವರಿಗೆ ಕೇಡುಮಾಡಬೇಕೆಂದು ನಮ್ಮ ಮನಸ್ಸು ಪ್ರವರ್ತಿಸುವುದಾಗಿದ್ದರೂ ನ್ಯಾಯವು ಅದಕ್ಕೆ ಬುದ್ಧಿಯನ್ನು ಹೇಳಿ ತಿದ್ದುವುದು. ಲೋಕದಲ್ಲಿ ನ್ಯಾಯವನ್ನು ಸರ್ವರೂ ಶ್ಲಾಘಿಸುವರು. ಇಷ್ಟೇ ಅಲ್ಲದೆ ನ್ಯಾಯವನ್ನು ಹಲವುಬಗೆಯ ರೂಪಗಳಿಂದ ಶ್ಲಾಘಿಸುವುದೂ ಉಂಟು. ಅತ್ಯಂತ ಪ್ರಸಿದ್ಧರಾದ ರೋಮರು ನ್ಯಾಯವನ್ನು ಒಂದು ಸ್ತ್ರೀ ಪ್ರತಿಮೆಯ ರೂಪದಲ್ಲಿಟ್ಟುಕೊಂಡು ಆ ವಿಗ್ರಹದ ಒಂದು ಕೈಯಲ್ಲಿ ತ್ರಾಸನ್ನು ಕೊಟ್ಟಿರುವರು. ಇದರಿಂದ ನ್ಯಾಯದಲ್ಲಿ ಸಮತೆಯಿರಬೇಕೆಂಬುದು ವ್ಯಕ್ತಪಡುವುದು. ನ್ಯಾಯದ ಘನತೆಯನ್ನು ಸೂಚಿಸುವುದಕ್ಕೋಸ್ಕರ ಮತ್ತೊಂದು ಕೈಯಲ್ಲಿ ಒಂದು ಕತ್ತಿಯನ್ನು ಕೊಟ್ಟಿರುವರು. ಈಜಿಪ್ಟ್ ದೇಶದವರೂ ನ್ಯಾಯವನ್ನು ಮನುಷ್ಯಪ್ರತಿಮೆಯ ರೂಪದಲ್ಲಿ ಆರಾಧಿಸುತ್ತಿದ್ದರು. ಆದರೆ ಆ ರೂಪವು ಬಹಳ ವಿಚಿ

ತ್ರವಾದುದು. ಆ ಗೊಂಬೆಗೆ ಕೈಗಳೇ ಇಲ್ಲ. ಇದು ನ್ಯಾಯಧಿಪತಿಗಳು ಲಂಚವನ್ನು ತೆಗೆದುಕೊಳ್ಳಕೂಡದೆಂಬುದನ್ನು ತೋರಿಸುವುದು. ಆ ವಿಗ್ರಹಕ್ಕೆ ಕಣ್ಣೇ ಇಲ್ಲ ಇದು ನ್ಯಾಯಾಧಿಪತಿಗಳು ತಮ್ಮ ನ್ಯಾಯಾಸ್ಥಾನದಲ್ಲಿರುವಾಗ ಇವರು ತಮ್ಮವರು ಇವರು ಪರರು, ಇವರು ತಮ್ಮ ಹೆಂಡತಿ ಮಕ್ಕಳು, ಸಹೋದರರು ಅಥವಾ ಅನ್ಯರು ಇವನು ರಾಜ ಇವನು ಗುಲಾಮ, ಇವನು ಮಿತ್ರ ಇವನು ಶತ್ರು ಎಂಬುದಾವುದನ್ನೂ ನೋಡಕೂಡದೆಂಬುದನ್ನು ತಿಳಯಿಸುವುದು.

ನ್ಯಾಯಾಧಿಪತಿಯು ಪಕ್ಷಗಾರನಾಗಿರಬಾರದು ನ್ಯಾಯವಿಮರ್ಶಕನೇ ಆಗಿರಬೇಕು. ತಾನು ಒಬ್ಬರ ಅನುಗ್ರಹಕ್ಕೆ ಪಾತ್ರನಾಗಬೇಕೆಂಬ ಆಶೆಯನ್ನಾಗಲಿ ಇನ್ನೊಬ್ಬರ ದ್ವೇಷಕ್ಕೆ ಗುರಿಯಾದೇನೆಂಬ ಭಯವನ್ನಾಗಲಿ ಪಡೆದಿರಕೂಡದು. ನ್ಯಾಯಕ್ಕೆ ತಕ್ಕಂತೆ ತೀರ್ಮಾನವಮಾಡಬೇಕು ನ್ಯಾಯಕ್ಕೆ ಕಣ್ಣಿಲ್ಲವೆಂಬುದು ಸತ್ಯವು. ಪಕ್ಷಪ್ರತಿಪಕ್ಷಗಳ ಪೈಕಿ ಯಾರಲ್ಲೇ ಆಗಲಿ ಇರತಕ್ಕ ಸೌಂದರ್ಯ ಪದವಿ ಅಧಿಕಾರ, ಐಶ್ವರ್ಯ ಇವಾವುವನ್ನೂ ನ್ಯಾಯವು ಲಕ್ಷ್ಯಮಾಡುವುದಿಲ್ಲ. ಇವುಗಳಿಗೆ ಗಮನಕೊಟ್ಟು ತುಂಟತನವನ್ನು ಯೋಗ್ಯತೆಯೆಂದೂ, ಒಳ್ಳೆಯತನವನ್ನು ಕೆಟ್ಟುದೆಂದೂ, ತೀರ್ಮಾನಿಸತಕ್ಕದು ಎಂದಿಗೂ ನ್ಯಾಯವೆನಿಸಲಾರದು. ಸರ್ ವಿಲಿಯಂಗಾಸ್ಕಾಯಿನ್ ಎಂಬ ನ್ಯಾಯಾಧಿಪತಿಯು ದೊರೆಯುಮಗನೆಂದು ಕೂಡ ಲಕ್ಷ್ಯಮಾಡದೆ ಒಬ್ಬ ತಪ್ಪಿತಸ್ಥನನ್ನು ಸೆರೆಮನೆಗೆ ಕಳುಹಿಸಿ ಶಿಕ್ಷಿಸಿದನು. ನ್ಯಾಯವು ವಿಷಯವನ್ನು ತೂಕಮಾಡಿ ಅದರ ನಿಜವಾದ ಸ್ಥಿತಿಯನ್ನು ಮತ್ತು ಯೋಗ್ಯತೆಯನ್ನೂ ಕಂಡುಹಿಡಿಯಬಲ್ಲುದು. ತಪ್ಪಿತದ ಪ್ರಮಾಣವೂ ಅದರ ಉದ್ದೇಶವೂ ತಿಳದನಂತರ ಅವುಗಳ ಯೋಗ್ಯತೆಯಂತೆ ಶಿಕ್ಷಿಸಬೇಕೇ ವಿನಾ ಒಂದೇ ವಿಧವಾದ ತಪ್ಪಿತಕ್ಕೆಲ್ಲಾ ಒಂದೇ ವಿಧವಾದ ಶಿಕ್ಷೆಯನ್ನು ವಿಧಿಸುವುದು ಅಧರ್ಮ. ಆದುದರಿಂದ ನಿಜಸ್ಥಿತಿಯನ್ನು ಬಹುಮಟ್ಟಿಗೂ ಸೂಕ್ಷ್ಮವಾಗಿ ಪರಿಶೀಲಿಸಿ ಬಳಿಕ ತೀರ್ಮಾನವನ್ನು ಹೇಳತಕ್ಕುದು ನ್ಯಾಯವು. ತೂಕವನ್ನು ತೂಗತಕ್ಕ ಕೈಯು ನಿಶ್ಚಲವಾಗಿಯೂ, ದೃಢವಾಗಿಯೂ ಇದ್ದರೆ ತ್ರಾಸನ್ನು ಸರಿಯಾಗಿ ಹಿಡಿದು ಅತ್ಯಂತ ಸೂಕ್ಷ್ಮವಾದ ವಸ್ತುಗಳನ್ನು ಕೂಡ ಹೇಗೆ ಕಾರ್ಯಕ್ಕೂ ತೂಗಬಹುದೋ ಹಾಗೆಯೇ ನ್ಯಾಯವಿಮರ್ಶೆಮಾಡತಕ್ಕವರು

ನಿಷ್ಪಕ್ಷಪಾತಿಗಳಾಗಿಯೂ, ದೃಢಮನಸ್ಕರಾಗಿಯೂ ಶಾಂತರಾಗಿಯೂ ಇದ್ದರೆ ಅನುಕೂಲ, ಮತ್ತು ಈ ಮುಂದೆ ಹೇಳುವ ಸಂಗತಿಗಳಿಗೂ ಅವರು ಮುಖ್ಯವಾಗಿ ಗಮನಕೊಡಬೇಕು. (೧) ಅತ್ಯಂತ ಸಣ್ಣಪುಟ್ಟ ಅಂಶಗಳೆಂದು ತಾತ್ಸಾರಮಾಡದೆ ಯಾವುದೊಂದನ್ನೂ ಚೆನ್ನಾಗಿ ತಿಳಿಯಬೇಕು. (೨) ನಂಬಿಕೆಗೆ ಅನರ್ಹವಾದುವನ್ನು ರುಜುವಾತಿಗೆ ತೆಗೆದುಕೊಳ್ಳಬಾರದು. (೩) ಪ್ರತ್ಯಕ್ಷವಲ್ಲದೆ ಅಂತೆ ಕಂತೆ ಎಂದು ಹೇಳುವುದನ್ನು ರುಜುವಾತಿಗೆ ತೆಗೆದುಕೊಳ್ಳಬಾರದು. (೪) ಪ್ರತಿಯೊಂದು ಮುಖ್ಯವಾದ ಸಂದರ್ಭಕ್ಕೂ ರುಜುವಾತು ಇರಲೇಬೇಕು. (೫) ಹೀಗೋ ಹಾಗೋ ಎಂದು ಸಂದೇಹಬಂದಾಗ ಅಪರಾಧಿಯು ತಾನು ತಪ್ಪಿತಸ್ಥನಲ್ಲವೆಂದು ಬೇಕಾದರೆ ರುಜು ಮಾಡಿಕೊಳ್ಳಲಿಕ್ಕೂ ಅವಕಾಶವನ್ನು ಕೊಟ್ಟಾದರೂ ನಿಜಸ್ಥಿತಿಯನ್ನು ಕಂಡುಹಿಡಿಯಬೇಕೇ ವಿನಾ ಉದಾಸೀನಮಾಡಿ ಮೊಕದ್ದಮೆಯನ್ನು ಕೆಡಿಸಿ, ಅಧರ್ಮಕ್ಕೆ ಬೀಳಬಾರದು, ಒಬ್ಬನೊಬ್ಬ ನ್ಯಾಯಾಧಿಪತಿಯ ಮನೆಗೆ ಒಬ್ಬ ಕೋಟೀಶ್ವರನು ಬಂದು ತನ್ನದೊಂದು ಮೊಕದ್ದಮೆಯು ಆತನ ಕೋರ್ಟಿನಲ್ಲಿ ವಿಚಾರಣೆಯಾಗುತ್ತಿರುವುದಾಗಿಯೂ ಅದರ ಸಂಗತಿಗಳನ್ನೆಲ್ಲಾ ಚೆನ್ನಾಗಿ ತಿಳಿಯಪಡಿಸುವುದಕ್ಕೋಸ್ಕರ ತಾನು ಬಂದಿರುವುದಾಗಿಯೂ ಹೇಳಿದುದಕ್ಕೆ ಆ ನ್ಯಾಯಾಧಿಪತಿಯು—ಸ್ವಾಮಿ, ಕಕ್ಷಿಪ್ರತಿಕಕ್ಷಿಗಳ ಮತ್ತು ಇತರ ಜನಮಂಡಲಿಯಮುಂದೆ ಬಹಿರಂಗವಾದ ಕೋರ್ಟಿನಲ್ಲಿ ಹೊರತು ಮತ್ತೆಯಾವಾಗಲೂ ವ್ಯವಹಾರಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ವಿಚಾರಿಸುವ ಅಥವಾ ಕೇಳುವ ಪದ್ಧತಿಯನ್ನು ನಾನು ಇಟ್ಟುಕೊಂಡಿಲ್ಲ. ಎಂದು ಹೇಳಿಬಿಟ್ಟನು. ಮತ್ತೊಬ್ಬ ನ್ಯಾಯಾಧಿಪತಿಯ ಬಳಿಗೆ ಯಾರೋ ಒಬ್ಬರು ಹೋಗಿ ಹೆಚ್ಚು ದ್ರವ್ಯವನ್ನು ಲಂಚವಾಗಿ ಕೊಡಬೇಕೆಂದು ಯತ್ನಿಸಿದಾಗ ಆತನು—ಅಯ್ಯಾ ನಿನ್ನ ವ್ಯವಹಾರದ ವಿದ್ಯಮಾನದಲ್ಲಿ ನೀನು ಹೇಳುವುದೇ ಒಳ್ಳೆಯದಾಗಿದ್ದರೆ ಯಾವ ಲಂಚವನ್ನು ತೆಗೆದುಕೊಳ್ಳದೆಯೇ ಅದನ್ನು ನಡೆಯಿಸಿಕೊಡುವುದಕ್ಕೆ ನಾನಾಗಿಯೇ ಸಿದ್ಧನಾಗಿರುವೆನು. ಏಕೆಂದರೆ—ಅದು ಒಳ್ಳೆಯದು. ಹಾಗಿಲ್ಲದೆ ನೀನು ಹೇಳುವುದು ಒಂದು ವೇಳೆ ಕೆಟ್ಟದಾಗಿದ್ದರೆ ಅದನ್ನು ಒಳ್ಳೆಯದೆಂದು ನನ್ನಿಂದ ಹೇಳಿಸುವುದಕ್ಕೋಸ್ಕರ ನೀನು ಈ ಪ್ರಪಂಚದಲ್ಲಿರುವ ಸಮಸ್ತೈಶ್ವರ್ಯವನ್ನೂ ಕೊಟ್ಟರೂ ಅದು ನನ್ನಿಂದ

ಸಾಧ್ಯವಾಗಲಾರದು. ಎಂದು ಹೇಳಿದಸಂತೆ! ನ್ಯಾಯವನ್ನು ಒಬ್ಬನೇ ತೀರ್ಮಾನಿಸುವುದಕ್ಕಿಂತಲೂ ಹಲವು ಜನ ಪಂಚಾಯಿತರು ಸೇರಿ ಹೆಚ್ಚು ಜನಗಳ ಅಭಿಪ್ರಾಯದಂತೆ ತೀರ್ಮಾನ ಮಾಡುವುದುತ್ತಮ.

ಯಾವ ಮೊಕದ್ದಮೆಯನ್ನೂ ಶೀಘ್ರದಲ್ಲಿಯೇ ತೀರ್ಮಾನಿಸುವುದೊಳ್ಳೆಯದು. ಆಗಾಗಿನ ಮೊಕದ್ದಮೆಗಳನ್ನು ಆಗಾಗಲೇ ಇತ್ಯರ್ಥಮಾಡದೆ ಮುಂದು ಮುಂದಕ್ಕೆ ತಳ್ಳುತ್ತ ಕಾಲವಿಳಂಬಮಾಡುತ್ತ ಬಂದಂತೆಲ್ಲಾ ನ್ಯಾಯವು ದುರ್ಬಲವಾಗುತ್ತ ಬಂದು ಅನ್ಯಾಯಕ್ಕೆ ಅವಕಾಶವಾಗುವ ಸಂಭವವುಂಟು. ಆದುದರಿಂದಲೇ ಕಡೆಗೆ ಕ್ರಿಮಿನಲ್ ಕೇಸುಗಳನ್ನಾದರೂ ಬೇಗ ತೀರ್ಮಾನಮಾಡಲೇಬೇಕೆಂದು ಸರ್ಕಾರದವರು ವಿಧಿಸಿರುವರು. ಇದರಿಂದಲೇ ಆ ಕೋರ್ಟುಗಳಲ್ಲಿ ಬೇಸಿಗೆಯ ರಜವು ಕೂಡ ಇಲ್ಲದೆ ಕೆಲಸವು ನಡೆಯುವುದು.

ನ್ಯಾಯವು ಒಳ್ಳೆಯತನವನ್ನು ಗೌರವಿಸುವುದಲ್ಲದೆ ಕೆಡಕಿಗೆ ಶಿಕ್ಷೆಯನ್ನು ಮಾಡುತ್ತದೆ ಒಂದಾನೊಂದು ಕಡೆ ಯುದ್ಧವು ನಡೆಯುತ್ತಿದ್ದಾಗ ಒಂದು ಸೈನ್ಯಕ್ಕೆ ಸೇರಿದ ಒಬ್ಬ ಸಿಪಾಯಿಯು ಕೌಪೀನವನ್ನು ಧರಿಸಿಕೊಂಡು ಸ್ನಾನಮಾಡುತ್ತಿದ್ದು ದಂಡಿನ ತುತ್ತೂರಿಯ ಸದ್ದನ್ನು ಕೇಳುತ್ತಲೇ ತನ್ನ ಆಯುಧಗಳನ್ನು ತೆಗೆದುಕೊಂಡು ಇದ್ದಕ್ಕಿದ್ದ ಹಾಗೆಯೇ ಯುದ್ಧಕ್ಕೆ ಹೊರಟನು. ಮತ್ತು ಧೈರ್ಯದಿಂದ ಕಾದಿ ಶತ್ರುಗಳನ್ನು ಗೆಲ್ಲುವುದರಲ್ಲಿ ಬಹಳ ಸಾಹಸವನ್ನು ತೋರಿಸಿದನು ಅವನ ಸೈನ್ಯದವರಿಗೇ ಜಯವಾಯಿತು. ಆ ಮೇಲೆ ಆ ಸೈನ್ಯದ ದಳಪತಿಯು ಈ ಯೋಧನನ್ನು ಕರೆಯಿಸಿ ತುತ್ತೂರಿಯ ಸದ್ದನ್ನು ಕೇಳಿದೊಡನೆಯೇ ತನ್ನ ಕರ್ತವ್ಯವನ್ನು ನೆರವೇರಿಸಿದುದಕ್ಕಾಗಿ ಬಹುಮಾನವನ್ನೂ ಸರಿಯಾದ ಉಡುಪನ್ನು ಧರಿಸಿಕೊಳ್ಳದೆ ಯುದ್ಧಕ್ಕೆ ಹೊರಟಿದುದಕ್ಕಾಗಿ ಶಿಕ್ಷೆಯನ್ನೂ ಆಜ್ಞಾಪಿಸಿದನು. ಅಂತು ಆವಾವುದಕ್ಕೆ ಏನೇನು ಸಲ್ಲಬೇಕೋ ಅದದಕ್ಕೆ ಅದದನ್ನು ಸಲ್ಲಿಸತಕ್ಕದೇ ನ್ಯಾಯ.

ಕರ್ತವ್ಯವನ್ನು ಸರಿಯಾಗಿ ನಡೆಯಿಸದೆ ಇದ್ದುದಕ್ಕೆ ಶಿಕ್ಷೆಯಾಗತಕ್ಕದೇನೋ ಖಂಡಿತವಾದರೂ, ಕರ್ತವ್ಯವನ್ನು ಸರಿಯಾಗಿ ನೆರವೇರಿಸಿದುದಕ್ಕೆ ಬಹುಮಾನವು ದೊರೆಯಲೇಬೇಕೆಂಬ ನಿರ್ಬಂಧವೇನೂ ಇಲ್ಲ.

ಮಾಡಬೇಕಾಗಿದ್ದುದನ್ನು ಮಾಡಿದುದಕ್ಕೆ ಬಹುಮಾನವನ್ನು ಕೊಡಬೇಕಾದುದೇತಕ್ಕೆ? ಆದರೆ ತಾನು ಮಾಡಬೇಕಾದಷ್ಟಕ್ಕೂ ಮೀರಿ ಇನ್ನೇನಾದರೂ ಅಸಾಧಾರಣವಾದ ಸಾಹಸವನ್ನು ಮಾಡಿದ್ದರೆ ಒಂದು ವೇಳೆ ದೊಡ್ಡವರ ಮನಸ್ಸಿನಲ್ಲಿ ತಾನಾಗಿ ಹುಟ್ಟಿದ ಮಮತೆಯಿಂದ ಬಹುಮಾನಕ್ಕೆ ಪಾತ್ರನಾಗುವ ಸಂಭವವೂ ಉಂಟು.

ನ್ಯಾಯವನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಬೇಕಾದಲ್ಲಿ ಬಲು ಮಟ್ಟಿಗೂ ಜಾಗರೂಕತೆಯು ಆವಶ್ಯಕ. ಏಕೆಂದರೆ—ಯಾವ ಕೆಲಸದಲ್ಲಿಯೇ ಆಗಲಿ ಮಾಡಿದವರ ಉದ್ದೇಶ, ಶಕ್ತಿಪ್ರತಿಶಕ್ತಿಗಳ ಸ್ವಭಾವ, ಯೋಗ್ಯತೆ, ಇಂಥವುಗಳನ್ನೆಲ್ಲಾ ತಿಳಿದ ಹೊರತು ಮೊಕದ್ದಮೆಯ ತೀರ್ಮಾನವನ್ನು ಹೇಳಲಾಗುವುದಿಲ್ಲ. ಹೇಗೆಂದರೆ—ನೀರಿನ ಮೇಲ್ಗಡೆ ಒಂದೇಸಮವಾದ ಎತ್ತರವುಳ್ಳುದಾಗಿ ತೋರುವ ಗಿಡಗಳನ್ನು ನೋಡಿ ಅವೆಲ್ಲಾ ಒಂದೇ ಸಮವಾದ ಎತ್ತರವುಳ್ಳವುಗಳು ಎನ್ನಲಾಗದು. ಏಕೆಂದರೆ—ಅವುಗಳಲ್ಲಿ ಕೆಲವು ನೀರಿನೊಳಗೆ ಕೇವಲ ಹಳ್ಳದ ಪ್ರದೇಶಗಳಲ್ಲಿ ಹುಟ್ಟಿರಬಹುದು. ಮತ್ತೆ ಕೆಲವು ನೀರಿನೊಳಗೆ ದಿಣ್ಣೆಯ ಪ್ರದೇಶಗಳಲ್ಲಿ ಹುಟ್ಟಿರಬಹುದು. ಆದುದರಿಂದ ನೀರಿನ ಮೇಲ್ಗಡೆಯ ಸ್ಥಿತಿಯನ್ನು ನೋಡಿದ ಮಾತ್ರಕ್ಕೆ ಆ ಗಿಡಗಳ ನಿಜವಾದ ಎತ್ತರದ ಪ್ರಮಾಣವು ಗೊತ್ತಾಗಲಾರದು

ಪ್ರಬಲರಿಂದ ದುರ್ಬಲರಿಗೆ ಬಾಧೆಯಾಗುತ್ತಿರುವುದನ್ನು ಕಣ್ಣಾರ ನೋಡುತ್ತಿದ್ದರೂ ತಟಸ್ಥರಾಗಿರತಕ್ಕವರೂ ಅಥವಾ ತಾವೇ ಪ್ರಬಲರಾಗಿದ್ದು ದುರ್ಬಲರನ್ನು ಬಾಧಿಸತಕ್ಕವರೂ ಎಂದಿಗೂ ನ್ಯಾಯಪರರಲ್ಲ. ಇವರು ಅನ್ಯಾಯಪ್ರವರ್ತಕರು. ಇತರರಿಗೆ ಕೈಲಾದ ಮಟ್ಟಿಗೂ ಸಹಾಯ ಮಾಡಬೇಕೆಂಬ ಸಂಕಲ್ಪದಿಂದ ದೇವರು ನಮಗೆ ಶಕ್ತಿಯನ್ನೂ ತಿಳಿವಳಿಕೆಯನ್ನೂ ಕೊಟ್ಟಿರುವನೇ ಹೊರತು ಅವರನ್ನು ತೊಂದರೆಪಡಿಸುವುದಕ್ಕಲ್ಲ. ಧನಿಕರು ಬಡವರನ್ನೂ ಗಟ್ಟಿಗರು ಕೈಲಾಗದವರನ್ನೂ, ದೊಡ್ಡವರು ಚಿಕ್ಕವರನ್ನೂ ಪುರುಷರು ಸ್ತ್ರೀಯರನ್ನೂ, ತುಂಟರು ಸಭ್ಯರನ್ನೂ, ಮನುಷ್ಯರು ತಿರ್ಯಗ್ಜಂತುಗಳನ್ನೂ ಬಾಧೆಪಡಿಸದಂತೆ ನೋಡಿಕೊಳ್ಳತಕ್ಕುದು ನ್ಯಾಯಪರನಾದ ಪ್ರತಿಯೊಬ್ಬ ಮನುಷ್ಯನಿಗೂ ಕರ್ತವ್ಯ. ಇಂಥ ಅನ್ಯಾಯಗಳನ್ನು ತಪ್ಪಿಸುವುದು ಒಂದು ವೇಳೆ ತನಗೆ ಅಸಾಧ್ಯವಾದರೆ ಮಾತುಗಳಿಂದಲಾದರೂ ಪ್ರತಿ

ಘಟಿಸಬೇಕು. ಇದು ಕಾಯಶಕ್ತಿಯಿಂದ ಮಾಡುವ ಸಹಾಯಕ್ಕಿಂತ ಶ್ರೇಷ್ಠವಾದುದು. ನ್ಯಾಯಕ್ಕಾಗಿ ಹೀಗೆ ಪ್ರವರ್ತಿಸುವುದು ಎಂದಿಗೂ ಅಧರ್ಮವಲ್ಲ. ನ್ಯಾಯಕ್ಕೆ ತಪ್ಪಿನಡೆಯುವ ಶಕ್ತಿಯು ಲೋಕಕಂಟಕವು. ಕಳ್ಳರು ದಂಗೆಕೋರರು, ಮೊದಲಾದವರು ಎಷ್ಟು ಧೈರ್ಯವನ್ನು ತೋರಿಸುವರು ! ಆದರೂ ಅವರು ನ್ಯಾಯಪರರೆನಿಸಿಕೊಂಡಾರೆ ?

ನ್ಯಾಯವು ದೈಹಿಕವಲ್ಲ, ಮಾನಸಿಕವಾದುದು. ಇದು ಜೀವನಿಗೆ ದಿವ್ಯವಾದ ನಿತ್ಯಾಲಂಕಾರ. ನಾವು ಇತರರ ಹಕ್ಕು ಬಾಧ್ಯತೆಗಳನ್ನು ಗೌರವಿಸದಿದ್ದರೆ ಎಂದಿಗೂ ನ್ಯಾಯಪಕ್ಷಪಾತಿಗಳೆನಿಸಿಕೊಳ್ಳಲಾರೆವು. ಇತರರ ಸ್ವಾತಂತ್ರ್ಯಕ್ಕೆ ಭಂಗತರುವುದು, ಇತರರು ಮಾತಾಡುವುದಕ್ಕೆ ಅಡ್ಡಿಮಾಡುವುದು, ಇಂಥವುಗಳೆಲ್ಲಾ ಅನ್ಯಾಯಕಾರ್ಯಗಳು. ಅಧಿಕಾರದ ಅಥವಾ ಐಶ್ವರ್ಯದ ಹೆಮ್ಮೆಯಿಂದ ಬಲಾತ್ಕಾರವಾಗಿ ಇತರರ ವಸ್ತುಗಳನ್ನು ಬಿಟ್ಟಿಯಾಗಿ ಅಥವಾ ಅಲ್ಪಕ್ರಯಕ್ಕೆ ಪಡೆಯುವುದು, ಬಿಟ್ಟಿಚಾಕರಿ ದುಡಿಸುತ್ತ ಜನಗಳಿಗೆ ತೊಂದರೆಯನ್ನುಂಟುಮಾಡುವುದು, ಹತ್ತು ಜನಗಳಿಗೆ ಸೇರಿದುದನ್ನು ತಾನೊಬ್ಬನೇ ದಕ್ಕಿಸಿಕೊಳ್ಳುವುದು, ಇವೆಲ್ಲಾ ಅನ್ಯಾಯ. ತಪ್ಪು ಮಾಡದೆ ಇರುವವರೆಲ್ಲಾ ನ್ಯಾಯವಾದಿಗಳೆನಿಸಿಕೊಳ್ಳಲಾರರು. ಆದರೆ ತಪ್ಪು ಮಾಡುವುದಕ್ಕೆ ಅವಕಾಶವಿದ್ದಾಗ ಕೂಡ ಮನಸ್ಸನ್ನು ಬಿಗಿಹಿಡಿದು ಯಾರು ನ್ಯಾಯವಾಗಿ ನಡೆಯುವರೋ ಅವರೇ ನ್ಯಾಯಪಕ್ಷಪಾತಿಗಳು. ಮತ್ತು ಸಣ್ಣಪುಟ್ಟ ಅಂಶಗಳಲ್ಲಿ ಮಾತ್ರ ನ್ಯಾಯವಾಗಿ ನಡೆದಮಾತ್ರಕ್ಕೇ ಅವರನ್ನು ನ್ಯಾಯಪರರೆನ್ನಲಾಗದು. ಕೆಲವರಿಗೋಸ್ಕರ ಅನೇಕರನ್ನು ದೂಷಿಸುವುದು, ಕೆಲವರು ರಾಜದ್ರೋಹಮಾಡಿ ಒಟ್ಟು ದೇಶದವರೆಲ್ಲಾ ಸರ್ಕಾರಕ್ಕೆ ವಿರೋಧಿಗಳಾಗುವಂತೆ ಮಾಡುವುದು, ಎಲ್ಲಿಯೋ ಒಂದು ಕಡೆ ಅಕಸ್ಮಾತ್ತಾಗಿ ಅಚಾತುರ್ಯವು ನಡೆದರೆ ಒಟ್ಟು ನ್ಯಾಯವನ್ನು ಮತ್ತು ನ್ಯಾಯಾಧಿಕಾರಿಗಳನ್ನು ದೂರುವುದು ಇಂಥದೆಲ್ಲಾ ನಿಷಿದ್ಧ. ಉದಾ—ಸಹಾಯವು ದೊರೆಯುವುದಕ್ಕೆ ಮೊದಲೇ ಒಬ್ಬ ಬಡವನು ಸತ್ತರೆ ಅನಾಥಾಲಯವನ್ನು ನಿಂದಿಸುವುದು, ಮೊದಲಾದುವು.

ಯಾರಾದರೂ ನಮಗೆ ಕೇಡುಮಾಡಿದರೆ ಆ ವಿಷಯವನ್ನು ನ್ಯಾಯಾಸ್ಥಾನಗಳಿಗೆ ತಿಳಿಸದೆ ನಾವೇ ಪ್ರತೀಕಾರ ಮಾಡುವುದು ತಪ್ಪು. ಮತ್ತು

ಇದು ಅನಾಗರಿಕತೆಯಿಂದ ನಡೆಯಿಸುವ ಒರಟುತನ. ಅಕಸ್ಮಾತ್ತಾಗಿ ನಾವು ಒಂದುವೇಳೆ ತಪ್ಪು ಮಾಡಿದರೂ ಅದು ತಪ್ಪೆಂದು ತಿಳಿದನಂತರ ಒಪ್ಪಿಕೊಳ್ಳಬೇಕೇ ವಿನಾ ತಪ್ಪಲ್ಲವೆಂದು ಸುಮ್ಮನೆ ಹಠಹಿಡಿದು ಸಾಧಿಸತೊಡಗಬಾರದು, ಒಬ್ಬರಿಗೆ ಅನ್ಯಾಯಮಾಡಿ ಮತ್ತೊಬ್ಬರಿಗೆ ಉಪಕಾರಮಾಡುವುದು ಔದಾರ್ಯವಲ್ಲ, ಚೌರ್ಯವೆನಿಸುವುದು ನಮಗೇ ಹಕ್ಕುದಾರಿಯಿಲ್ಲದಿರುವಲ್ಲಿ ನಾವು ಸ್ವಾತಂತ್ರ್ಯವನ್ನು ವಹಿಸಿಕೊಂಡು ಪ್ರವರ್ತಿಸುವುದು ಅನ್ಯಾಯುವಲ್ಲವೆ? ಔದಾರ್ಯವೂ ದಯೆಯೂ ವಿವೇಕವಾದ ಮಾರ್ಗದಲ್ಲಿ ಪ್ರಯೋಗಿಸಲ್ಪಟ್ಟಾಗ ಮಾತ್ರ ಶ್ಲಾಘ್ಯವೆನಿಸುವುವು. ತಾಯ್ತಂದೆಗಳು ತಮ್ಮ ಪ್ರತಿಯೊಂದು ಮಗುವನ್ನು ಉಪಾಧ್ಯಾಯರು ತಮ್ಮ ಪ್ರತಿಯೊಬ್ಬ ಶಿಷ್ಯನನ್ನೂ ಒಂದೇವಿಧವಾದ ಪ್ರೀತಿಯಿಂದ ಕಾಣಬೇಕು. ತಪ್ಪುಮಾಡಿದವರಿಗೆ ಶಿಕ್ಷೆಯನ್ನು ಮಾಡಿಯೇ ತೀರಬೇಕು. ಅದು ದಯೆಯೊಡನೆ ಮಿಳಿತವಾಗಿರಬೇಕು. ಶಿಕ್ಷೆಯು ತಪ್ಪಿತಕ್ಕೆ ತಕ್ಕುದಾಗಿರಬೇಕು ಹೊತ್ತುಮೀರಿ ಪಾಠಶಾಲೆಗೆ ಬರುವವರನ್ನು ಹೆಚ್ಚುಹೊತ್ತು ಅಲ್ಲಿಯೇ ತಡೆಯುವುದು, ಕಾಪಿ ಮಾಡಿದವರಿಂದ ಸ್ವತಂತ್ರವಾಗಿ ಕೆಲಸಮಾಡಿಸುವುದು, ಹರಟೆ ಹೊಡೆಯುವವರನ್ನು ಪರಸ್ಪರವಾಗಿ ಪ್ರತ್ಯೇಕಿಸುವುದು, ಇತ್ಯಾದಿಗಳೇ ನಿದರ್ಶನಗಳು. ಯಾರೂ ನೆರೆಹೊರೆಯವರಿಗೆ ಕೇಡನ್ನು ಹಾರಯಿಸುತ್ತಿರಬಾರದು ಇತರರ ದುರ್ಗುಣಗಳನ್ನು ಎತ್ತಿಯಾಡುತ್ತಿರಬಾರದು. ಯಾರನ್ನೂ ದ್ವೇಷಿಸಬಾರದು ಅಥವಾ ಮುಖಸ್ತುತಿ ಮಾಡಬಾರದು. ನಮಗೆ ತಿಳಿವಳಿಕೆ ಸಾಲದ ವಿಷಯದಲ್ಲಿ ಸರಿ ಅಥವಾ ತಪ್ಪು ಎಂದು ಸಾಧಿಸುತ್ತ ನಮ್ಮ ಹಠವನ್ನೇ ಸಾಧಿಸುವುದು ಅನ್ಯಾಯವು.

## (33) ವಿದ್ಯಾಭ್ಯಾಸ

ಅತ್ಯಂತ ಪ್ರಾಚೀನಕಾಲದಿಂದಲೂ ಎಲ್ಲಾ ರಾಜ್ಯಗಳಲ್ಲೂ ಪ್ರಾಜ್ಞರು ಅಕ್ಷರವಿದ್ಯೆಗೆ ಬಹಳ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ವಿದ್ಯೆಯು ದೊಡ್ಡ ನಿಧಿಯೆಂದರೂ ಸಾಲದು. ನಿಧಿಯನ್ನು ಯಾರಾದರೂ ಅಪಹರಿಸುವ ಸಂಭವವುಂಟು. ವಿದ್ಯೆಯಾದರೋ ಅದಕ್ಕೆ ಅಸಾಧ್ಯ ಮತ್ತು ಇದಕ್ಕೆ ಯಾವ

ತರಿಗೆಯನ್ನೂ ಕೊಡಬೇಕಾದುದಿಲ್ಲ. ಕಡೆಗೆ ಒಡಹುಟ್ಟಿದವರಿಗೆ ಕೂಡ ಇದರಲ್ಲಿ ಪಾಲುಕೊಡುವಹಾಗಿಲ್ಲ. ಅವಿದ್ಯೆಯೇ ಮೌಢ್ಯ. ಇದು ಕೆಡಿಕೆಗೆ ತವರುಮನೆ, ಮತ್ತು ದೇವರಶಾಪ.

ಅಕ್ಷರವಿದ್ಯೆಯ ಪ್ರಯೋಜನಗಳನ್ನು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಇದರಿಂದ ಬುದ್ಧಿಯು ಚುರುಕಾಗುವುದು. ಜ್ಞಾನವು ಹೆಚ್ಚುವುದು, ಸುಲಭವಾಗಿ ಜೀವನವನ್ನು ನಡೆಯಿಸಿಕೊಳ್ಳಬಹುದು. ಪರಸ್ಪರ ಸಹಾಯಕ್ಕೆ ಅನುಕೂಲ. ಯಾವ ಕೆಲಸವನ್ನಾದರೂ ಸುಲಭವಾಗಿಯೂ ಚೆನ್ನಾಗಿಯೂ ಮಾಡುವಂತಾಗುವುದು. ಆದುದರಿಂದ ಜೀವಮಾನಕ್ಕೆ ವಿದ್ಯಾಭ್ಯಾಸವು ಅತ್ಯಾವಶ್ಯಕ. ಇಷ್ಟೇ ಅಲ್ಲ, ಇದು ಸ್ವರ್ಗಕ್ಕೆ ಸೋಪಾನ; ಹೀಗೆ ವಿದ್ಯೆಯು ಇಹಪರಗಳೆರಡಕ್ಕೂ ಸಾಧಕವೆಂದಾಯಿತು. ಸುಬುದ್ಧಿಯನ್ನೂ ಸುಜ್ಞಾನವನ್ನೂ ಪಡೆದವನೇ ಸುಖಿಯೆಂದೂ ಅವು ಆವನ ಭಾಗದ ಬೆಳ್ಳಿಯೆಂದೂ ಅವುಗಳಿಂದ ಪಡೆದ ಅನುಭವವು ಅಪರಂಜಿಯ ಚಿನ್ನವೆಂದೂ ಒಬ್ಬ ವಿದ್ವಾಂಸನು ಹೇಳಿರುವನು. ಆದುದರಿಂದ ವಿದ್ಯೆಯು ಸರ್ವಶ್ರೇಷ್ಠವೆಂದಾಯಿತು. ಇಂಥ ವಿದ್ಯೆಯು ಸರ್ವರಿಗೂ ಆವಶ್ಯಕ.

ಆದರೆ ಸ್ತ್ರೀಯರಿಗೆ ಇದು ಬೇಕಿಲ್ಲವೆಂದು ಫ್ರಾನ್ಸ್, ಜರ್ಮನಿ ಮೊದಲಾದ ದೇಶಗಳವರೂ ಕೂಡ ಅಭಿಪ್ರಾಯಪಟ್ಟಿದ್ದರು. ಈಚೆಗೆ ವಿದ್ಯೆಯ ಮಹಿಮೆಯನ್ನು ಕಂಡುಕೊಂಡುದರಿಂದ ಈಗ ಅವರಲ್ಲಿ ಎಲ್ಲರೂ ವಿದ್ಯಾವಂತರಾಗಿದ್ದಾರೆ ನಮ್ಮಲ್ಲೂ ಸ್ತ್ರೀಯರಿಗೆ ವಿದ್ಯೆಯು ಅನಾವಶ್ಯಕವೆಂದು ಹೇಳುತ್ತ ಕೆಲವರು ಅವರನ್ನು ಮೂಲೆಗೊತ್ತರಿಸಿರುವರಲ್ಲದೆ ಅದು ಅಪಾಯಕರವೆಂದು ಕೂಡ ನಂಬಿಕೊಂಡಿದ್ದಾರೆ. ಇದು ನಿರಾಧಾರವಾದ ನಂಬಿಕೆ. ಈಗಿನ ಮಕ್ಕಳೇ ಮುಂದಿನ ಪ್ರಜೆಗಳು ತಾಯಿಯ ಪದವಿಯನ್ನು ಪಡೆಯತಕ್ಕ ಸ್ತ್ರೀಯರು ವಿದ್ಯಾಬುದ್ಧಿಗಳಿಲ್ಲದೆ ಪಶುಗಳಂತಿದ್ದರೆ ಅವರಲ್ಲಿ ಜನಿಸುವ ಮಕ್ಕಳು ಮೇಧಾವಿಗಳಾದಾರೆ? ಪುರುಷರಂತೆ ಸ್ತ್ರೀಯರೂ ವಿದ್ಯಾವತಿಯರಾದರೆ ಸಂತಾನವು ಈಗಿಂತ ಎಷ್ಟೋ ಮೇಲಾದೀತು. ಇದು ಹಾಗಿರಲಿ. ದಾಂಪತ್ಯದಲ್ಲಿ ಸ್ತ್ರೀಪುರುಷರಿಗೆ ಪರಸ್ಪರವಾಗಿ ಶುದ್ಧವಾದ ಮೈತ್ರಿಯೂ ಒಂದು ಮುಖ್ಯೋದ್ದೇಶವಷ್ಟೆ. ಸ್ನೇಹಿತರಾಗಿರತಕ್ಕವರು ಸಕಲವಿಷಯಗಳಲ್ಲೂ ಪರಸ್ಪರ ಸಮಾನರಾಗಿರಬೇಕಲ್ಲವೆ? ವಿದ್ಯಾವಿ-

ತನೂ ಕುಶಲನೂ ಆದ ಪುರುಷನಿಗ ವಿದ್ಯೆಯಿಲ್ಲದೆ ಮೂಢಳಾದ ಸ್ತ್ರೀಯು ಪತ್ನಿಯಾದರೆ ಆ ಸಂಸಾರವು ಒಂದು ಕುದುರೆಯನ್ನೂ ಒಂದು ಎತ್ತನ್ನೂ ಒಂದು ಬಂಡಿಗೆಕಟ್ಟಿ ಎಳೆಯಿಸಿದಂತೆ ಅಸಮಂಜಸವಾಗುವುದಲ್ಲವೆ? ಮತ್ತು ಆಕೆಯಿಂದ ಗೃಹಕೃತ್ಯವು ನಿರ್ವಾಹವಾಗುವ ಬಗೆಹೇಗೆ? ಎರಡು ಕೆಲಸಗಳನ್ನೂ ಪುರುಷನೇ ಮಾಡಬೇಕಾಗುವುದಲ್ಲಾ! ಇದೂ ಅಂತಿರಲಿ. ಕೃಪಾಳುವಾದ ಭಗವಂತನು ನಿಷ್ಪಕ್ಷಪಾತಿಯಲ್ಲವೆ? ಆತನು ಸ್ತ್ರೀಯರೆಂದು ಅವರನ್ನೇನಾದರೂ ಕೀಳಾಗಿ ತಿರಸ್ಕರಿಸಿದ್ದಾನೆಯೇ? ಅವರಿಗೆ ವಿದ್ಯೆಯನ್ನು ಕಲಿಸಿದ ಮಾತ್ರಕ್ಕೆ ಏನೂ ಕೇಡಾಗದಿರುವುದು ಮಾತ್ರವಲ್ಲದೆ ಬದುಕುವುದಕ್ಕೂ ಒಳ್ಳೆಯದಾರಿ ಸಿಕ್ಕುವುದು. ಪೂರ್ವಕಾಲದ ಆರ್ಯಮಹಿಳೆಯರು ಎಷ್ಟೋ ವಿದ್ಯಾವತಿಯರಾಗಿದ್ದರು. ಈಗಿನವರೂ ಅವರಂತೆಯೇ ಆಗಬೇಕು.

ಪೂರ್ವದಲ್ಲಿ ವಿದ್ಯೆಯನ್ನು ಕೆಲವು ಜಾತಿಯವರು ಮಾತ್ರ ಕಲಿಯುತ್ತಿದ್ದರು. ಉಳಿದವರು ಕೃಷಿ, ಕೈಗಾರಿಕೆ ಮೊದಲಾದವುಗಳಲ್ಲಿ ಮಾತ್ರ ಹೆಚ್ಚು ಪರಿಶ್ರಮವನ್ನು ಪಡೆದಿದ್ದರು. ವಿದ್ಯಾವಂತರು ಈ ಕೆಲಸಗಾರರನ್ನು ಕೀಳಾಗಿ ಕಾಣುತ್ತಿದ್ದರು. ಇದು ನಮ್ಮ ಭರತಖಂಡದಲ್ಲಿ ಮಾತ್ರವಲ್ಲ, ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿಯೂ ಹೀಗೆಯೇ ಇದ್ದಿತು. ಈಗ ನಮ್ಮಲ್ಲಿ ಒಬ್ಬ ರೈತನು ತಕ್ಕಮಟ್ಟಿಗೆ ವಿದ್ಯೆಯನ್ನು ಕಲಿತರೂ ತನ್ನ ಕಸಬನ್ನೇ ತಿರಸ್ಕರಿಸಿ ಸರ್ಕಾರದ ಉದ್ಯೋಗಕ್ಕೋ ಇತರ ಭೋಗಗಳಿಗೋ ಎಳಸುತ್ತಿರುವ ಕೆಟ್ಟ ಪದ್ಧತಿಗೆ ಈ ಮೇಲಿನ ದುರಭಿಪ್ರಾಯವೇ ಕಾರಣವು.

ಅಕ್ಷರವಿದ್ಯೆಯು ಸರ್ವರಿಗೂ ಆವಶ್ಯಕವೆಂದಮೇಲೆ ಸಾಮಾನ್ಯವಾಗಿ ಎಲ್ಲರಿಗೂ ಓದುಬರಹ ಲೆಕ್ಕಗಳಾದರೂ ಚೆನ್ನಾಗಿ ತಿಳಿದಿರಬೇಕು. ಅಲ್ಲದೆ ಆಯಾ ಕಸಬುದಾರರಿಗೆ ಅವರವರ ವೃತ್ತಿಗಳಲ್ಲಿ ದಕ್ಷತೆಯನ್ನುಂಟುಮಾಡಿಕೊಳ್ಳುವುದಕ್ಕೆ ವಿಶೇಷರೀತಿಯ ವಿದ್ಯಾಭ್ಯಾಸವೂ ಅತ್ಯಾವಶ್ಯಕ. ಪ್ರಕೃತದಲ್ಲಿ ನಮ್ಮ ದೇಶದ ಜನರ ಸ್ಥಿತಿಯನ್ನು ನೋಡೋಣ. ಮೇಲೆ ಕಂಡಂಥ ಕಸಬುದಾರರಿಗೆ ಸಾಮಾನ್ಯವಾದ ಓದುಬರಹಗಳು ಕೂಡ ಬಾರವು. ರೈತರು ತಮ್ಮ ಹಳ್ಳಿಯಲ್ಲಿ ವಿದ್ಯಾಶಾಲೆಯನ್ನು ಪಡೆದಿದ್ದರೂ ಓದುವುದ

ರಿಂದ ಏನೂ ಲಾಭವಿಲ್ಲವೆಂದೂ ಅದಕ್ಕೆ ಬದಲು ದನಕುರಿಗಳನ್ನು ಮೇಯಿ ಸುವುದು ಮೇಲೆಂದೂ ತಿಳಿದು ತಮ್ಮ ಮಕ್ಕಳನ್ನು ಓದಗೊಳಿಸುವುದಿಲ್ಲ. ಇದು ಮೌಢ್ಯ. ಆ ಮಕ್ಕಳು ವಿದ್ಯೆಯನ್ನು ಕಲಿತರೆ ಬುದ್ಧಿವಂತಿಕೆಯಿಂದ ತಮ್ಮ ಕಸಬನ್ನೇ ವೃದ್ಧಿಗೊಳಿಸಿಕೊಂಡು ಹೆಚ್ಚಾಗಿ ಸಂಪಾದಿಸಬಲ್ಲರೆಂದೂ ತಮ್ಮ ವಂಶವು ಉತ್ತಮಸ್ಥಿತಿಗೆ ಬರುವುದೆಂದೂ ತಿಳಿಯಬೇಕು. ನೂರಾರು ಖಂಡಗ ದವಸಧಾನ್ಯಗಳನ್ನು ಬೆಳೆಯುತ್ತಿರುವ ರೈತರಲ್ಲಿ ಕೂಡ ಎಷ್ಟೋ ಮಂದಿಗೆ ಓದುಬರಹ ತಿಳಿಯದು. ಇಂಥವರಿಗೆ ಲೆಕ್ಕಾಚಾರದಲ್ಲಿ ಗಲಿಬಿಲಿ ಮಾಡಿ ಹೆಚ್ಚಾಗಿ ವಂಚಿಸುತ್ತಲೂ ಅದನ್ನು ತಾವು ಕಬಳಿಸುತ್ತಲೂ ಇರ ಬಹುದಾದ ದುರುಳರ ದುಷ್ಪ್ರವರ್ತನೆಗೆ ವಿದ್ಯೆಯು ಎಂದಿಗೂ ಅವಕಾಶ ವನ್ನು ಕೊಡಲಾರದು. ಈ ವಿಷಯದಲ್ಲಿ ವರ್ತಕರು ರೈತರಿಗಿಂತಲೂ ಸ್ವಲ್ಪಮೇಲು. ಆದರೂ ಅವರು ತಮ್ಮ ಮಕ್ಕಳು ಒಂದೆರಡು ಪುಸ್ತಕಗ ಳನ್ನು ಓದಿದಕೂಡಲೇ ಅವರನ್ನು ಅಂಗಡಿಯಮೇಲೆ ವ್ಯಾಪಾರಕ್ಕೆ ಕುಳ್ಳಿರಿ ಸುತ್ತಾರೆ. ಇದರಿಂದ ಏನಾಯಿತು? ತಮ್ಮ ಕಸಬನ್ನು ವೃದ್ಧಿಪಡಿಸಿಕೊಳ್ಳು ವುದಕ್ಕಾದರೂ ಅವಕಾಶವಾಯಿತೆ? ಯಾವ ಯಾವ ವಸ್ತುವು ಎಲ್ಲೆಲ್ಲಿ ದೊರೆಯುವುದು, ಎಲ್ಲೆಲ್ಲಿಗೆ ಯಾವಯಾವುದನ್ನು ಕಳುಹಿಸಿದರೆ ಲಾಭ, ಯಾವಯಾವ ಜನರಿಗೆ ಯಾವಯಾವ ವಸ್ತುಗಳು ಹೇಗೆ ಹೇಗಿದ್ದರೆ ಇಷ್ಟ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಲು ಸುಲಭವಾದ ವೆಚ್ಚವೂ ಕಡಿಮೆಯಾದಕಾಲವೂ ಆಗುವ ಮಾರ್ಗಗಳು ಯಾವುವು! ಲೆಕ್ಕಪತ್ರಗಳನ್ನಿ ಡುವಬಗೆ ಹೇಗೆ? ಇವನ್ನೆಲ್ಲಾ ವರ್ತಕನು ತಿಳಿದಿರಬೇಕು. ಅದಕ್ಕೆಲ್ಲಾ ವಿದ್ಯೆ ಯು ಅವಶ್ಯಕ. ನಮ್ಮಲ್ಲಿ ಅಕ್ಕಸಾಲೆ, ಬಡಗಿ, ಗಾಣಿಗ, ಕುಂಬಾರ, ಅಗಸ ಹಜಾಮ, ಕಮ್ಮಾರ ಮೊದಲಾದ ಕೈಗಾರಿಕೆಯವರಲ್ಲಿ ಅನೇಕರಿಗೆ ವಿದ್ಯೆ ಯೇಬಾರದು. ಈಗ ಅವರು ನಡೆಯಿಸುತ್ತಿರುವುದೆಲ್ಲಾ ಕುರುಡುದಾರಿ ಯಲ್ಲೇ ಆಗಿದೆ. ಅವರು ವಿದ್ಯೆಯನ್ನು ಕಲಿತರೆ ಅಳತೆ, ತೂಕ, ಬಣ್ಣ ಇವುಗಳಲ್ಲಿ ಮಾತ್ರವಲ್ಲದೆ ನಾನಾ ಬಗೆಯ ಚಿತ್ರಗಳು, ಮಾದರಿಗಳು, ವಸ್ತುಗಳಬೆಲೆ, ಕೆಲಸಕ್ಕೆ ಬೇಕಾಗುವ ಹಲವು ತೆರನಾದ ಉಪಕರಣಗಳು, ಅವುಗಳು ದೊರೆಯುವ ಸ್ಥಳಗಳು ಇತ್ಯಾದಿಗಳನ್ನೆಲ್ಲಾ ತೊಡಕಿಲ್ಲದೆ ತಿಳಿ ಧುಕೊಂಡು ಕಡಿಮೆಯ ಕಷ್ಟದಿಂದ ಉತ್ತಮವಾದ ವಸ್ತುಗಳನ್ನು ಹೆಚ್ಚಾಗಿ

ನಿರ್ಮಿಸಲು ವಿದ್ಯಾಭ್ಯಾಸವು ಆವಶ್ಯಕ. ಪರಂಗಿಯವರ ಸಾಮಾನುಗಳನ್ನು ನೋಡಿದರೆ ಈ ವಿಷಯದಲ್ಲಿಯೂ ವಿದ್ಯೆಯ ಮಹಿಮೆಯು ಗೊತ್ತಾದೀತು, ಇದೂ ಅಂತಿರಲಿ.

ನಾಲ್ಕು ವರ್ಷದ ಹುಡುಗನಿಗೆ ಪಟ್ಟೆಪಟ್ಟೆ ನಾಮಗಳನ್ನು ಹಾಕಿ ಕೈಯಲ್ಲಿ ಶಂಖಜಾಗಟೆಗಳನ್ನು ಕೊಟ್ಟು ಜತೆಯಲ್ಲಿ ಒಯ್ಯುತ್ತ ಭಿಕ್ಷಾಟನೆಯನ್ನು ಕಲಿಸುವ ದಾಸಯ್ಯನೂ, ಹರಕೆಹಾಕುವೆನೆಂದು ಬುಡುಬುಡುಕೆಯನ್ನು ಬಾರಿಸುತ್ತ ಮನೆಮನೆಯ ಬಾಗಿಲಿಗೂ ಬಂದು ಕಾಸಿನಾಸೆಗಾಗಿ ಜನಗಳನ್ನು ಪೀಡಿಸುತ್ತಲೂ ಕೊಡದಿದ್ದವರನ್ನು ಬೈಯುತ್ತಲೂ ಸ್ತ್ರೀಯರನ್ನೂ ಮಕ್ಕಳನ್ನೂ ಬೆದರಿಸುತ್ತಲೂ ಇರುವ ಬೈರಾಗಿಗಳೆಂದೂ ಗೊರವಯ್ಯಗಳೆಂದೂ ಕರೆಯಿಸಿಕೊಳ್ಳುತ್ತಿರುವ ಸೋಮಾರಿಗಳೂ, ತಾನು ಗುರುವೆಂದೂ ದೊಡ್ಡವನೆಂದೂ ಹೇಳಿಕೊಳ್ಳುತ್ತ ತನ್ನಂತೆ ಮೂಢರಾದ ಇತರರಿಗೆ ಸುಳ್ಳುಪೊಳ್ಳು ಹರಟೆಗಳಿಂದ ಅಂಗೈಯಲ್ಲಿ ವೈಕುಂಠವನ್ನು ತೋರಿಸುತ್ತ ಮರುಳುಮಾಡಿ ದೇಶವನ್ನು ಕೆಡಿಸುವ ಜನರು ಲೋಕಕಂಟಕರು. ಇವರೆಲ್ಲಾ ವಿದ್ಯೆಯನ್ನು ಕಲಿತು ಜ್ಞಾನವನ್ನು ಸಂಪಾದಿಸಿಕೊಂಡಿದ್ದರೆ ಇಷ್ಟಕ್ಕೆಲ್ಲಾ ಅವಕಾಶವಿರುತ್ತಿದ್ದಿತೆ? ಕೂಲಿಗಳು ರಾಜ್ಯಕ್ಕೆ ಪ್ರಿಯಪುತ್ರರು. ಹೇಗೆಂದರೆ, ಇವರು ಕಷ್ಟಪಟ್ಟು ದುಡಿದು ಜೀವಿಸುತ್ತಾರೆ. ಆದರೆ ನಮ್ಮ ದೇಶದಲ್ಲಿ ಇವರು ವಿದ್ಯಾವಂತರಲ್ಲ. ವಿದ್ಯೆಯನ್ನು ಕಲಿತರೆ ಮಿತವ್ಯಯ, ಪರಸ್ಪರ ಸಹಾಯ, ನೈರ್ಮಲ್ಯ, ತಮ್ಮ ಕಷ್ಟಸುಖಗಳನ್ನು ಸಕಾರಣವಾಗಿ ದಣಿಗೆ ಅಥವಾ ಸರ್ಕಾರಕ್ಕೆ ಅರಿಕೆ ಮಾಡಿಕೊಳ್ಳುವುದು, ಇಂಥ ಸೌಕರ್ಯಗಳನ್ನು ಕಲ್ಪಿಸಿಕೊಂಡು ಅಭಿವೃದ್ಧಿಗೆ ಬರಬಹುದು. ಈಚೀಚೆಗೆ ಕಸಬುದಾರರು ತಮ್ಮ ಕಸಬನ್ನು ವೃದ್ಧಿಪಡಿಸಿಕೊಳ್ಳುವುದಕ್ಕೆ ಮಾತ್ರವೇ ಅಲ್ಲದೆ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದಕ್ಕೂ ಪಾಶ್ಚಾತ್ಯ ದೇಶಗಳಲ್ಲಿ ಏರ್ಪಾಡುಗಳುಂಟಾಗಿವೆ. ಜನರು ಹಣವಿಲ್ಲದೆ ಬಡವರಾಗಿರಬಹುದು. ಆದರೆ ಬುದ್ಧಿಯಲ್ಲಿ ಬಡವರಾಗಿರಬೇಕಾದುದೇತಕ್ಕೆ?

ವಿದ್ಯಾಶಾಲೆಗಳು ಹೆಚ್ಚಿದಂತೆಲ್ಲಾ ರಾಜ್ಯದಲ್ಲಿ ಬಂದೀಖಾನೆಗಳು ಕಡಿಮೆಯಾಗುವುವೆಂದು ವಿಕ್ಟರ್ ಹ್ಯೂಗೋ ಎಂಬ ಪ್ರಾಜ್ಞನು ಹೇಳಿದ್ದಾನೆ. ೧೮೩೦ನೆಯ ಇಸವಿಯವರೆಗೂ ಇಂಗ್ಲೀಷರು ವಿದ್ಯೆಗೆ ಹೆಚ್ಚು ಗಮನಕೊ

ಡನೆ ಸಮ್ಮಂತೆಯೇ ಇರುತ್ತಿದ್ದರು  ಎಲ್ಲರೂ ಓದಲೇಬೇಕೆಂದು ಆಗ್ರ ಸರ್ಕಾರದ ವಿಧಿಯು ಏರ್ಪಟ್ಟಿತು. ಈಚೆಗೆ ಸಣ್ಣ ತರಗತಿಗಳಲ್ಲಿ ಓದುವವರ ಸಂಖ್ಯೆಯು ಒಂದಕ್ಕೆಂಟರಷ್ಟು ಹೆಚ್ಚಿತು. ಖೈದಿಗಳ ಸಂಖ್ಯೆಯು ನೇಕಡಾ ಅರುವತ್ತಕ್ಕಿಂತ ಹೆಚ್ಚಾಗಿಯೇ ಕಡಿಮೆಯಾಯಿತು. ಇದರಿಂದ ಪೋಲೀಸ್ ಸಿಬ್ಬಂದಿಯ ವೆಚ್ಚವೂ ಬಹಳ ತಗ್ಗಿತು. ತಪ್ಪಿತಸ್ಥರಾಗಿ ಸೆರೆ ಮನೆಗೆ ಹೋಗುತ್ತಿದ್ದ ಹುಡುಗರ ಸಂಖ್ಯೆಯೂ ದಿವಾಳಿಗಳ ಸಂಖ್ಯೆಯೂ ಅನಾಥಾಲಯಗಳ, ಅಲ್ಲಿನ ಜನಗಳ, ಮತ್ತು ಖರ್ಚುವೆಚ್ಚಗಳ ಸಂಖ್ಯೆಯೂ ಎಷ್ಟೋ ಮಟ್ಟಿಗೆ ಇಳಿದುಹೋಯಿತು. ಇಷ್ಟಕ್ಕೆಲ್ಲಾ ಕಾರಣವು ವಿದ್ಯಾಭ್ಯಾಸವೇ. ಮೌಢ್ಯಕ್ಕೂ ಪಾಪಕ್ಕೂ ಬಹಳ ಸ್ನೇಹ. ಒಂದು ಕಡಿಮೆಯಾದರೆ ಮತ್ತೊಂದೂ ಕಡಿಮೆಯಾಗುವುದು. ಆದರೆ ಪಾಪಕೃತ್ಯಗಳಿಗೆ ವಿದ್ಯೆಯಿಲ್ಲದುದೇ ಕಾರಣವಲ್ಲವೆಂದೂ ಕುಡಿತ, ಅಶಿಕ್ಷೆ ಮೊದಲಾದುವು ಕಾರಣವೆಂದೂ ಕೆಲವರು ಹೇಳುವರು. ಅದೂ ದಿಟ. ಆದರೆ ವಿದ್ಯೆಯಿಂದ ಅದೂ ತಪ್ಪುವುದಿಲ್ಲವೆ? ಮಕ್ಕಳು ಪಾಠಶಾಲೆಗೆ ಹೋಗುವುದರಿಂದ ಹಾದಿಬೀದಿಯಲ್ಲಿ ಕಲಿಯುತ್ತಿದ್ದ ದುಶ್ಚೇಷ್ಟೆಗಳೆಲ್ಲಾ ತಪ್ಪುವುವು  ಯಾವ ಮಹಾಪಾತಕಗಳೂ ಅವರಿಗೆ ಗೋಚರವಾಗುವುದಿಲ್ಲ. ನೈರ್ಮಲ್ಯ, ಸತ್ಯ, ದಯೆ, ಮೊದಲಾದ ಸುಶೀಲಗಳು ರೂಢಿಗೆ ಬರುವುವು. ಇವೆಲ್ಲಾ ವಿದ್ಯೆಯ ಫಲವಲ್ಲವೆ?

ಬರೀ ಓದುಬರಹ ಬಂದ ಮಾತ್ರಕ್ಕೇ ವಿದ್ಯೆಯೆಲ್ಲಾ ಬಂದಂತೆ ಆಗದು  ಇದು ವಿದ್ಯೆಯನ್ನು ಕಲಿಯುವುದಕ್ಕೆ ಒಂದು ಒಳ್ಳೆಯ ಮಾರ್ಗವೇ ಹೊರತು ನಾವು ಸೇರಬೇಕೆಂದಿರುವ ಊರೇ ಅಲ್ಲ. ಓದು ಬರಹಬರದಿದ್ದ ಅಬ್ರಹಾಮು, ಹೈದರಲ್ಲಿ ಮೊದಲಾದವರನೇಕರು ಲೋಕಪ್ರಸಿದ್ಧರಾಗಿರಲಿಲ್ಲವೇ? ಓದುಬರಹಗಳಿಂದ ಶುಕ ಪಾಠವು ನಡೆದು ಕೆಲವು ಪದಗಳು ಮಾತ್ರ ಗಟ್ಟಿಮಾಡಿದಂತಾದಾವು. ಇವಕ್ಕೆ ಮಾತ್ರ ಗಮನ ಕೊಟ್ಟು ಉಳಿದ ವಿಷಯಗಳನ್ನು ಉಪೇಕ್ಷಿಸಿದರೆ ಬಲಗೈಯನ್ನು ತಿರಸ್ಕರಿಸಿದಂತಾಗುವುದು.

ಪುಸ್ತಕಗಳಿಂದ ಕಲಿಯತಕ್ಕದ್ದು ಮಾತ್ರ ವಿದ್ಯೆಯೆಂದು ತಿಳಿಯಬಾರದು. ಇಂಥವಿದ್ಯೆಯಿಂದ ಲೋಕವ್ಯವಹಾರವು ಪ್ರಕೃತಿ ಪ್ರಪಂಚದ ಮಹಿಮೆಯೂ ಗೊತ್ತಾಗುವುದಿಲ್ಲ. ಉದ್ಭಿಜ್ಜಶಾಸ್ತ್ರಗಳನ್ನು ಮರಗಿಡಗಳ

ಮುಂದೆ ಓದಿದರೆ ಫಲಪುಷ್ಪಗಳು ದೊರೆತಾವೆ? ಆದುದರಿಂದ ಪ್ರಪಂಚದಲ್ಲಿ ಪ್ರಕೃತಿ ವಸ್ತುಗಳನ್ನು ಪ್ರತ್ಯಕ್ಷವಾಗಿ ಪರೀಕ್ಷಿಸಿ ತಿಳಿದುಕೊಳ್ಳುವುದೂ ಒಂದು ವಿಧವಾದ ವಿದ್ಯಾಭ್ಯಾಸವೇ ಸರಿ.

ವಿದ್ಯೆಯನ್ನು ಕಲಿಸುವ ಉಪಾಧ್ಯಾಯರ ಕೆಲಸವು ಬಹಳ ಜವಾಬ್ದಾರಿಯುಳ್ಳದು ಇದು ಬಹಳ ಕಷ್ಟವಾದುದರಿಂದ ಬೇಸರಪಡಿಸಿ ಸಾಕೆನ್ನಿಸುವುದು. ಮಕ್ಕಳ ಸಂಗಡ ಆಡುವುದೇ ಸಂತೋಷಕರ. ಆದರೆ ಅವರಿಗೆ ಪಾಠಗಳನ್ನು ಮುಖ್ಯವಾಗಿ ಗಣಿತ ವ್ಯಾಕರಣ ಮೊದಲಾದುವುಗಳನ್ನು ಬೋಧಿಸುವಾಗ ಉತ್ತೇಜನಕೊಟ್ಟು ಕುತೂಹಲವನ್ನು ಹುಟ್ಟಿಸಿ ಕೆಲಸಮಾಡುತ್ತ ಬುದ್ಧಿಸಂಸ್ಕಾರಮಾಡುವುದಾದರೂ ಎಂದಿಗೂ ಸುಲಭವಲ್ಲ. ವಿದ್ಯೆಯನ್ನು ಕಲಿಯುವುದರಲ್ಲಿ, ನ್ಯಾಯವಾದಿ, ಉಪಾಧ್ಯಾಯ ಅಥವಾ ವೈದ್ಯ ಇಂಥವರಾಗಬೇಕೆಂಬ ಉದ್ದೇಶಗಳು ಮುಖ್ಯವಲ್ಲ. ಸ್ವಂತವಾದ ಅಥವಾ ರಾಜಕೀಯವಾದ ಯಾವ ಕೆಲಸವನ್ನಾದರೂ ನ್ಯಾಯವಾಗಿಯೂ ಬುದ್ಧಿವಂತಿಕೆಯಿಂದಲೂ ಧಾರಾಳವಾಗಿ ನಿರ್ವಹಿಸಬಲ್ಲ ಶಕ್ತಿಯುಂಟಾಗುವ ಮಟ್ಟಿಗೆ ವಿದ್ಯೆಯಿಂದ ಫಲವಾಗಬೇಕು. ಮತ್ತು ದೇಶಾಭಿಮಾನ, ರಾಜಭಕ್ತಿ, ಆತ್ಮಸಂಯಮನ, ಪರಿಶುದ್ಧಿ ಇವೂ ಉಂಟಾಗಬೇಕು. ಮಕ್ಕಳಿಗೆ ಬರೀ ಪುಸ್ತಕಪಾಠಗಳನ್ನೇ ಕಲಿಸದೆ ಮರ, ಗಿಡ, ಬೆಟ್ಟ, ಗುಡ್ಡ, ಹೊಳೆ, ಆಕಾಶ, ನಕ್ಷತ್ರ, ಮೋಡ, ಗಾಳಿ, ಮಳೆ, ಪ್ರಾಣಿಗಳು ಇಂಥವನ್ನು ಪ್ರತ್ಯಕ್ಷವಾಗಿ ಬೋಧಿಸಬೇಕು. ಬರೀ ಪುಸ್ತಕಪಾಠದಲ್ಲಿ ಪ್ರತ್ಯಕ್ಷಾನುಭವಕ್ಕೂ ತನ್ಮೂಲಕವಾಗಿ ಪರಾಮರ್ಶಕ್ಕೂ ಅವಕಾಶವಿರುವುದಿಲ್ಲ. ಯಾವ ವಿಷಯವನ್ನೂ ಕಣ್ಣಿಂದ ನೋಡುವಷ್ಟು ಚೆನ್ನಾಗಿ ಪುಸ್ತಕಗಳಲ್ಲಿ ವರ್ಣಿಸಲಾಗುವುದಿಲ್ಲ. ಪ್ರತ್ಯಕ್ಷವಾದ ಪ್ರಕೃತಿಪಾಠಕ್ಕೆ ಹಳ್ಳಿಯ ಪ್ರಾಂತ್ಯಗಳಲ್ಲಿ ಸೌಕರ್ಯ ಹೆಚ್ಚು. ಪ್ರಕೃತಿಪಾಠವನ್ನು ಸಾಕ್ಷಾತ್ತಾಗಿ ಕಲಿಯುವ ಅಭ್ಯಾಸವನ್ನು ನಾವು ಪಡೆಯದಿರುವುದರಿಂದಲೇ ನಮ್ಮಲ್ಲಿ ಪಾಠಶಾಲೆಯನ್ನು ಬಿಟ್ಟನಂತರ ವಿದ್ಯಾಭ್ಯಾಸವು ನಿಂತೇ ಹೋಗುವುದು. ವಿದ್ಯಾಭ್ಯಾಸದ ವಿಚಾರದಲ್ಲಿ ಪ್ರೊಫೆಸರ್ ಹಕ್ಸ್ಲೀಯು ಹೀಗೆ ಹೇಳಿದ್ದಾನೆ. " ಹುಡುಗರು ೧೫-೧೬ ವಯಸ್ಸಿನೊಳಗೆ ಸ್ವಭಾಷೆಯನ್ನಾದರೂ ಚೆನ್ನಾಗಿ ಓದುವುದು, ಬರೆಯುವುದು, ಒಳ್ಳೆಯ ಕವಿಗಳ ಉದ್ಗ್ರಂಥಗಳನ್ನು ಗ್ರಹಿಸುವುದು, ಸ್ವದೇಶದ ಚರಿ

ತ್ರಿಯ ಮತ್ತು ಜನಗಳ ಸ್ಥಿತಿಗತಿಗಳ ವಿಚಾರವಾದಜ್ಞಾನ, ಭೌತಿಕಶಾಸ್ತ್ರದ ಮತ್ತು ಶಾರೀರಶಾಸ್ತ್ರದ ಮುಖ್ಯನಿಯಮಗಳಲ್ಲಿಯೂ ಅಂಕಗಣಿತ ರೇಖಾ ಗಣಿತಗಳಲ್ಲಿಯೂ ತಕ್ಕಮಟ್ಟಿಗಾದರೂ ತಿಳಿವಳಿಕೆ, ತರ್ಕಶಾಸ್ತ್ರವನ್ನು ತಕ್ಕ ಮಟ್ಟಿಗಾದರೂ ತಿಳಿದು ನಡೆಯುವುದು" ಲೋಕೆ ಎಂಬ ಇನ್ನೊಬ್ಬ ವಿದ್ವಾಂಸನು ಹೀಗೆ ಹೇಳಿದ್ದಾನೆ. ಪುಸ್ತಕಗಳನ್ನೋದಿದ ಮಾತ್ರಕ್ಕೇ ಜ್ಞಾನಾರ್ಜನೆಯಾಗದು, ಇದರ ಜತೆಗೆ ಆಲೋಚಿಸುವುದು, ಚರ್ಚಿಸುವುದು ಇವೆರಡೂ ಮುಖ್ಯ. ಏಕೆಂದರೆ:—ಪುಸ್ತಕಗಳಲ್ಲಿ ಅಪ್ರಸಕ್ತ ವಿಷಯಗಳು ಎಷ್ಟೋ ಇರಬಹುದಾದುದರಿಂದ ಅವುಗಳ ಸಾರವನ್ನು ಗ್ರಹಿಸಲು ಆಲೋಚನೆಯು ಆವಶ್ಯಕ. ಒಂದು ಕಟ್ಟಡವನ್ನು ಕಟ್ಟುವುದಕ್ಕೆ ಸಿದ್ಧವಾಗಿರುವ ಕಲ್ಲು, ಇಟ್ಟಿಗೆ, ಮರ ಮೊದಲಾದುವನ್ನು ಉಚಿತವಾದ ಸ್ಥಳಗಳಲ್ಲಿ ಸೇರಿಸುವಂತೆ ಆಲೋಚನೆಯ ಕೆಲಸವು ನಡೆಯುವುದು. ಕಟ್ಟಡದ ಪೂರ್ಣ ರಚನೆಯನ್ನು ನೋಡುತ್ತಲೂ ಕೊಠಡಿಗಳಲ್ಲಿ ಓಡಾಡುತ್ತಲೂ ಪ್ರತಿಯೊಂದು ಭಾಗವೂ ಹೊಂದಿಕೆಯಾಗಿಯೂ ಸರಿಸಮವಾಗಿಯೂ ಅಂದವಾಗಿಯೂ ಇದೆಯೋ ಎಂಬುದನ್ನು ಪರೀಕ್ಷಿಸಿ ತಿಳಿಯುತ್ತಲೂ ತೋರಿಬಂದ ನ್ಯೂನಾತಿರಿಕ್ತಗಳನ್ನು ಸರಿಮಾಡುವಂತೆ ಚರ್ಚೆಯ ಕೆಲಸವು ನಡೆಯುವುದು.

ವಿದ್ಯಾಭ್ಯಾಸಕ್ಕೋಸ್ಕರ ಹೆಚ್ಚು ದ್ರವ್ಯವು ವೆಚ್ಚವಾಗುವುದಲ್ಲಾ ಎಂದು ಯಾರೂ ಹಿಂಗೆಗೆಯಬಾರದು. ಏಕೆಂದರೆ:—ಬಡ್ಡಿಗೆ ಹಾಕಿದ ಹಣದಂತೆ ಇದು ಉತ್ತಮವಾದ ಪ್ರತಿಫಲವನ್ನು ಕೊಡುವುದು. ಮತ್ತು ಯಾವ ರಾಜ್ಯದಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚೋ ಆ ರಾಜ್ಯವು ಸರ್ವೋತ್ತಮಸ್ಥಿತಿಯಲ್ಲಿರುವುದು. ಈ ತತ್ತ್ವವನ್ನು ತಿಳಿದೇ ಉದಾರಿಗಳಾದ ನಮ್ಮ ಶ್ರೀಮನ್ಮಹಾರಾಜರವರ ಸರ್ಕಾರದವರು ನಮ್ಮ ದೇಶದಲ್ಲಿಯೂ ಸರ್ವರಿಗೂ ಬಲಾತ್ಕಾರದಿಂದಲಾದರೂ ವಿದ್ಯಾಭ್ಯಾಸವು ನಡೆದೇ ತೀರಬೇಕೆಂದು ವಿಧಿಗಳನ್ನು ಕಲ್ಪಿಸಿರುವರು. ಇದು ನಮ್ಮ ಪುಣ್ಯ. ಈ ಮಹಾನುಗ್ರಹವನ್ನುಪಯೋಗಿಸಿಕೊಂಡು ಶ್ರೇಯೋವೃದ್ಧಿಯನ್ನು ಪಡೆಯುವುದಕ್ಕೆ ನಾವೆಲ್ಲರೂ ಯತ್ನಿಸಬೇಕು.

## (34) ಪುಸ್ತಕಭಂಡಾರ.

ಹಲವು ಪುಸ್ತಕಗಳನ್ನು ಒಂದುಕಡೆ ಶೇಖರಿಸಿಟ್ಟುಕೊಂಡು ಅನೇಕರು ತಮತಮಗೆ ಬೇಕಾದುವನ್ನು ತೆಗೆದುಕೊಂಡು ಓದುತ್ತ ಸತ್ಕಾಲ

ಕ್ಷೇಪ ಮಾಡುವುದು ನಮ್ಮಲ್ಲಿ ವಿಶೇಷ ರೂಢಿಯಲ್ಲಿಲ್ಲವಾದರೂ ಕೇವಲ ನಾಗರಿಕತೆಯುಳ್ಳ ಪಾಶ್ಚಾತ್ಯರಾಜ್ಯಗಳಲ್ಲಿ ಬಳಕೆಯಲ್ಲಿವೆ. ಈ ವಿಷಯದಲ್ಲಿ ರಿಚರ್ಡ್‌ಡಿ. ಎಂಬ ಪ್ರಸಿದ್ಧನಾದ ಒಬ್ಬ ಪಂಡಿತನು ಈಗ್ಗೆ 500ವರ್ಷಗಳಿಗೆ ಮೊದಲೇ ಈ ರೀತಿಯಾಗಿ ಅಭಿಪ್ರಾಯಪಟ್ಟಿರುವನು—ಏನೆಂದರೆ ಪುಸ್ತಕಗಳು ಸರ್ವೋತ್ತಮವಾದ ಉಪಾಧ್ಯಾಯರು. ಇವರು ಕೋಪಿಸಿಕೊಳ್ಳದೆಯೂ ಬೆತ್ತ ಮೊದಲಾದುವುಗಳಿಂದ ಶಿಕ್ಷಿಸದೆಯೂ ಸಂಬಳವನ್ನು ಅಥವಾ ಅನ್ನವಸ್ತ್ರಾದಿಗಳನ್ನು ಕೇಳದೆಯೂ ಒಳ್ಳೆಯ ವಿಷಯಗಳನ್ನು ತಿಳಯಿಸುವರು. ನಾವಾಗಿ ಅವರ ಸಹಾಯವನ್ನು ಅಪೇಕ್ಷಿಸಿದರೆ ಸಾಕು. ಅವರೇನೋ ಸದಾ ಎಚ್ಚರವಾಗಿಯೂ ಸಿದ್ಧವಾಗಿಯೂ ಇರುವರು. ಇವರು ಮೌನವಾಗಿದ್ದೇ ನಮಗೆ ಬೋಧಿಸಬಲ್ಲರು. ನಮಗೆ ತಿಳಿಯದ ಅಂಶಗಳನ್ನು ಎಷ್ಟುಸಲ ಕೇಳದರೂ ಅವರು ಬೇಸರಗೊಳ್ಳುವುದಿಲ್ಲ, ಯಾವುದನ್ನೂ ಮುಚ್ಚಿಡದೆ ವ್ಯಕ್ತವಾಗಿ ತಿಳಯಿಸುವರು. ನಾವು ತಪ್ಪಾಗಿ ತಿಳದುಕೊಂಡರೆ ಅವರು ಅಸಮಾಧಾನದಿಂದ ಗೊಣಗುಟ್ಟುವುದಿಲ್ಲ.' ಇಂಥ ಪುಸ್ತಕಗಳುಳ್ಳ ಪುಸ್ತಕಭಂಡಾರವು ನವನಿಧಿಗಳ ಬೊಕ್ಕಸಕ್ಕಿಂತಲೂ ಬೆಲೆಯಾದುದು. ಇದಕ್ಕೆ ಸಮಾನವಾದುದು ಯಾವುದೂ ಇಲ್ಲ.

ನಿಶ್ಚಯಾಂಶಗಳು, ಸುಖ, ಕೌಶಲ, ಶಾಸ್ತ್ರವಿಚಾರ, ಭಕ್ತಿ ಇಂಥವನ್ನು ಪಡೆಯಬೇಕೆಂಬುವರು ಪುಸ್ತಕಗಳನ್ನು ಚೆನ್ನಾಗಿ ಪ್ರೀತಿಸಬೇಕು. ಪುಸ್ತಕಗಳ ಪ್ರಚಾರವು ಕಡಿಮೆಯಾಗಿದ್ದ ಅಷ್ಟು ಹಿಂದಿನ ಕಾಲದಲ್ಲಿ ಕೂಡ ಈ ವಿಷಯವು ಅಷ್ಟು ಶ್ಲಾಘ್ಯವಾಗಿರುವಲ್ಲಿ ಈಗ ಅದನ್ನು ಕುರಿತು ಎಷ್ಟು ಹೇಳದರೂ ತೀರದು. ನಮ್ಮಲ್ಲಿ ಪೂರ್ವದ ಪುಸ್ತಕಗಳು ಓಲೆಯುಗರಿಗಳ ರೂಪದಲ್ಲಿರುತಿದ್ದುದರಿಂದ ಅವನ್ನು ಹಿಡಿದುಕೊಳ್ಳುವುದಕ್ಕೂ ಓದುವುದಕ್ಕೂ ಓದುವುದಕ್ಕಾಗಿ ಸಿಕ್ಕಿದ ಕಡೆಗೆ ತೆಗೆದುಕೊಂಡು ಹೋಗುವುದಕ್ಕೂ ಸೌಲಭ್ಯವಿರಲಿಲ್ಲ. ಈಗಿನವಾದರೊ ಬಹಳ ಅನುಕೂಲವಾಗಿರುವುವು. ಪೂರ್ವದಲ್ಲಿ ಪುಸ್ತಕಗಳನ್ನು ಕೈಬರಹದಿಂದಲೇ ಬರೆಯಬೇಕಾಗಿದ್ದಿತು. ಆದುದರಿಂದ ಒಂದು ಗ್ರಂಥವನ್ನು ಅನೇಕರು ಏಕಕಾಲದಲ್ಲಿ ಓದುವುದಕ್ಕೆ ಆಗುತ್ತಿರಲಿಲ್ಲ. ಇತ್ಯಾದಿ ಕಾರಣಗಳಿಂದ ಅವಕ್ಕೆ ಕ್ರಯವು ಹೆಚ್ಚಾಗಿದ್ದಿತು. ಬಡವರಂತು ಅವನ್ನು ಕೊಳ್ಳುವುದು ಅಸಾಧ್ಯವಾಗಿ

ದ್ದಿತು. ಈಗ ಅಚ್ಚಿನಲ್ಲಿ ಒಂದೊಂದು ಪುಸ್ತಕಗಳನ್ನು ಲಕ್ಷಾಂತರ ಪ್ರತಿಗಳಾಗಿ ಮುದ್ರಿಸಬಹುದು. ಇದರಿಂದ ಹಿಂದಿನ ಕಷ್ಟಗಳೆಲ್ಲಾ ತಪ್ಪಿ ಎಂಥ ಬಡವರಿಗೂ ಅನುಕೂಲವಾಗಿದೆ. ಪೂರ್ವದಲ್ಲಿ ಗ್ರಂಥಪ್ರಚಾರಕ್ಕೆ ಅಷ್ಟು ಕಷ್ಟವಾಗಿದ್ದುದರಿಂದ ಹೆಚ್ಚು ಗ್ರಂಥಗಳು ಹುಟ್ಟುವುದಕ್ಕೆ ಅವಕಾಶವಿರಲಿಲ್ಲ. ಈಗ ಈ ಸೌಕರ್ಯಗಳು ಹೆಚ್ಚಾಗಿರುವುದರಿಂದ ಎಷ್ಟೋ ಸಹಸ್ರವಿಷಯಗಳ ಮೇಲೆ ಗ್ರಂಥಗಳು ಹುಟ್ಟಿವೆ. ಅಲ್ಲದೆ ಪ್ರಾಚೀನಕಾಲದಲ್ಲಿದ್ದು ಕೈಬಿಟ್ಟುಹೋಗಿದ್ದ ಅನೇಕ ಶಾಸ್ತ್ರವಿಷಯಗಳು, ಚರಿತ್ರೆ ಇತ್ಯಾದಿಗಳನ್ನೆಲ್ಲಾ ಹುಡುಕಿ ಶೋಧಿಸಿ ಮುದ್ರಿಸುತ್ತಿದಾರೆ. ನಮ್ಮ ಕನ್ನಡ ಭಾಷೆಯನ್ನಾಡುವ ಜನಗಳ ಸಂಖ್ಯೆಯು ಕಡಿಮೆಯಾದುದರಿಂದಲೂ ಅವರಲ್ಲೂ ವಿದ್ಯಾವಂತರು ಬಹಳ ಸ್ವಲ್ಪ ಜನವಾದುದರಿಂದಲೂ ವಿದ್ಯಾವಂತರಲ್ಲೂ ಅನೇಕರು ಪ್ರಪಂಚದಲ್ಲೆಲ್ಲಾ ಹರಡಿರುವ ಇಂಗ್ಲಿಷ್ ಭಾಷೆಯನ್ನೇ ಓದಿ ಅದರಿಂದಲೇ ಸಮಸ್ತ ವಿಷಯಗಳನ್ನೂ ತಿಳಿದುಕೊಳ್ಳುತ್ತಿರುವರಾಗಿ ತಮ್ಮ ಮಾತೃ ಭಾಷೆಯನ್ನು ಕೈಬಿಟ್ಟಿರುವುದರಿಂದಲೂ ನಾವು ಈ ವಿಷಯದಲ್ಲಿ ಬಹಳ ಹಿಂದಾಗಿದ್ದೇವೆ, ಪೂರ್ವದಿಂದ ಇರುವ ಕನ್ನಡ ಗ್ರಂಥಗಳು ಭಾಷಾ ಚಾತುರ್ಯಕ್ಕೂ ವರ್ಣನಾವೈಖರಿಗೂ ಮಾತ್ರ ಹೆಚ್ಚು ಅವಕಾಶವನ್ನು ಕೊಟ್ಟಿರುವುವು. ಈ ಕಾಲದ ನಾಗರಿಕತೆಗೂ ಶಾಸ್ತ್ರಪರಿಚಯಕ್ಕೂ ಹಲವು ಬಗೆಯ ವಿನೋದಗಳಿಗೂ ಸತ್ಕಾಲಕ್ಷೇಪಕ್ಕೂ ಅನುಕೂಲವಾದ ಗ್ರಂಥಗಳು ನಮ್ಮಲ್ಲಿ ಇನ್ನೂ ಬಹಳ ಮಟ್ಟಿಗೂ ಅವಶ್ಯಕವಾಗಿವೆ. ಈಚೀಚೆಗೆ ಕೆಲವು ಪಂಡಿತರು ಈ ವಿಧವಾದ ಗ್ರಂಥಪ್ರಚಾರಕ್ಕಾಗಿ ಸಾಹಸಪಡುತ್ತಿರುವರು. ಮಾಸಪತ್ರಿಕೆಗಳು ಪೂರ್ವಕಾಲದ ಮತ್ತು ಈಗಿನ ಗ್ರಂಥಗಳಿಗೆ ಉದಾರಾಶ್ರಯವನ್ನು ಕೊಡುತ್ತಿರುವುವು. ಇಂಗ್ಲಿಷ್ ಕನ್ನಡಗಳೆರಡನ್ನೂ ತಿಳಿದವರು ಇಂಗ್ಲಿಷಿನಲ್ಲಿರುವ ಗ್ರಂಥಗಳ ಸಾರವನ್ನು ನಮ್ಮ ಮಾತೃ ಭಾಷೆಗೆ ತರಲು ಈಗೀಗ ಯತ್ನಿಸುತ್ತಿದ್ದಾರೆ. ಸರ್ಕಾರದ ಪ್ರೋತ್ಸಾಹವು ಕೆಲವರಿಗೆ ಅಲ್ಪಸ್ವಲ್ಪವಾಗಿ ದೊರೆಯುತ್ತಿದೆ.

ಜನಗಳಿಗೆ ಜ್ಞಾನಗ್ರಾಸವನ್ನು ಕೊಟ್ಟು ಉಪಕರಿಸುವ ಈ ಪುಸ್ತಕಭಂಡಾರಗಳು, ವಾಚಕಮಂದಿರಗಳಿಗೂ ವಸ್ತುಪ್ರದರ್ಶನಶಾಲೆಗಳಿಗೂ, ವಿದ್ಯಾಶಾಲೆಗಳಿಗೂ, ವರ್ತಮಾನಪತ್ರಿಕೆಗಳಿಗೂ ಒಟ್ಟು ದೇಶಕ್ಕೆಲ್ಲಾ ಲಾಭ

ಕರವೇ ಹೊರತು ಎಂದಿಗೂ ನಷ್ಟವಲ್ಲ. ಪ್ರತಿಯೊಂದು ಊರಿನಲ್ಲೂ ಒಂದೊಂದಾದರೂ ಪುಸ್ತಕಭಂಡಾರವಿದ್ದೇ ಇರಬೇಕು. ದೊಡ್ಡ ಪಟ್ಟಣಗಳಲ್ಲಂತು ಜನಸಂಖ್ಯೆಗೆ ತಕ್ಕಂತೆ ಹೆಚ್ಚಾಗಿರಬೇಕು. ಪ್ರಕೃತದಲ್ಲಿ ನಮ್ಮ ದೇಶದ ಅನೇಕ ಊರುಗಳಲ್ಲಿ ಓದುಬರಹ ಬಲ್ಲವರ ಸಂಖ್ಯೆಯು ಬಹು ಸ್ವಲ್ಪ. ಅಲ್ಲಿ ಪುಸ್ತಕಭಂಡಾರವು ಅನಾವಶ್ಯಕ. ಆದರೆ ಓದುಬರಹ ಬಲ್ಲವರನೇಕರಿರುವ ತಾಲ್ಲೂಕು, ಸ್ಥಳಗಳಲ್ಲಿಯಾದರೂ ಪ್ರಜೆಗಳ ಉಪಯೋಗಕ್ಕಾಗಿ ಒಂದೊಂದು ಇರುವುದು ಆವಶ್ಯಕ. ಇದರಿಂದ ಅಲ್ಲಿನವರು ಮಾತ್ರವಲ್ಲದೆ ಸುತ್ತುಮುತ್ತಣ ಊರುಗಳವರೂ ಪ್ರಯೋಜನವನ್ನು ಪಡೆಯಬಹುದು.

ನೆಯ್ಗೆ ಬರೆವಣಿಗೆ ಮೊದಲಾದ್ದನ್ನು ಮಾಡುವ ಕೆಲಸಗಾರರು ಮಾಡಿದುದನ್ನೇ ಮಾಡುತ್ತ ನಿತ್ಯವೂ ಬಹಳ ಬೇಸರ ಪಡುತ್ತಿರುವರಾದುದರಿಂದ ಅಂಥವರಿಗೆ ವಿನೋದ ವಿಶ್ರಾಂತಿಗಳಿಗೆ ಇದರಿಂದ ಬಹಳ ಅನುಕೂಲವುಂಟು, ಹೀಗೆಯೇ ಹೊಲಗಳಲ್ಲಿ ಕೆಲಸಮಾಡಿದಣಿದಿರುವ ರೈತರೂ ಅಂಗಡಿಗಳಲ್ಲೇ ಕುಳಿತು ಜುಗುಪ್ಸೆ ಪಡುತ್ತಿರುವ ವರ್ತಕರೂ ಕೆಲಸ ಮಾಡಿ ಬಂದ ಕೂಲಿಯವರೂ ತಮ್ಮ ವಿರಾಮ ಕಾಲವನ್ನೆಲ್ಲಾ ವ್ಯರ್ಥವಾಗಿ ಕಳೆಯದೆ ಅಲ್ಲಲ್ಲಿ ಸರ್ಕಾರದವರು ಏರ್ಪಡಿಸಿರುವ ರಾತ್ರಿಯ ಪಾಠಶಾಲೆಗಳಲ್ಲಾದರೂ ಓದುಬರಹಗಳನ್ನು ಕಲಿತು ಬಳಿಕ ಪುಸ್ತಕ ಭಂಡಾರಗಳಿಂದ ಸ್ವತಃ ಜ್ಞಾನವನ್ನು ಗಳಿಸಿಕೊಳ್ಳಬಹುದು. ಬಾಲಕರ ವಿದ್ಯಾಭ್ಯಾಸಕ್ಕೆ ಶಾಲೆಗಳುಂಟಷ್ಟೆ ವಯಸ್ಕರಿಗಾದರೋ ಪುಸ್ತಕಭಂಡಾರಗಳೇ ಪಾಠಶಾಲೆಗಳು ಪುಸ್ತಕಗಳನ್ನು ಓದಿದರೆ ಯಾವ ಐಶ್ವರ್ಯದಿಂದಲೂ ಪಡೆಯಲಾರದಂಥ ಅಪಾರವಾದ ಆನಂದವುಂಟಾಗುವುದು. ಪ್ರಾಪ್ತವಯಸ್ಕರು ದುಡಿದು ತಮ್ಮ ಜೀವನವನ್ನು ಸಂಪಾದಿಸಿಕೊಂಡ ಮಾತ್ರಕ್ಕೇ ಕೃತಕೃತ್ಯರಾಗದೆ ಓದುವುದರಿಂದ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು. ಪಾಶ್ಚಾತ್ಯರು ಕೈಗಾರಿಕೆಗಳಲ್ಲಿ ದಕ್ಷರು, ಆದರೆ ಅವರು ಅಷ್ಟಕ್ಕೇ ತೃಪ್ತರಾಗಿ ತಿಳವಳಿಕೆಯನ್ನು ಹೆಚ್ಚಿಸಿಕೊಳ್ಳದಿದ್ದರೆ ಲೋಕದಲ್ಲಿ ಇಷ್ಟು ಪ್ರಾಶಸ್ತ್ಯವನ್ನು ಪಡೆಯುತ್ತಿದ್ದರೆ? ಅಷ್ಟೇಕೆ ? ಕೈಗಾರಿಕೆಗಳಲ್ಲಿ ಅಷ್ಟು ಕುಶಲರಾಗುವುದಕ್ಕೂ ವಿದ್ಯೆಯೇ ಕಾರಣವಲ್ಲವೆ ? ನೇಯುವ ಯಂತ್ರವನ್ನು ಕಂಡು ಹಿಡಿದ ಸರ್‌ರಿಚರ್ಡ್ ಆರ್ಕ್‌ರೈಟ್ ಹಜಾಮನ

ಮಗನು ರೈಲ್ವೆ ಮೊದಲಾದುವಕ್ಕೆ ಅನುಕೂಲವಾದ ಹಬೆಯ ಯಂತ್ರವನ್ನು ಕಂಡು ಜಾರ್ಜ್‌ಸ್ಟೀವನ್‌ಸನ್ ದನಕಾಯುತ್ತಿದ್ದ ಹುಡುಗನು. ಇವರೆಲ್ಲಾ ಸ್ವಂತವ್ಯಾಸಂಗದಿಂದಲೇ ಮುಂದಕ್ಕೆ ಬಂದವರು. ಪ್ರಪಂಚದಲ್ಲಿ ಇವರುಗಳ ಉಪಕಾರವನ್ನು ಪಡೆಯದಿದ್ದವರೇ ವಿರಳ.

ಅಂತು ಜ್ಞಾನಾರ್ಜನೆಗೆ ವಿದ್ಯೆಯೇ ಮುಖ್ಯವಾದ ಮಾರ್ಗವು, ಅದು ಪುಸ್ತಕಗಳಿಂದ ಸುಲಭಸಾಧ್ಯ. ಅಂಥಪುಸ್ತಕಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುತ್ತ ಬಂದರೆ ಈವುದ್ದೇಶವು ಕೈಗೂಡುವುದಲ್ಲದೆ ನಾಗರಿಕತೆಯೂ ಹೆಚ್ಚಿ ದೇಶಾಭಿವೃದ್ಧಿಗೆ ಅವಕಾಶವಾಗುವುದು. ಪುಸ್ತಕಗಳನ್ನೋದುವ ಅಭ್ಯಾಸವೊಂದಿದ್ದರೆ ಎಂಥ ದುಃಖಗಳಾದರೂ ಮರೆಯಬಹುದು. ಕುಳಿತಿದ್ದ ಕಡೆಯೇ ಪ್ರಪಂಚವನ್ನೆಲ್ಲಾ ನೋಡಬಹುದು. ಮಹಾತ್ಮರ ಸಂಗಡ ಮಾತಾಡಬಹುದು ಇಷ್ಟೇ ಅಲ್ಲ. ಸಾವಿರಾರು ವರ್ಷಗಳ ಹಿಂದೆ ಇದ್ದವರ ಸ್ಥಿತಿಗಳನ್ನೂ ಭೂಮಿಯ ಅಂತರ್ಗರ್ಭದಲ್ಲಿರುವ ಅಂಶಗಳನ್ನೂ ಜನಾಂಗಗಳ ಪೂರ್ವೋತ್ತರಗಳನ್ನೂ ತಿಳಿಯ ಬಹುದು. ನಮ್ಮ ಮನಸ್ಸು ಯಾವ ಚಿಂತೆಗೂ ಈಡಾಗದಂತೆ ನೋಡಿಕೊಳ್ಳಬಹುದು. ಗ್ರಂಥಗಳು ದೀರ್ಘಾಯುಸ್ಸನ್ನು ಪಡೆದಿವೆ, ಈ ಕಾಲದಲ್ಲಂತು ಅದಕ್ಕೆ ಏನು ಚ್ಯುತಿಯಿಲ್ಲ. ಹೇಗೆಂದರೆ—ಒಂದೊಂದು ಗ್ರಂಥವೂ ಸಾವಿರಾರು ಪ್ರತಿಗಳಾಗಿ ಮುದ್ರಿಸಲ್ಪಡುವುದರಿಂದ ಕೆಲವು ಪ್ರತಿಗಳು ಒಂದು ವೇಳೆ ನಾಶವಾದರೆ ಮತ್ತೆ ಕೆಲವಾದರೂ ಇದ್ದೇ ಇರುವುವು.

## (35). ಸ್ವಂತವ್ಯಾಸಂಗ

ನಮ್ಮಲ್ಲಿರುವ ಸಕಲ ಶಕ್ತಿಗಳನ್ನೂ ವೃದ್ಧಿಪಡಿಸುವುದೇ ವಿದ್ಯಾಭ್ಯಾಸ. ಇದು ತೊಟ್ಟಿಲಿನಲ್ಲಿ ಪ್ರಾರಂಭವಾಗಿ ಪಾಠಶಾಲೆಯಲ್ಲಿ ವೃದ್ಧಿಯಾಗುವುದು. ಆದರೆ ಅಲ್ಲಿಗೇ ನಿಲ್ಲದೆ ನಮ್ಮ ಜೀವಿತ ಕಾಲದಲ್ಲೆಲ್ಲಾ ನಡೆಯುತ್ತಲೇ ಇರುವುದು. ವಿದ್ಯಾಭ್ಯಾಸದಲ್ಲಿ ಎರಡುವಿಧಗಳು ಉಂಟು, ಒಂದನೆಯದು ಇತರರಿಂದ ಕಲಿಯುವುದು. ಎರಡನೆಯದು ಸ್ವಪ್ರಯತ್ನದಿಂದಲೇ ಕಲಿಯುವುದು. ಒಂದನೆಯದಕ್ಕಿಂತಲೂ ಎರಡನೆಯದು ಮುಖ್ಯ. ಯಾರು ಎಷ್ಟೇ ಸುಮ್ಮನಿದ್ದರೂ ಅವರ ಮನಸ್ಸೇನೋ ಸದಾ ಏನಾದರೊಂದು

ವಿಷಯುವನ್ನು ಕುರಿತು ಆಲೋಚಿಸುತ್ತ ಹೊಸ ಹೊಸ ಸಂಗತಿಗಳನ್ನು ತಿಳದು ಕೊಳ್ಳುತ್ತಲೇ ಇರುವುದು. ಇದೂಜ್ಞಾನಾರ್ಜನೆಯೇ.

ಅನೇಕರು ಶಾಲೆಯಲ್ಲಿ ಓದುವಾಗ ಪಟುವಾಗಿರುವುದಿಲ್ಲ. ಆದ ಮಾತ್ರಕ್ಕೇ ಅವರು ನಾಕರಾಗಬಾರದು, ಏಕೆಂದರೆ—ಬಳ್ಳೆಯು ಬುದ್ಧಿಯು ಬೆಳೆಯುವುದು ನಿದಾನ. ದೀರ್ಘಜೀವಿಗಳಾಗಿರುವ ತೆಂಗುಮೊದಲಾದ ಘನ ವೃಕ್ಷಗಳು ಫಲಬಿಡಲು ಹೆಚ್ಚು ಕಾಲವು ಬೇಕಾಗುವುದಿಲ್ಲವೆ? ಆದರೆ ಸ್ವಲ್ಪವೂ ಕಷ್ಟಪಟ್ಟು ಓದದೆಯೇ ಇದ್ದರೆ ಅದು ನಾಚಿಕೆಗೇಡು. ಹಿಡಿದು ದನ್ನು ಬಿಡದೆ ನೆರವೇರಿಸುವ ಅಭ್ಯಾಸವೊಂದಿದ್ದರೆ ಸಾಕು. ಅಂಥವರೆಷ್ಟೋ ಮಂದಿ ಶಾಲೆಯಲ್ಲಿ ಪ್ರಕಾಶಕ್ಕೆ ಬಾರದಿದ್ದರೂ ಮುಂದಕ್ಕೆ ಬಹಳ ಅಭಿವೃದ್ಧಿಗೆ ಬಂದಿದ್ದಾರೆ. ಡ್ಯೂಕ್ ಆವ್ ವೆಲಿಂಗ್ಟನ್ ನೆಪೋಲಿಯನ್ ಸರ್ ಐಸಾಕ್ ನ್ಯೂಟನ್ ಕ್ಲೈವ್, ಸರ್‌ವಾಲ್ಟರ್ ಸ್ಕಾಟ್, ವೆದ್ದಭಟ್ಟ ಇವರೆಲ್ಲಾ ಮಂಕು ಹುಡುಗರಾಗಿದ್ದವರೇ. ಬಳಿಕ ಅವರು ಎಂಥೆಂಥ ಕೆಲಸಗಳನ್ನು ಮಾಡಿ ಎಷ್ಟುಮಟ್ಟಿಗೆ ಜಗತ್ಪ್ರಸಿದ್ಧರಾಗಿರುವರೋ ನೋಡಿ! ಹುಡುಗರ ಸ್ವಭಾವದಲ್ಲಿ ಏನೇನೂ ಪಾಟವಿಲ್ಲದಿದ್ದರೆ ಎಷ್ಟುಕಷ್ಟಪಟ್ಟರೂ ವ್ಯರ್ಥವೆಂಬುದು ಸ್ವಲ್ಪಮಟ್ಟಿಗೆ ದಿಟ. ಆದರೆ ಕಷ್ಟಪಟ್ಟುಕೆಲಸಮಾಡ ದಿದ್ದರೆ ಎಂಥಬಳ್ಳೆಯು ಬುದ್ಧಿವಂತಿಕೆಯಿದ್ದರೂ ನಿಷ್ಫಲವೇ. ಕೇವಲ ಚಟು ವಟಿಕೆಯೂ ಚುರುಕುಬುದ್ಧಿಯೂ ಉಳ್ಳವರಲ್ಲನೇಕರು ಆರೋಗ್ಯ, ಒಳ್ಳೆಯನಡತೆ, ಕಷ್ಟಪಟ್ಟುಕೆಲಸಮಾಡುವಿಕೆ; ಇಂಥವುಗಳಿಲ್ಲದೆ ಕೆಟ್ಟು ಹೋಗಿ ಅಪ್ರಯೋಜಕರಾಗಿರುವುದು ಮಾತ್ರವಲ್ಲದೆ ಲೋಕ ಕಂಟಕರಾಗುವ ಸಂಭವವೂ ಉಂಟು.

ಬುದ್ಧಿಯಲ್ಲಿ ಹಿಂದಾದರೂ ಒಳ್ಳೆಯನಡತೆಯನ್ನು ಪಡೆದು, ಕಷ್ಟ ಪಟ್ಟುಕೆಲಸಮಾಡಿರತಕ್ಕವರೇ ಲೋಕದಲ್ಲಿ ಪ್ರಸಿದ್ಧರಾಗಿರತಕ್ಕವರು. ವಿದ್ಯೆ ಯಿಂದ ತಿಳವಳಿಕೆ ಹೆಚ್ಚಿದಷ್ಟೂ ಅನ್ಯಾಯಗಳೂ ಅನರ್ಥಗಳೂ ನಡೆಯುವುದ ಕ್ಕೆ ಹೆಚ್ಚಾಗಿ ಅವಕಾಶವಾಗುವುದೆಂದೂ ಮೌಢ್ಯವಿದ್ದರೆ ಸಾಧುತ್ವವಿರುವುದೆಂ ದು ಕೆಲವರು ಹೇಳುವರು. ಹಾಗೆಂದು ಒಂದು ವೇಳೆ ಮನುಷ್ಯನಿಗಿರುವ ಜ್ಞಾ ನವನ್ನು ತೆಗೆದು ಬಿಟ್ಟರೆ ಅವನು ಕಾಡುಮೃಗಗಳಂತೆ ಅಪಾಯಕರವಾದ ದುಶ್ಚೇಷ್ಟೆಗಳನ್ನು ಮಾಡಬಲ್ಲವನಾಗುವನೇವಿನಾ ಎಂದಿಗೂ ಸಭ್ಯನಾಗಲಾ

ರಸು. ಅಲ್ಲದೆ ಅವನು ಜ್ಞಾನವನ್ನು ಉದಾಸೀನ ಮಾಡಿದರೆ ಅವನಲ್ಲಿ ಮಗುವಿನ ಅಜ್ಞಾನವೂ ವಯಸ್ಕರ ಅರಿಷಡ್ವರ್ಗಗಳೂ ಸೇರಿರುವುವು.

ಬರೀ ಜೀವಿಕೆಗಾಗಿ ಕೆಲವುಕಾಲಮಾತ್ರಶಾಲೆಯಲ್ಲಿ ಓದಿಬಿಟ್ಟರೆ ಮುಗಿಯಲಿಲ್ಲ, ಬುದ್ಧಿಕೌಶಲ, ಆತ್ಮಸಂಯಮನ, ನ್ಯಾಯಪರತೆ ವಿವೇಕ, ಇಂಥಾದ್ದೆಲ್ಲಾ ವಿದ್ಯೆಯಿಂದಲೇ ಲಭಿಸಬೇಕು. ಆದುದರಿಂದ ಇದಕ್ಕಾಗಿ ಸ್ವಂತವ್ಯಾಸಂಗವೂ ಆವಶ್ಯಕ. ವಿದ್ಯೆಯನ್ನು ಕಲಿತರೆ ನಮ್ಮ ಪುರಾತನರ ಅನುಭವಾಮೃತಗಳನ್ನು ತಿಳಿಯಲು ಅನುಕೂಲವುಂಟು. ಇದರಿಂದ ನಾವು ಪಡಬೇಕಾಗುತಿದ್ದ ಎಷ್ಟೋ ಕಷ್ಟಗಳು ತಪ್ಪುವುವು. ಸ್ವಂತ ಅನುಭವವೇನೋ ಮುಖ್ಯವಾದುದೇ, ಆದರೆ ಬರೀ ಸ್ವಾನುಭವವನ್ನೇ ನಂಬಿದವನು. ದಡ್ಡನಾಗುವನು ನಾವು ಶಾಶ್ವತವಾಗಿ ಬದುಕುವೆವೆಂಬ ಭಾವನೆಯಿಂದ ಜ್ಞಾನವನ್ನುಗಳಿಸಬೇಕು. ನಾಳೆಗೇ ಆಯುಸ್ಸುತೀರುವುದೆಂಬ ಭಯದಿಂದ ನಡೆತೆಯನ್ನು ಆಚರಿಸಬೇಕು.

ವಿದ್ಯೆಯನ್ನು ಕಲಿಯುವುದರಲ್ಲಿ ಮೊಟ್ಟ ಮೊದಲು ಒಳ್ಳೆಯ ಅಸ್ತಿವಾರವನ್ನು ಹಾಕಿಕೊಳ್ಳಬೇಕು. ಇಲ್ಲದಿದ್ದರೆ ಮುಂದಕ್ಕೆ ಎಲ್ಲವೂ ಕೆಟ್ಟುಹೋಗುವುದು. ಪುಸ್ತಕಗಳಲ್ಲಿ ಮತ್ತು ಅಭಿಪ್ರಾಯಗಳಲ್ಲಿ ಕಂಡುಬರುವ ಉತ್ತಮವಾದ ಅಂಶಗಳನ್ನೆಲ್ಲಾ ಚೆನ್ನಾಗಿ ಗ್ರಹಿಸಬೇಕು. ಇತರರು ನಮಗಿಂತ ಹೆಚ್ಚಾಗಿ ತಿಳಿದಿದ್ದರೆನಾವು ನಾಚಿಕೆಪಡಬಾರದು. ಆದರೆ ನಮ್ಮಿಂದ ಸಾಧ್ಯವಾದಷ್ಟನ್ನಾದರೂ ನಾವು ಕಲಿಯದಿದ್ದರೆ ಅವಮಾನ ತಿಳವಳಿಕೆಗಿಂತಲೂ ಬುದ್ಧಿವಂತಿಕೆಯು ಶ್ರೇಷ್ಠವಾದುದೆಂಬುದು ದಿಟ. ಆದರೆ ಒಂದನೆಯದು ಪ್ರಯತ್ನದಿಂದ ಬರತಕ್ಕುದು, ಎರಡನೆಯದು ಪೂರ್ವ ಪುಣ್ಯದಿಂದ ಬರತಕ್ಕುದು. ಇವೆರಡರ ಸಹಾಯದಿಂದ ಮಾಡಿದ ಕೆಲಸವು ಚೆನ್ನಾಗಿ ನೆರವೇರುವುದು ; ಇಂಥಕೆಲಸವು ಜನರಿಗೆ ಏನಾದರೊಂದು ಸಹಾಯವನ್ನು ಅಂದರೆ ಫಲವನ್ನು ಕೊಡುವುದಾಗಿಯೋ ಅಥವಾ ಅವರ ಕಷ್ಟವನ್ನು ಕಡಿಮೆಮಾಡುವುದಾಗಿಯೋ ಅಥವಾ ತತ್ತ್ವವನ್ನು ಹೊರಪಡಿಸುವುದಾಗಿಯೋ ಇರಬೇಕು,

ಯಾವುದಕ್ಕೂ ಜ್ಞಾನವು ಮುಖ್ಯವಾದ ಬಲವು. ವಿದ್ಯುಚ್ಛಕ್ತಿಯಿಂದ ಆದ ಟೆಲಿಫೋನ್, ಟೆಲಿಗ್ರಾಫುಗಳಿಂದ ಕಾಲವು ಕೂಡಿಬರುವುದು. ಬರೆವಣಿ

ಗೆಯಿಂದ. ಮಾತಾಡುವ ಮತ್ತು ನಡೆಯುವ ಕಷ್ಟವು ತಪ್ಪಿದೆ. ಮಿತವ್ಯಯದ ಪರಿಜ್ಞಾನದಿಂದ ಲಾಭವನ್ನು ಪಡೆಯಬಹುದು. ಆರೋಗ್ಯ ಸೂತ್ರಗಳಿಂದ ಆಯುರಾರೋಗ್ಯಗಳನ್ನು ಕಾಪಾಡಿಕೊಳ್ಳಬಹುದು. ಆತ್ಮಜ್ಞಾನದಿಂದ ಮೋಕ್ಷವನ್ನೇ ಪಡೆಯಬಹುದು. ಇಷ್ಟರಮೇಲೆ ತಿಳವಳಿಕೆಗೆ ಅಸಾಧ್ಯವಾದುದು ಇನ್ನು ಯಾವುದು ತಾನೆಉಂಟು ! ಲೆಕ್ಕ, ಚರಿತ್ರೆ ಭಾಷಾಗ್ರಂಥಗಳು ಇವು ಜ್ಞಾನಾರ್ಜನೆಯಲ್ಲಿ ಆಸಕ್ತಿಯನ್ನು ಹುಟ್ಟಿಸುವ ಮಾರ್ಗಗಳೇ ವಿನಾ ಜ್ಞಾನಸ್ವರೂಪವೇ ಅಲ್ಲ. ಲೋಕದಲ್ಲಿ ಮಹಾತ್ಮರನೇಕರು ತಮ್ಮ ತಿಳವಳಿಕೆಯ ಬಲದಿಂದ ಎಷ್ಟೋ ಹೊಸಸಂಗತಿಗಳನ್ನು ಕಂಡುಹಿಡಿದಿರುವುದು. ಹಿಂದಿನವರೆಗೆ ಗೋಚರವಾಗದಿದ್ದುದನ್ನು ಹೊರಪಡಿಸುವುದು, ನಮಗೂ ನಮ್ಮ ಹಿಂದಿನವರಿಗೂ ಎಷ್ಟೋ ಸಹಾಯವಾಗಿದೆ. ಅಂಥ ಪುಣ್ಯಾತ್ಮರೊಳಗೆ ಸೇರಿದ ಶಾಸ್ತ್ರಕಾರರುಗಳಲ್ಲಿ ಅನೇಕರ ಹೆಸರು ಕೂಡ ನಮಗೆ ಗೊತ್ತಿಲ್ಲ. ಅವರು ಯಾವ ಸ್ವಾರ್ಥಪರತೆಯನ್ನು ಪಡೆಯದೆ ಪರಾರ್ಥಕ್ಕಾಗಿಯೇ ಬಹಳ ಕಷ್ಟಪಟ್ಟು ತತ್ತ್ವಗಳನ್ನು ಕಂಡು ಹಿಡಿದಿರುವರು. ನಾವು ಅವರಿಗೆಷ್ಟು ಕೃತಜ್ಞರಾಗಿರಬೇಕು ! ಮನುಷ್ಯನ ಜೀವಮಾನವೆಂಬ ಜಲವು ಜ್ಞಾನವೆಂದು ಊಟೆಯಿಂದ ಉಕ್ಕಿಹರಿಯುತ್ತಲಿರುವುದು, ಉನ್ನತವಾದ ಪದವಿಯನ್ನು ಪಡೆಯುವುದಕ್ಕೆ ಜ್ಞಾನವೇ ಏಣಿಯೆಂದೂ ಹತ್ತುವಾಗ ಪವನ ತಪ್ಪಿ ಬೀಳದಂತೆ ಹಿಡಿದು ಕೊಳ್ಳುವುದಕ್ಕೆ ಶಾಸ್ತ್ರಸಮುದಾಯವೇ ಸರಪಣಿಯೆಂದೂ ಲಾರ್ಡ್‌ಬೇಕನ್ಸ್‌ಫೀಲ್ಡ್ ಎಂಬ ಪಂಡಿತನು ಹೇಳಿರುವನು.

ಅವಧಾನವಿಟ್ಟು ಕಲಿಯುವುದೂ ಕಲಿತುದನ್ನು ಆಚರಿಸುವುದೂ ಬಹಳ ಮುಖ್ಯ. ಗಮನ ಸಾಲದೆ ಮಾಡಿದ ಕೆಲಸವು ಹೆಚ್ಚು ಕಾಲವನ್ನೂ ಹೆಚ್ಚು ಕಷ್ಟವನ್ನೂ ತೆಗೆದು ಕೊಳ್ಳುವುದು. ಇಷ್ಟಾದರೂ ಚೆನ್ನಾಗಿ ಆಗುವುದಿಲ್ಲ. ಮನುಷ್ಯನ ಮೆದುಳು ಆಲೋಚನೆಗೆ ಅಧಿಷ್ಠಾನವಾಗಿಯೂ ಆತ್ಮನಿಗೆ ಅರಮನೆಯಾಗಿಯೂ ಇರಬೇಕೆಂದು ಬೈರನ್ ಎಂಬ ಒಬ್ಬ ವಿದ್ವಾಂಸನು ಹೇಳಿರುವನು. ಸಭ್ಯರಾದವರು ತಮ್ಮ ಹಿರಿಯರಂತೆ ತಾವೂ ದೇವರನ್ನು ಪೂಜಿಸುವರಾದರೂ ತಮ್ಮಲ್ಲಿರುವ ಸರ್ವಶಕ್ತಿಗಳನ್ನೂ ಉಪಯೋಗಿಸಿ ಜ್ಞಾನವನ್ನು ಪಡೆದು ಪೂಜಿಸುವುದು ಮಾತ್ರ ಶ್ಲಾಘ್ಯವೆಂದು ಎಮರ್ಸನ್ ಎಂಬು

ತನು ಹೇಳಿರುವನು. " ಪ್ರಪಂಚದಲ್ಲಿ ಮನುಷ್ಯನು ಒಂದು ಹಲ್ಲು ಕಡ್ಡಿಗಿಂತಲೂ ಕಡೆ, ಲೋಕವು ಇವನನ್ನು ಬಲು ಸುಲಭವಾಗಿ ಧ್ವಂಸಮಾಡಬಹುದು. ಆದರೂ ಇವನು ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳಿಗಿಂತಲೂ ದೊಡ್ಡವನು. ಹೇಗೆಂದರೆ— ಇಂಥದ್ದರಿಂದ ತಾನು ಸಾಯುವನೆಂಬುದು ಇವನಿಗೆ ಗೊತ್ತಿದೆ. ಅವಕ್ಕಾದರೊ ತಮಗಿಷ್ಟು (ಮೃಗಾದಿಗಳು) ಬಲವಿರುವುದೆಂಬುದನ್ನು ಕೂಡ ಅರಿಯವು. " ಹೀಗೆಂದು ಪ್ಯಾಸ್ಕಲ್ ಎಂಬಾತನು ಹೇಳುವನು.

ಮನುಷ್ಯನು ಸರಿಯಾಗಿ ಬಾಳಬೇಕಾದರೆ ಅನರ್ಥಕಾರಿಯಾದ ದುಡುಕಿಗೆ ಅವಕಾಶಕೊಡದೆ ಮನಶ್ಶಾಂತಿಯನ್ನೂ ಸ್ವಾರ್ಥಪರತೆಗೆ ಅವಕಾಶ ಕೊಡದಂಥ ಮೃದುಹೃದಯವನ್ನೂ, ಯಾವ ಕೆಲಸವನ್ನಾದರೂ ಮಾಡಬಲ್ಲಂಥ ಕಾಯಪುಷ್ಟಿಯನ್ನೂ ಸಂಶಯಕ್ಕೆಡೆಗೊಡದಂಥ ನಿಶ್ಚಯ ಜ್ಞಾನವನ್ನೂ ಪಡೆದಿರಬೇಕು. ವಿದ್ಯಾಭ್ಯಾಸದ ಪ್ರಾರಂಭದಲ್ಲಿ ಸಾಮಾನ್ಯವಾಗಿ ಎಲ್ಲರೂ ಒಂದೇ ಮಟ್ಟದಲ್ಲಿರುವರು. ಮುಂದಕ್ಕೆ ತಮ್ಮ ತಮ್ಮ ಪ್ರತಿಭೆಗೆ ತಕ್ಕಂತೆ ಶೋಭಿಸುವರು. ವಿದ್ಯೆಯು ಅಜ್ಞಾನಾಂಧಕಾರವನ್ನು ತೊಲಗಿಸಿ, ಲೋಕವನ್ನೆಲ್ಲಾ ಬೆಳಗುವುದು. ಗ್ರಂಥಗಳ ರಸವನ್ನು ಅನುಭವವಾಗಿಸುವುದು. ಪ್ರಕೃತಿ ಪರೀಕ್ಷೆಗೆ ಮಾರ್ಗವನ್ನು ತೋರಿಸುವುದು. ಮತ್ತು ಯಾವುದರಲ್ಲೂ ಆಸಕ್ತಿಯನ್ನು ತೋರಿಸುವುದು. ಕಂಡ ಕಂಡದ್ದರ ವಿಷಯವನ್ನೆಲ್ಲಾ ಪ್ರಶ್ನಿಸಿತಿಳಿದು ಕೊಳ್ಳುವುದು, ಕಷ್ಟಸಹಿಷ್ಣುತ್ವ ಪರ್ಯಾಲೋಚನಾಪರತೆ, ತಾಳ್ಮೆ, ಇವೆಲ್ಲಾ ವಿದ್ಯೆಯಿಂದ ಲಭಿಸುವುವು. ವಿದ್ಯಾವಂತರು ಒಂದು ವೇಳೆ ಅಕಾರ್ಯಗಳನ್ನು ಮಾಡಿಕೆಟ್ಟರೆ ಅದು ಅವರ ನಡತೆಯ ದುಷ್ಫಲವೇ ಹೊರತು ವಿದ್ಯೆಯ ದೋಷವೇನೂ ಇಲ್ಲ. ಒಳ್ಳೆಯ ಆವರಣದಲ್ಲಿ ನೆಡಲು ಅರ್ಹವೂ ಶ್ರೇಷ್ಠ ರತ್ನವೂ ಆದ ವಜ್ರವನ್ನು ಅರೆದು ಕುಡಿದು ಪ್ರಾಣಬಿಟ್ಟರೆ ಅದು ಯಾರ ತಪ್ಪು?

(36) ಪುಸ್ತಕಗಳನ್ನೋದುವುದು,

ಪ್ರತಿಯೊಬ್ಬ ಮನುಷ್ಯನಿಗೂ ಜ್ಞಾಪಕ ಶಕ್ತಿಯು ಯಾವ ಸಹಾಯವನ್ನು ಮಾಡುವುದೋ ಪ್ರತಿಯೊಂದು ಜನಾಂಗಕ್ಕೂ ಪುಸ್ತಕಗಳು ಅದೇ ಸಹಾಯವನ್ನು ಮಾಡುವುವು. ಮನುಷ್ಯ ಕಾಲದ ಚರಿತ್ರೆ ಹಿಂದೆಯಾರಿಗೂ

ಗೋಚರವಾಗದಿದ್ದ ಸಂಗದಿಗಳನ್ನೂ ಹೊಸ ಅಂಶಗಳನ್ನೂ ಕಂಡು ಹಿಡಿದಿರುವ ಬಗೆ, ಯುಗಾಂತರಗಳಿಂದಲೂ ಮನುಷ್ಯರು ಪಡೆದಿರುವ ಅನುಭವ ಮತ್ತು ಜ್ಞಾನ, ಪ್ರಕೃತಿ ಸೌಂದರ್ಯ ಇಂಥವುಗಳನ್ನೆಲ್ಲಾ ನಾವು ಪುಸ್ತಕಗಳನ್ನೋದಿ ತಿಳಿದು ಕೊಳ್ಳಬಹುದು. ಓದುವುದರಿಂದ ನಮ್ಮ ಕಷ್ಟವನ್ನೂ ದುಃಖವನ್ನೂ ಕಡಿಮೆಮಾಡಿಕೊಳ್ಳಬಹುದು. ಹೆಚ್ಚು ಕಾಲವನ್ನು ಒಂದುಕ್ಷಣದಂತೆ ಸಂತೋಷದಿಂದ ಕಳೆಯಬಹುದು. ದೊಡ್ಡದೊಡ್ಡವರ ಘನವಾದ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬಹುದು. ಮೇಲಾದ ಆಲೋಚನಾಶಕ್ತಿಯನ್ನು ಪಡೆಯಬಹುದು. ಮತ್ತು ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಬಹುದು.

ನಾವು ಹೇಗೆ ಭಾವಿಸಿಕೊಳ್ಳುವೆವೋ ಹಾಗೆ ಆಗುವೆವೆಂದು ಶಾಸ್ತ್ರವೇ ಇದೆ. ನಾವು ಪುಸ್ತಕ ಗಳನ್ನೋದುವಾಗ ಸಮುದ್ರ, ನದಿ, ಅರಣ್ಯ, ಬೆಟ್ಟಗುಡ್ಡ, ಇಂಥವುಗಳನ್ನೆಲ್ಲಾ ಸಾಕ್ಷಾತ್ತಾಗಿ ನೋಡಿದಂತೆಯೇ ಭಾವನೆಯುಂಟಾಗುವುದು. ಇಂಥಭಾವನೆಯು ಪ್ರಯಾಣದಲ್ಲಿ ಯಾವ ಖರ್ಚುವೆಚ್ಚಗಳಿಗೂ ಆಯಾಸಕ್ಕೂ ಕಾಲಹರಣಕ್ಕೂ ಅನಾನುಕೂಲತೆಗೂ ಏನೇನೂ ಅವಕಾಶವಿರುವುದಿಲ್ಲ. ಪುಸ್ತಕಗಳನ್ನೋದುವುದರಲ್ಲಿ ಶಾಸ್ತ್ರಜ್ಞರು ಚಕ್ರವರ್ತಿಗಳು, ಋಷಿಗಳು ಕಡೆಗೆ ದೇವತೆಗಳು, ಇಂಥವರೊಡನೆ ನ್ಯಾಯವಾದವಾಗಿಯೂ, ನಿರ್ಭಯವಾಗಿಯೂ ಬೇಸರವಿಲ್ಲದೆಯೂ, ಗದ್ದಲವಿಲ್ಲದೆಯೂ ಯಾವ, ಕದಗಳ ಮತ್ತು ಬೀಗಗಳ ಕಡೆಯಾಗಲಿ ಆಳುಗಳ ಕಾಟವಾಗಲಿ ಇಲ್ಲದೆಯೂ ಮಾಡಬಹುದು. ಪುಸ್ತಕಗಳನ್ನು ಸನ್ಮಿತ್ರರೆಂದು ಪ್ರೀತಿಸುವುದೂ ಸಾಲದು, ಹೇಗೆಂದರೆ— ಎಂಥ ಒಳ್ಳೆಯ ಸ್ನೇಹಿತರೇ ಆದರೂ ಮೃತ್ಯುವಿನ ಪಾಶಕ್ಕೆ ಕಟ್ಟು ಬಿದ್ದು ಮರಣಕ್ಕೆ ಗುರಿಯಾಗಲೇ ಬೇಕಷ್ಟೆ. ಈ ಪುಸ್ತಕಗಳೆಂಬ ಸ್ನೇಹಿತರಾದರೊ ನಾವಾಗಿ ಹೊರಗೆಸೆದರೆ ವಿನಾ ಎಂದಿಗೂ ನಮ್ಮನ್ನು ಬಿಟ್ಟು ಅಗಲರು. ಓದಿದ್ದ ಪುಸ್ತಕಗಳು ಒಂದು ವೇಳೆ ಕಳೆದು ಹೋದರೂ ಅವುಗಳಿಂದ ಕಲಿತ ಅಂಶಗಳು ಮನದಲ್ಲಿ ನೆಲೆಗೊಂಡಿರುವುವು. ಗತಿಸಿಹೋದ ಪೂರ್ವಿಕರಲ್ಲಿ ಹಲವರು ಗ್ರಂಥಗಳಲ್ಲೇನೋ ಬದುಕಿಯೇ ಇದ್ದಾರೆ, ಉದಾ—ಕಾಳಿದಾಸ, ಅಕ್ಬರ್., ಚಿಕ್ಕದೇವರಾಜಒಡೆಯರು. ಇತ್ಯಾದಿಕ್ರೂರಾತ್ಮರೂ ದುಷ್ಟರೂ ಆಗಿದ್ದ ಪೂರ್ವಿಕರು ಪುಸ್ತಕಗಳಲ್ಲಿ

ಗೋಚರವಾಗುವಾಗ ನಮಗೆ ಯಾವ ಕೆಡುಕನ್ನೂ ಮಾಡಲಾರರು. ಇದಕ್ಕೆ ಬದಲಾಗಿ ಒಳ್ಳೆಯ ಯೋಚನೆಗಳನ್ನು ಹುಟ್ಟಿಸಿ ನಮಗೆ ಒಳ್ಳೆಯದನ್ನೇ ಮಾಡಿಯಾರು. ಹೇಗೆಂದರೆ—ಕೈಕಯಿ, ದುರ್ಯೋಧನ, ತೈಮೂರ್, ಔರಿಂಗ್ ಸೇಬ್, ಟಿಪ್ಪು ಮೊದಲಾದವರ ವಿಷಯವನ್ನು ನಾವು ಓದಿದರೆ ಅವರಂತೆ ನಾವು ಆಗಬಾರದು ಎಂಬ ಒಳ್ಳೆಯ ತಿಳುವಳಿಕೆಯುಂಟಾಗುವುದೇ ವಿನಾ ನಮಗೆ ಯಾವ ಭಯವೂ ಇಲ್ಲ. ಅಥವಾ ಅವರಲ್ಲಿದ್ದಂಥ ಕ್ರೂರಬುದ್ಧಿಯೂ ಹುಟ್ಟುವುದಿಲ್ಲ. ಆದುದರಿಂದಲೇ ಪುಸ್ತಕಗಳು ಗುಣೈಕ ಪಕ್ಷಪಾತಿಗಳು. ಈ ಪ್ರಪಂಚದಲ್ಲಿ ದೊರೆಯಬಹುದಾದ ಸಕಲ ಸಂಪತ್ತುಗಳನ್ನೂ ಪಡೆದಿರ ತಕ್ಕಪರಮ ಪುಣ್ಯಶಾಲಿಗಳು ಕೂಡ ತಮಗೆ ಗ್ರಂಥಕಾಲಕ್ಷೇಪದಿಂದಲೇ ನಿಜವಾದ ಸುಖವುಂಟಾಗುವುದೆಂದು ಹೇಳುತ್ತಾರೆ. ಪುಸ್ತಕವನ್ನೋದುತಿರುವಾಗ ಅಲ್ಲಿ ಬಹುಸ್ವಾರಸ್ಯವಾದ ಅಂಶವೇನಾದರೂ ಬಂದರೆ ಆಗ ಮನಸ್ಸೆಲ್ಲಾ ಅದರ ಮೇಲೆಯೇ ಇರುವುದರಿಂದ ಅನ್ನೋದಕಗಳಾಗಲಿ ಇತರ ಯಾವ ಸುಖಭೋಗಗಳಾಗಲಿ ಬೇಕಾಗುವುದಿಲ್ಲ. ಮತ್ತು ಎಷ್ಟು ಗದ್ದಲವಾದರೂ ಮನಸ್ಸು ಅಲ್ಲಿಂದ ಕದಲುವುದಿಲ್ಲ. ಓದುವ ಅಭ್ಯಾಸವನ್ನು ಚೆನ್ನಾಗಿ ಪಡೆದಿರುವವರಿಗೆ ಪ್ರಪಂಚದ ಸಮಸ್ತ ಸುಖಸಾಧನಗಳನ್ನೂ ಒದಗಿಸಿ ಪುಸ್ತಕಗಳನ್ನು ಮಾತ್ರ ಕೊಡದಿದ್ದರೆ ನಿಜವಾಗಿಯೂ ಅವರಿಗೆ ಮರಣ ಸಂಕಟವುಂಟಾಗವುದು. ಎಷ್ಟೋ ಸಂದರ್ಭಗಳಲ್ಲಿ ಪ್ರಪಂಚದ ಪ್ರಕೃತಿ ಸೌಂದರ್ಯ ಮೊದಲಾದುವನ್ನು ಪ್ರತ್ಯಕ್ಷವಾಗಿ ನೋಡುವುದಕ್ಕಿಂತ ಬಣ್ಣದ ಚಿತ್ರಗಳಲ್ಲಿ ಭಾವಚಿತ್ರಗಳಲ್ಲಿ ಅಥವಾ ಪ್ರತಿ ಬಿಂಬಗಳಲ್ಲಿ ನೋಡುವುದು ಹೇಗೆ ಹೆಚ್ಚು ಸಂತೋಷಕರವೋ ಹಾಗೆಯೇ ಅನೇಕ ವಿಷಯಗಳನ್ನು ಗ್ರಂಥಗಳಲ್ಲಿ ಓದಿ ತಿಳಿಯುವುದು ಬಹಳ ಆಹ್ಲಾದಕರವಾಗಿರುವುದು. ಓದುವಾಗ ನಮ್ಮ ಮನಸ್ಸಿಗೆ ಉಲ್ಲಾಸವುಂಟಾಗದಿದ್ದರೆ ಅದಕ್ಕೆ ನಮ್ಮ ತಪ್ಪೇ ಕಾರಣ, ಪುಸ್ತಕದ್ದಲ್ಲ.

ಓದುವುದರಲ್ಲೂ ಬುದ್ಧಿವಂತಿಕೆಯಿರಬೇಕು. ಅರ್ಥವನ್ನು ತಿಳಿದುಕೊಳ್ಳದೆ ಗಿಣಿಯಂತೆ ಎಷ್ಟುಸಲ ಬಾಯುಪಾಠ ಮಾಡಿದರೂ ವ್ಯರ್ಥವೇ. ಪ್ರತಿಯೊಬ್ಬರೂ ತಮಗೆ ಚೆನ್ನಾಗಿ ಓದುವುದಕ್ಕೂ ಬರೆಯುವುದಕ್ಕೂ

ಬರುವುದೆಂದು ತಿಳಿದು ಕೊಂಡಿದ್ದಾರೆ. ಆದರೆ ಅನೇಕರಿಗೆ ಅದರ ತತ್ವವೇ ಗೊತ್ತಿಲ್ಲ. ಸುಮ್ಮನೆಪಙ್ಕ್ತಿಗಳ ಮೇಲೆ ನೋಟವನ್ನು ಓಡಿಸುತ್ತಲೂ ಹಾಳೆಗಳನ್ನು ಮೊಗಚುತ್ತಲೂ ಬಂದರೆ ವಾಗಿಯಲಿಲ್ಲ. ಅಲ್ಲಿ ವರ್ಣಿಸಿರುವುವುಗಳನ್ನು ಪ್ರತ್ಯಕ್ಷವಾಗಿ ನೋಡುವಂತೆ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುತ್ತಲೂ ನಾವು ಯಾರ ವಿಷಯವಾಗಿ ಓದುವೆವೋ ಅವರ ಬಿಂಬಗಳನ್ನು ಭಾವಿಸಿಕೊಳ್ಳುತ್ತಲೂ ಓದಬೇಕಾದುದಲ್ಲದೆ ಕೆಲವುವೇಳೆ ಅವರೇ (ನಾವೆಂದು ಕೂಡ ಭಾವಿಸಿಕೊಳ್ಳಬೇಕಾಗುವುದು. ಓದುವುದನ್ನು ಹೊಸದಾಗಿ ಕಲಿಯುವ) ಮಕ್ಕಳು ಉಚ್ಚಾರಣೆಯನ್ನು ಕ್ರಮಪಡಿಸಿಕೊಳ್ಳುವುದಕ್ಕು ಕಿವಿಯ ಮೂಲಕವಾಗಿಯೂ ಬುದ್ಧಿಗೆ ವಿಷಯವನ್ನು ತಿಳಿಸಿ ಸ್ಮೃತಿ ಶಕ್ತಿಯನ್ನು ಬಲಪಡಿಸಿಕೊಳ್ಳುವುದಕ್ಕಾಗಿಯೂ ಗಟ್ಟಿಯಾಗಿ ಓದಬೇಕಾದುದು ಆವಶ್ಯಕ. ಪ್ರಾಪ್ತವಯಸ್ಕರಾದರೋ ಮೌನವಾಗಿ ಓದುವುದುತ್ತಮ. ಇದರಿಂದ ಹತ್ತಿರವಿರುವವರಿಗೆ ಗದ್ದಲದಿಂದ ತೊಂದರೆ ಯಾಗದಂತಿರುವುದು. ಮತ್ತು ತಮಗೆ ಅವಧಾನವು ಕೆಡದಂತೆ ಇರುವುದು.

ಸ್ವಂತ ಅನುಭವದಿಂದ ಎಷ್ಟೋ ವರ್ಷಗಳು ಕಲಿಯಬೇಕಾದದನ್ನು ಓದುವುದರಿಂದ ಒಂದೇ ವರ್ಷದಲ್ಲಿ ಕಲಿಯಬಹುದು. ಓದುವುದರಲ್ಲಿ ಅನುಭವದಲ್ಲಿ ಸಂಭವಿಸುತ್ತಿದ್ದ ಕಷ್ಟಗಳೇನೂ ಇರುವುದಿಲ್ಲವೆಂದು ಆಸ್ಕ್ಯಾಮ್ ಎಂಬ ಒಬ್ಬ ಪಂಡಿತನು ಹೇಳಿರುವನು. ಅದೇ ಪಂಡಿತನು ಇನ್ನೂ ಹೇಳುವುದೇನೆಂದರೆ—"ಪರೀಕ್ಷೆಯಲ್ಲೇ ಅನೇಕರನ್ನು ಕೊಂದು ವೈದ್ಯನಾಗುವುದೂ ಅನೇಕ ಸಹಸ್ರರೂಪಾಯಿಗಳ ನಷ್ಟವನ್ನನುಭವಿಸಿ ವರ್ತಕತನವನ್ನು ಕಲಿಯುವುದೂ ಹೇಗೆ ಅವಿವೇಕವೋ ಎಲ್ಲವನ್ನೂ ಸ್ವಂತ ಅನುಭವದಿಂದಲೇ ಕಲಿಯಬಹುದೆಂಬುದೂ ಹಾಗೆಯೇ. ಅಲ್ಲದೆ ಇದು ಹತ್ತಿರವಾದ ಮತ್ತು ಸುಲಭವಾದ ದಾರಿಯನ್ನು ಬಿಟ್ಟು ಬಳಸುದಾರಿಯಲ್ಲಿ ನಡೆಯುವಂತೆ ಆಗುವುದು." ಲೋಕ ಯಾತ್ರೆಗೆ ಶ್ರುತಿ, ಯುಕ್ತಿ, ಅನುಭವ ಈ ಮೂರೂ ಸಹಾಯಕಗಳೆಂಬುದು ನಮ್ಮ ಪ್ರಾಚೀನ ಮಹಾಶಯರ ಮತವು. ಬರೀ ಸ್ವಾನುಭವದಿಂದ ನಡೆಯುತ್ತ ಬದುಕು ನೆನಂಬುವವನು ಎಷ್ಟೇ ಬುದ್ಧಿವಂತನಾದರೂ ಅಮಾವಾಸ್ಯೆಯ ರಾತ್ರಿಯ ಕಗ್ಗತ್ತಲೆಯಲ್ಲಿ ಹೊಸಸ್ಥಳದಲ್ಲಿ ನಡೆಯುತ್ತ ಮಾರ್ಗಭ್ರಷ್ಟನಾಗುವ ಮನುಷ್ಯನಂತಾಗುವನು. ಮತ್ತು ಸ್ವಂತ ಅನುಭ

ವವನ್ನೇನಂಬಿ ಲೋಕದಲ್ಲಿ ಸುಖಿಯಾಗಿರುವವನು ಲೋಕದಲ್ಲಿ ಯಾರೂ ಇಲ್ಲ. ಕಾಡು ಜನರಿಗೂ ಇತರರಿಗೂ ಹೋಲಿಸಿದರೆ ಈ ಅಂಶವು ಸ್ಪಷ್ಟ ಪಡುವುದು.

ಪುಸ್ತಕಗಳಿಂದ ಮಾತ್ರಕ್ಕೇ ಸಿಕ್ಕಿಸಿಕ್ಕಿದವುಗಳನ್ನೆಲ್ಲಾ ಓದಬಾರದು. ಜನರನ್ನು ಸ್ನೇಹಿತರನ್ನಾಗಿ ಆರಿಸಿಕೊಳ್ಳುವುದರಲ್ಲಿ ಎಷ್ಟು ಕಷ್ಟವೋ ಇಲ್ಲಿಯೂ ಅಷ್ಟು ಕಷ್ಟವಿದೆ. ನಾವು ಮಾಡತಕ್ಕ ಕೆಲಸಕ್ಕೆ ನಾವು ಎಷ್ಟು ಜವಾಬ್ದಾರರೋ ನಾವು ಓದತಕ್ಕ ವಿಷಯಕ್ಕೂ ನಾವೇ ಅಷ್ಟು ಮಟ್ಟಿಗೆ ಜವಾಬ್ದಾರರು. ಒಳ್ಳೆಯ ಗ್ರಂಥವು ಓದುವವರಿಗೆ ಪ್ರಾಣನಾಡಿಯಂತೆ ಚಟುವಟಿಕೆಯನ್ನು ಶಕ್ತಿಯನ್ನೂ ಉತ್ಸಾಹವನ್ನೂ ಹೆಚ್ಚಿಸುವುದು ಎಂದು ಒಬ್ಬ ಪಂಡಿತನು ಹೇಳಿದ್ದಾನೆ ಸಕ್ಕರೆಯನ್ನು ತಿನ್ನುವುದರಿಂದ ನಾಲಿಗೆರುಚಿಯೂ ದೇಹಕ್ಕೆ ಪೋಷಣೆಯೂ ಆಗುವಂತೆ ಕೆಲವು ಕಾದಂಬರಿಗಳನ್ನು ಓದುವುದರಿಂದ ವಿನೋದವೂ ತಕ್ಕ ಮಟ್ಟಿಗೆ ಜ್ಞಾನಾರ್ಜನೆಯೂ ಆಗುವುವು. ಹೀಗೆಂದು ಸದಾ ಅವುಗಳನ್ನೇ ಓದುವುದು ವ್ಯರ್ಥಕಾಲ ಹರಣ ಮತ್ತು ಜಿಗುಪ್ಸೆಯೂ ಆದೀತು. ಇದುದರಿಂದ ಒಳ್ಳೆಯ ಮಾರ್ಗವನ್ನು ತೋರಿಸಿ ನಮ್ಮನ್ನು ವೃದ್ಧಿಗೆ ತರತಕ್ಕ ಇತರ ಪುಸ್ತಕಗಳನ್ನೂ ಮುಖ್ಯವಾಗಿ ಓದಲೇಬೇಕು. ಊಟದಲ್ಲಿ ಚಟ್ನಿಮೊದಲಾದುವನ್ನು ಬಹಳ ಸ್ವಲ್ಪವಾಗಿಯೂ ಪಲ್ಯ ಮೊದಲಾದುವನ್ನು ಅದಕ್ಕಿಂತ ಸ್ವಲ್ಪ ಹೆಚ್ಚಾಗಿಯೂ ಅನ್ನವನ್ನು ಇತರ ಎಲ್ಲಾ ವಸ್ತುಗಳಿಗಿಂತ ಹೆಚ್ಚಾಗಿಯೂ ಉಪಯೋಗಿಸುಕೊಳ್ಳುವಂತೆ ಯಾವ ಯಾವ ವಿಷಯಗಳ ಮೇಲೆ ಬರೆದಿರುವ ಗ್ರಂಥಗಳಲ್ಲಿ ಎಷ್ಟೆಷ್ಟು ಪುಸ್ತಕಗಳನ್ನು ಓದಬೇಕೆಂಬುದನ್ನು ಓದತಕ್ಕವರೇ ವಿವೇಕದಿಂದ ನಿಶ್ಚಯಿಸಿ ಕೊಳ್ಳಬೇಕು. ಗ್ರಂಥಗಳೆಂದು ಕರೆಯಿಸಿ ಕೊಳ್ಳುತ್ತಿರುವುವುಗಳಲ್ಲಿ ಅನೇಕ ಪುಸ್ತಕಗಳು ಗ್ರಂಥಗಳೇ ಅಲ್ಲ, ಅಂಥವುಗಳನ್ನು ಓದುವುದು ವ್ಯರ್ಥಕಾಲಕ್ಷೇಪ ಇನ್ನು ಕೆಲವನ್ನು ಓದಿದರೆ ನಾವು ಕೆಟ್ಟು ಹೋದೇವು. ದೂರಾಶೆ ತೋರಿಸಿ ನಮ್ಮನ್ನು ಮರುಳು ಮಾಡಿ ತಪ್ಪುದಾರಿಗೆಳೆಯುವ ಸಂಗತಿಗಳಿಗೆ ನಾವು ಗಮನವನ್ನು ಕೂಡ ಕೊಡಕೂಡದಲ್ಲವೆ? ಹೇಗಿದ್ದ ಬಲ್ಲಿ ಹೇಯವಾದ ವರ್ಣನೆ ಆಭಾಸವಾದ ಅಭಿಪ್ರಾಯ. ದುಷ್ಕಾರ್ಯಗಳಿಂದ ಪ್ರತಿಷ್ಠೆಯನ್ನು ಪಡೆಯುವ ಉಪಾಯ. ಅಶುದ್ಧವಾದ ಭಾಷೆ, ಇಂಥವನ್ನುಳ್ಳ ಪುಸ್ತಕಗಳನ್ನೋದಿದರೆ ನಮ್ಮ ಗತಿಯೇನಾದೀತು ?

ಉತ್ತಮವಾದ ಗ್ರಂಥಗಳನ್ನೋದುವುದರಿಂದ ಸ್ವಾರ್ಥಪರತೆಯು ಕಡಿಮೆಯಾಗುವುದು, ಜೀವಮಾನದಲ್ಲಿ ಸಂಭವಿಸತಕ್ಕ ಕಷ್ಟಗಳೆಲ್ಲಾ ನಿರ್ಲಕ್ಷ್ಯವಾಗಿ ತೋರುವುವು. ಜೀವನಿಗೆ ಒಳ್ಳೆಯ ಸಂಸ್ಕಾರವಾಗುವುದು. ಉತ್ತಮವಾದ ಗ್ರಂಥಗಳನ್ನೋದುತ್ತ ಸ್ವಾರಸ್ಯವನ್ನು ಗ್ರಹಿಸುತ್ತಿರುವವರನ್ನು ತೊಂದರೆಪಡಿಸುವುದು ಬಹಳ ಕ್ರೂರಕೃತ್ಯ. ಏಕೆಂದರೆ_ಅವರು ಅನುಭವಿಸುತ್ತಿದ್ದ ಆನಂದಕ್ಕೆ ನಾವು ಭಂಗವನ್ನುಂಟುಮಾಡಿದಂತಾಗುವುದು ಉತ್ತಮವಾದ ಮತ್ತು ಕುತೂಹಲಜನಕವಾದ ಪುಸ್ತಕಗಳನ್ನೋದುವುದರಿಂದ ತತ್ಕಾಲದಲ್ಲಿ ಮಾತ್ರವಲ್ಲದೆ ಮುಂದಕ್ಕೂ ಆ ಅಭಿಪ್ರಾಯಗಳು ನೆನಪಿಗೆ ಬಂದಾಗೆಲ್ಲಾ ಆಹ್ಲಾದವುಂಟಾಗುವುದು.

## (37) ಪ್ರಜೆಗಳ ನಾಗರಿಕತೆ.

ಧರ್ಮಪ್ರಭುಗಳಾದ ಇಂಗ್ಲಿಷರ ರಾಮರಾಜ್ಯದಲ್ಲಿ ಪ್ರಜೆಗಳೂ ಸರ್ಕಾರದ ಆಡಳಿತಗಳ ವಿಷಯವಾಗಿ ಬಾಯಿಹಾಕುವುದಕ್ಕೂ ವಿನಯವಿಧೇಯತೆಗಳಿಂದ ತಮ್ಮ ಕಷ್ಟಸುಖಗಳನ್ನು ವಿಜ್ಞಾಪಿಸಿಕೊಳ್ಳುವುದಕ್ಕೂ ಅವಕಾಶವುಂಟಾಗಿದೆ. ಅದೇ ಮೇಲ್ಪಂಕ್ತಿಯೇ ನಮ್ಮ ಮೈಸೂರು ದೇಶದಲ್ಲಿ ಶ್ರೀಮನ್ಮಹಾರಾಜರವರ ಸರ್ಕಾರದಲ್ಲೂ ಆಚರಣೆಯಲ್ಲಿದೆ. ಪ್ರಜಾಪ್ರತಿನಿಧಿಸಭೆ, ಪೌರಕಾರ್ಯನಿರ್ವಾಹಕಸಮಾಜ (ಮ್ಯುನಿಸಿಪಾಲಿಟಿ) ಇಂಥವುಗಳಲ್ಲೆಲ್ಲಾ ಪ್ರಜೆಗಳು ತಮ್ಮ ಸ್ವಾತಂತ್ರ್ಯವನ್ನುಪಯೋಗಿಸಿಕೊಳ್ಳಬಹುದಾಗಿದೆ. ಆದರೆ ಅದಕ್ಕೆ ವಿವೇಕವು ಆವಶ್ಯಕ. ನಮ್ಮ ರಾಜ್ಯದಲ್ಲಿರುವ ಸುಮಾರು ೬೦ ಲಕ್ಷ ಪ್ರಜೆಗಳಲ್ಲಿ ನಾನಾ ಮತಗಳವರೂ ನಾನಾ ಮತಗಳವರೂ ನಾನಾ ಜಾತಿಗಳವರೂ ನಾನಾ ಸ್ವಭಾವದವರೂ ಇರುವರು. ಅವರೆಲ್ಲರೂ ಒಗ್ಗಟ್ಟಾಗಿ ಹೋಗಿ ಸರ್ಕಾರದಲ್ಲಿ ತಮ್ಮ ವಿಜ್ಞಾಪನೆಗಳನ್ನು ಹೇಳಿಕೊಳ್ಳುವುದು ಅಸಾಧ್ಯವಾದುದರಿಂದ ಅವರ ಪಕ್ಷವಾಗಿ ಕೆಲವರು ಪ್ರತಿನಿಧಿಗಳು ಮಾತ್ರ ಸರಕಾರಕ್ಕೆ ಹೋಗುವರು. ಮೇಲೆಕಂಡಂತೆ ನಾನಾ ಭೇದಗಳುಳ್ಳ ಪ್ರಜೆಗಳ ಪಕ್ಷವಾಗಿ ಹೊಡೆದಾಡುವವರಿಗೆ ಬಲುಮಟ್ಟಿಗೆ ಲೋಕಾನುಭವವೂ ತಿಳಿವಳಿಕೆಯೂ ಬುದ್ಧಿವಂತಿಕೆಯೂ ಆವಶ್ಯಕ.

ರಾಜ್ಯವನ್ನು ಶತ್ರುಗಳ ದೆಸೆಯಿಂದ ರಕ್ಷಿಸುವುದು, ಇತರ ರಾಜ್ಯಗಳೊಡನೆ ಮೈತ್ರಿ ಮೊದಲಾದ ಕೆಲವು ಮುಖ್ಯ ವಿಷಯಗಳನ್ನು ನಮ್ಮ

ಶ್ರೀಮನ್ಮಹಾರಾಜರವರೂ ಚಕ್ರವರ್ತಿಯವರ ಸರ್ಕಾರದವರೂ ನಿರುಪಾಧಿಕವಾಗಿ ನೋಡಿಕೊಳ್ಳುವರಾಗಿ ನಮಗೆ ಆ ಚಿಂತೆಯೇ ಬೇಕಿಲ್ಲ. ಆದರೆ ಪ್ರಜೆಗಳೆಲ್ಲಾ ಶಾಂತಿಯಿಂದಿರುತ್ತ ಸರ್ಕಾರಕ್ಕೆ ಸಹಾಯ ಮಾಡಬೇಕು. ಕೆಲವು ಅಧಿಕಾರಿಗಳ ದುಷ್ಪ್ರವರ್ತನೆಯಿಂದ ಸರ್ಕಾರದ ಆಡಳಿತವು ಕೆಡದಂತೆಯೂ ಹಣವು ದುಂದಾಗದಂತೆಯೂ ನೋಡಿಕೊಳ್ಳಬೇಕು. ಏಕೆಂದರೆ--ಸರ್ಕಾರದ ಹಣವೆಂಬುದು ಪ್ರಜೆಗಳು ಮೈಮುರಿದುಕೊಂಡು ದುಡಿದ ದುಡ್ಡಾಗಿದೆ. ಅದು ಅವರ ಉಪಯೋಗಕ್ಕೋಸ್ಕರ ನ್ಯಾಯವಾದ ಮಾರ್ಗದಲ್ಲಿ ಮಾತ್ರ ವಿನಿಯೋಗಿಸಲ್ಪಟ್ಟರೆ ಸಾರ್ಥಕವಾಗುವುದು. ಪ್ರತಿಯೊಬ್ಬ ಪ್ರಜೆಯೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸರ್ಕಾರಕ್ಕೆ ತೆರಿಗೆಯನ್ನು ಕೊಟ್ಟೇತೀರಬೇಕಾಗಿದೆ. ಭೂಮಿಗೆ, ಕಸಬುಗಳಿಗೆ, ಬಂಡಿಗಳಿಗೆ ಇಂಥವುಗಳಿಗಾಗಿ ಕಂದಾಯವೆಂಬ ಹೆಸರಿನಿಂದ ಸರ್ಕಾರಕ್ಕೆ ಕೊಡತಕ್ಕ ದ್ರವ್ಯವೇ ಸಾಕ್ಷಾತ್ತಾದ ತೆರಿಗೆ, ಹೀಗೆ ತಾವೇ ಸಾಕ್ಷಾತ್ತಾಗಿ ಸರ್ಕಾರಕ್ಕೆ ಏನನ್ನೂ ಕೊಡದೆ ಇರತಕ್ಕವರೂ ಅನೇಕರುಂಟು. ಆದರೆ ಅವರು ಅಕ್ಕಿ, ಬೆಲ್ಲ, ಉಪ್ಪು, ಎಣ್ಣೆ, ಸೌದೆ ಬಟ್ಟೆ ಮೊದಲಾದ ಹಲವು ವಸ್ತುಗಳನ್ನು ಕೊಂಡು ಜೀವಿಸಬೇಕಷ್ಟೆ. ಆ ವಸ್ತುಗಳನ್ನು ಮಾರತಕ್ಕ ವರ್ತಕರೇ ಅವುಗಳಿಗಾಗಿ ಸರ್ಕಾರಕ್ಕೆ ಕೊಡಬೇಕಾದ ತೆರಿಗೆಯನ್ನು ಕೊಟ್ಟು ಅದನ್ನೆಲ್ಲಾ ಆ ಪದಾರ್ಥಗಳ ಮೇಲೆಯೇ ಇಟ್ಟು ಮಾರುವರು. ಆದುದರಿಂದ ಕೊಳ್ಳುವವರು ಇಂಥ ಕಂದಾಯವನ್ನು ಸರ್ಕಾರಕ್ಕೆ ಸಾಕ್ಷಾತ್ತಾಗಿ ಕೊಡದಿದ್ದರೂ ವರ್ತಕರ ಮೂಲಕವಾಗಿಯಾದರೂ ಸಲ್ಲಿಸಿದಂತೆಯೇ ಆಗುವುದು. ಇದೇ ಪರೋಕ್ಷವಾದ ತೆರಿಗೆ.

ಸರ್ಕಾರವು ದುಂದುಮಾಡಿ ಹಣಸಾಲದೆ ಹೆಚ್ಚು ತೆರಿಗೆಗಳನ್ನು ಹಾಕಿದರೆ ಜನಗಳು ಅದನ್ನು ತೆರುವುದಕ್ಕಾಗಿ ಈಗಿಂತಲೂ ಹೆಚ್ಚು ಕಷ್ಟಪಡಬೇಕಾಗುವುದು. ದುಷ್ಟರಾದವರೂ ಸರ್ಕಾರದ ಅಧಿಕಾರಕ್ಕೆ ಬಂದರೆ ಪ್ರಜೆಗಳಿಗೂ ಸರ್ಕಾರಕ್ಕೂ ಅನ್ಯಾಯವಾಗುವುದು. ಅಂಥವರು ತಾವೇ ದೊರೆಗಳೆಂದು ಭಾವಿಸಿಕೊಂಡು ದುರಹಂಕಾರದಿಂದ ಮೆರೆಯುವರು. ಅವರು ಹಾಗೆ ತಿಳಿಯುವುದಕ್ಕೆ ಬದಲಾಗಿ ಯಾರ ಉಪ್ಪನ್ನು ತಿಂದು ಬದುಕುವರೋ ಅಂಥ ಪ್ರಜೆಗಳಿಗೂ ಯಾರ ಕೈಕೆಳಗೆ ಕೆಲಸಮಾಡುವರೋ ಅಂಥ ದೊರೆ

ಗೂ ತಾವು ಸೇವಕರೆಂದು ತಿಳಿದು ನಡೆಯಬೇಕು. ಸರ್ಕಾರದ ನೌಕರಿಯು ಒಂದು ಘನಪದವಿಯಲ್ಲ. ಆದರೂ ನಮ್ಮಲ್ಲಿ ಅನೇಕ ವಿದ್ಯಾವಂತರು ಸರ್ಕಾರದ ಕೆಲಸವೆಂಬುದು ಸಿಕ್ಕಿದರೆ ಸಾಕು, ಎಂಥ ಕೆಲಸವಾದರೂ ಆಗಲಿ, ಎಷ್ಟು ಕಡಿಮೆಯ ಸಂಬಳವಾದರೂ ಬರಲಿ ಎಂದು ಹಲ್ಲು ಹಲ್ಲು ಕಿರಿದು ಹಾರಯಿಸುತ್ತಿರುವರು. ಇನ್ನು ಕೆಲವರು ತಾವು ಓದಿ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದು ಸರ್ಕಾರದ ನೌಕರಿಯನ್ನು ಪಡೆಯುವುದಕ್ಕೇ ಎಂದು ತಿಳಿದುಕೊಂಡಿರುವರು. ಮತ್ತೆ ಕೆಲವರು 'ನಾನು ಇಷ್ಟು ಅಭ್ಯಾಸ ಮಾಡಿದ್ದೇನಲ್ಲಾ, ನನಗೇನು ಸಂಬಳ ಕೊಟ್ಟಿದ್ದೀರಿ? ಎಂದು ಸರ್ಕಾರದವರ ಸಂಗಡ ಜಗಳವಾಡುವರು. ಇದನ್ನೆಲ್ಲಾ ನೋಡಿದರೆ ನಮ್ಮವರ ಅವಿವೇಕವು ವ್ಯಕ್ತಪಡುವುದು. ಹೀಗೆಂದ ಮಾತ್ರಕ್ಕೇ ಸರ್ಕಾರದ ಕೆಲಸಕ್ಕೆ ಸೇರಲೇಕೂಡದೆಂದು ಹೇಳಿದಂತೆ ಭಾವಿಸಕೂಡದು. ನ್ಯಾಯವಾಗಿ ನಡೆಯಿಸಿದರೆ ಇದೂ ಒಂದು ಬಗೆಯ ದೇಶಸೇವೆಯೇ. ಬರೀ ಜೀವನಕ್ಕೆಂದು ಅಥವಾ ಲಂಚ ರುಷುವತ್ತುಗಳ ಆಸೆಗಾಗಿ ಅಥವಾ ಇತರ ವಿಧವಾದ ಜೀವನೋಪಾಯಗಳಿಗೆ ಅವಕಾಶವಿದ್ದರೂ ಮೈಬಗ್ಗಿ ಕೆಲಸಮಾಡಲಾರದೆ ಸೋಮಾರಿತನದಿಂದ ಸರ್ಕಾರದ ಕೆಲಸಕ್ಕೆ ಸೇರತಕ್ಕವರು ದೇಶದ್ರೋಹಿಗಳು. ಅನೇಕರಿಗೆ ಉತ್ತಮವಾದ ಭೂಮಿಯಿದೆ, ಕೆಲವರಿಗೆ ಐಶ್ವರ್ಯವಿದೆ, ಮತ್ತೆ ಕೆಲವರಿಗೆ ಬೇರೆ ವಿಧವಾದ ಕೆಲಸಕಾರ್ಯಗಳಿಗೆ ತಕ್ಕ ಸೌಕರ್ಯವಿದೆ. ಇಷ್ಟಿದ್ದವರೂ ಕೂಡ ಸರ್ಕಾರದ ನೌಕರಿಗೆ ಕುರಿಗಳಂತೆ ಬಂದು ಬೀಳುವುದಕ್ಕೆ ಬದಲಾಗಿ ಕೃಷಿ, ವ್ಯಾಪಾರ, ಕೈಗಾರಿಕೆ ಮೊದಲಾದುವಕ್ಕೆ ಪ್ರವರ್ತಿಸಿದರೆ ತಾವೂ ಧನಿಕರಾಗಬಹುದು. ಲೋಕಕ್ಕು ಉಪಕಾರವಾದೀತು. ಹಾಗಿಲ್ಲದೆ ಸಾವಿರಾರು ರೂಪಾಯಿ ಸಂಬಳದ ಅಧಿಕಾರಿಗಳೆಲ್ಲಾ ತಮ್ಮ ಮಕ್ಕಳನ್ನು ೧೫-೨೦ ರೂಪಾಯಿಗಳ ಹೀನಸಂಬಳದ ಸರ್ಕಾರದ ಕೆಲಸಗಳಲ್ಲಿಟ್ಟಿರುವುದು ಕೇವಲ ಶೋಚನೀಯವಲ್ಲವೆ? ಯಾವ ವಿಧವಾದ ಇತರ ಉಪಪತ್ತಿಯೂ ಇಲ್ಲದೆ ವಿದ್ಯಾವಂತರಾಗಿಯೂ ನಡತೆವಂತರಾಗಿಯೂ ಇರತಕ್ಕ ಸಭ್ಯರು ಜೀವನೋಪಾಯಕ್ಕೆಂದೋ ದೇಶಸೇವೆಗಾಗಿಯೋ ಸರ್ಕಾರದ ಕೆಲಸವನ್ನು ಕೈಗೊಳ್ಳುವುದು ತಪ್ಪಾಗದು.

ಹೆಚ್ಚು ಸಂಬಳದ ಒಬ್ಬ ಅಧಿಕಾರಿಗಿಂತಲೂ ಒಂದು ಎಕರೆ ಭೂಮಿಯನ್ನು ಸ್ವಂತವಾಗಿ ವ್ಯವಸಾಯ ಮಾಡುವ ರೈತನು ಅಥವಾ ಸಾಮಾನ್ಯವಾದ ಬಂಡವಾಳದಿಂದ ವ್ಯಾಪಾರಮಾಡುವ ವರ್ತಕನು ಮೇಲು. ಏಕೆಂದರೆ—ಅವನು ಸೇವಕನು, ಇವರು ಸ್ವತಂತ್ರರು. ಅವನದು ಕ್ಷಣಿಕ, ಇವರದು ಶಾಶ್ವತ. ಅವನ ಅದೃಷ್ಟವು ಪರಿಮಿತ ಇವರದು ಅಪರಿಮಿತ. ಪ್ರಜೆಗಳಾದವರು ತಮ್ಮ ಸ್ವಂತ ಕೆಲಸದಲ್ಲೇ ಇರಲಿ ಸರ್ಕಾರದ ಉದ್ಯೋಗದಲ್ಲೇ ಇರಲಿ ವಿದ್ಯಾವಂತರಾಗಿ ಬುದ್ಧಿವಂತರಾಗಿ, ಮರ್ಯಾದೆಯುಳ್ಳವರಾಗಿ ಪ್ರಾಮಾಣಿಕರಾಗಿ ತಮ್ಮ ಕರ್ತವ್ಯವನ್ನು ತಾವು ಮಾಡುತ್ತಿದ್ದರೆ ಇತರರಿಗೆ ತಾನಾಗಿ ಒಳ್ಳೆಯದಾಗುವುದು. ಮತ್ತು ರಾಜ್ಯವು ಉತ್ತಮ ಸ್ಥಿತಿಗೆ ಬರುವುದು.

ಪ್ರಜೆಗಳಿಗೆ ತಮ್ಮ ರಾಜ್ಯದ ಸ್ವರೂಪವು ಚೆನ್ನಾಗಿ ಗೊತ್ತಿರಬೇಕು. ಚಿತ್ರದುರ್ಗವು ನಮ್ಮ ರಾಜ್ಯಕ್ಕೆ ಸೇರಿದ್ದೆಂಬುದು ಮೈಸೂರು ಡಿಸ್ಟ್ರಿಕ್ಟಿನ ನಿವಾಸಿಗೆ ಗೊತ್ತಿಲ್ಲದಿರುವ ಪಕ್ಷಕ್ಕೂ ಯುವರಾಜರವರು ಯಾವ ದೇಶದಿಂದ ಬಂದವರೆಂದು ಕೇಳುವಪಕ್ಷಕ್ಕೂ ನಮ್ಮ ದೇಶದ ಪ್ರಜೆಗಳಲ್ಲಿ ಅನೇಕರು ಮೂಢರಾಗಿದ್ದಾರೆ. ಪ್ರಜೆಗಳು ಸರ್ಕಾರಕ್ಕೆ ಕಂದಾಯಗಳನ್ನು ಕೊಟ್ಟುಬಿಟ್ಟ ಮಾತ್ರಕ್ಕೇ ಕೃತಾರ್ಥರಾದಂತೆ ತಿಳಿಯಬಾರದು. ತಮ್ಮ ಹಕ್ಕುಬಾಧ್ಯತೆಗಳೇನು, ತಾವು ಏಕೆ ಕಂದಾಯವನ್ನು ಕೊಡಬೇಕು. ಇದಕ್ಕೆ ಸರ್ಕಾರದಿಂದ ದೊರೆಯುವ ಪ್ರತಿಫಲವೇನು, ಇದಕ್ಕಾಗಿ ಯಾವ ಯಾವ ಇಲಾಖೆಗಳಿವೆ. ಅವುಗಳ ಕೆಲಸಗಳೇನೇನು, ಖರ್ಚುವೆಚ್ಚಗಳೆಷ್ಟೆಷ್ಟು! ಯಾವಯಾವ ಅಂಶಗಳಲ್ಲಿ ಗುಣದೋಷಗಳಿವೆ, ಎಂಥ ಸಂದರ್ಭಗಳಲ್ಲಿ ಸರ್ಕಾರದಿಂದ ಅಸಾಧಾರಣವಾದ ಸಹಾಯವನ್ನು ಪಡೆಯಬಹುದು, ತಾವಾಗಿ ಸರ್ಕಾರಕ್ಕೆ ಮಾಡಬಹುದಾದ ಸಹಾಯಗಳಾವುವು, ಯಾವಯಾವ ಹೊಸ ವಿಧಿಗಳು ಅವಶ್ಯಕ, ಜನಗಳ ಮತ್ತು ವಾಸಸ್ಥಳಗಳ ಮೇಲ್ಮೆಗೂ ಜೀವನಕ್ಕೂ ಸುಲಭವಾದ ಉಪಾಯಗಳೇನು ಇತ್ಯಾದಿಗಳನ್ನೆಲ್ಲಾ ಅರಿತಿರಬೇಕು. ಇದಕ್ಕೇನೂ ಕಷ್ಟಪಡಬೇಕಾದುದಿಲ್ಲ. ಯಾವ ದ್ರವ್ಯವೂ ಬೇಕಿಲ್ಲ. ಆದರೆ ವಿದ್ಯಾಬುದ್ಧಿಗಳೇನೋ ಅವಶ್ಯಕ. ಹೀಗೆಂದು ಓದುಬರಹಗಳನ್ನು ಮಾತ್ರ ಕಲಿತು ಸುಮ್ಮನೆ ಕುಳಿತರೆ ಸಾಲದು ವರ್ತಮಾನ ಪತ್ರಿಕೆಗಳು, ಸರ್ಕಾರದ ರಿಪೋರ್ಟುಗಳು, ಉಪನ್ಯಾಸಗಳು, ಪುಸ್ತಕಗಳು ಇತ್ಯಾದಿ

ಗಳಿಂದಲೂ ಪ್ರಯೋಜನಗಳನ್ನು ಪಡೆಯಬೇಕು. ಮತ್ತು ಅನೇಕರು ಸರ್ಕಾರದವರೊಡನೆ ತಮಗೆ ಇಷ್ಟವಾದುದನ್ನು ಅರಿಕೆಮಾಡಿಕೊಳ್ಳಬೇಕಾದರೆ ಎಲ್ಲರೂ ತಮ್ಮತಮ್ಮ ಮನಸ್ಸು ಬಂದಂತೆ ಕೂಗಿಕೊಳ್ಳಬಾರದು. ಇದು ಅನಾಗರಿಕತೆ. ಮತ್ತು ಕೇಳುವವರಿಗೆ ಬೇಸರವಾಗುವುದರಿಂದ ಕೆಲಸವೇ ಕೆಟ್ಟುಹೋದೀತು. ಆದುದರಿಂದ ಅನೇಕರು ಸೇರಿ ಒಂದೊಂದು ಸಭೆಯನ್ನು ಮಾಡಿಕೊಂಡು ವಿಷಯಗಳನ್ನು ಚರ್ಚಿಸಿ ತಮ್ಮ ಪಕ್ಷವಾಗಿ ಒಬ್ಬಿಬ್ಬರು ಪ್ರತಿನಿಧಿಗಳನ್ನು ಆರಿಸಿ ಕಳುಹಿಸುವುದುತ್ತಮ.

ಪ್ರಜೆಗಳಾದ ನಮ್ಮಲ್ಲಿ ; ಇವನು ಹಿಂದು, ಇವನು ಮುಸಲ್ಮಾನ, ಇವನು ಧನಿಕ, ಇವನು ಬಡವ, ಇವನು ಮಿತ್ರ, ಇವನು ಶತ್ರು ಎಂಬ ಭೇದಭಾವಗಳನ್ನಿಡದೆ ಎಲ್ಲರೂ ಒಬ್ಬ ತಾಯಮಕ್ಕಳಂತೆ ಪರಸ್ಪರ ಸಹೋದರರ ಪ್ರೀತಿಯಿಂದ ಒಗ್ಗಟ್ಟಾಗಿ ನಡೆದರೆ ಎಂಥೆಂಥ ಕೆಲಸಗಳೂ ಕೈಗೂಡುವುವು. ಪರಸ್ಪರ ಸಹಾಯದ ಬ್ಯಾಂಕುಗಳು, ಕೃಷಿ ಕೈಗಾರಿಕೆಗಳನ್ನು ವೃದ್ಧಿಪಡಿಸಿಕೊಳ್ಳುವುದಕ್ಕೂ ಮತವಿಚಾರಗಳನ್ನು ತಿಳಿದುಕೊಳ್ಳುವುದಕ್ಕೂ ತಕ್ಕ ಸಂಘಗಳು, ವಾಚಕಮಂದಿರಗಳು ಇಂಥವನ್ನು ಕಲ್ಪಿಸಿಕೊಂಡು ಸರ್ಕಾರದ ಉತ್ತೇಜನೆಯನ್ನು ಪಡೆದು ವೃದ್ಧಿಗೆ ಬರಬಹುದು. ಪ್ರಜಾಪ್ರತಿನಿಧಿಗಳಲ್ಲಿ ಮತ್ತು ಪೌರಕಾರ್ಯನಿರ್ವಾಹಕ ಸಮಾಜಗಳಲ್ಲಿ ಕೆಲವರು ದುಷ್ಟರು. ತಮ್ಮನ್ನು ಚುನಾಯಿಸಿದ್ದಾಗುವವರೆಗೂ ಜನರನ್ನು 'ಇಂದ್ರ ಚಂದ್ರ ದೇವೇಂದ್ರ' ಎಂದು ಹೊಗಳುತ್ತಿದ್ದು, ಬಳಿಕ ಸರ್ಕಾರದ ಅಧಿಕಾರಿಗಳ ದಾಕ್ಷಿಣ್ಯಕ್ಕೊಳಪಟ್ಟೋ ಅಥವಾ ತಮ್ಮ ಪದವಿಗೆಲ್ಲಿ ಭಂಗ ಬಂದೀತೋ ಎಂದು ಹೆದರಿಯೋ ಅಂತು ಜನಗಳಿಗೆ ಅನುಕೂಲತೆಯನ್ನು ಕಲ್ಪಿಸುವುದಕ್ಕೆ ಬದಲಾಗಿ ಪ್ರತಿಕೂಲರಾಗುವುದುಂಟು. ಇಂಥವರು ದ್ರೋಹಿಗಳು. ಆದುದರಿಂದ ಜನರು ಪ್ರತಿನಿಧಿಗಳನ್ನಾರಿಸುವುದರಲ್ಲಿ ಅವರ ಶೀಲಸ್ವಭಾವಗಳು, ಯೋಗ್ಯತೆ, ಮನೆತನ, ಘನತೆ, ಇತ್ಯಾದಿಗಳನ್ನೆಲ್ಲಾ ಯೋಚಿಸಬೇಕು. ಇಲ್ಲದಿದ್ದರೆ ಚೇಳಿಗೆ ಪಾರಪತ್ಯವನ್ನು ಕೊಟ್ಟಂತೆ ಆದೀತು. ಪ್ರತಿಕಸಬಿನವರೂ ಪ್ರತಿಪಂಗಡದವರೂ ತಮ್ಮತಮ್ಮ ವೃದ್ಧಿಗೆ ತಕ್ಕಂಥ ಏರ್ಪಾಡುಗಳನ್ನು ಮಾಡಿಕೊಳ್ಳಬೇಕು.

ಯಾವ ರಾಜ್ಯದಲ್ಲೂ ಯಾವುದೊಂದು ಅನ್ಯಾಯವೂ ನಡೆಯದಿರುವುದು ಅಸಾಧ್ಯ. ಒಂದೇಸಲಕ್ಕೆ ಅದನ್ನು ತಪ್ಪಿಸುವುದು ದುಸ್ತರವಾದರೂ ಅದಕ್ಕಾಗಿ ಸರ್ಕಾರದವರೂ ಪ್ರಜೆಗಳೂ ಸೇರಿ ಯತ್ನಿಸಬೇಕು. ಉತ್ತಮವಾದ ಸರ್ಕಾರವನ್ನು ಪಡೆದಿರುವುದರಿಂದ ನಾವೇ ಪುಣ್ಯಶಾಲಿಗಳು. ಜಾತಿ, ಮತ, ಕುಲ, ಬಡತನ, ಸಿರಿತನ ಮುಂತಾದ ಯಾವ ಪಕ್ಷಪಾತವೂ ಇರಕೂಡದೆಂದು ಸರ್ಕಾರದವರು ಸರ್ವಸಮವಾದ ವಿಧಿಗಳನ್ನು ಏರ್ಪಡಿಸಿದ್ದಾರೆ. ಎಲ್ಲರೂ ತನುಧನಮನಗಳಿಗೆ ಸ್ವತಂತ್ರರಾಗಿದ್ದಾರೆ. ತಪ್ಪಿತಸ್ಥರೆಂದು ರುಜುವಾತಾದರೆ ವಿನಾ ಎಲ್ಲರೂ ಸಭ್ಯರೆಂದೇ ಗಣಿಸಲ್ಪಟ್ಟಿದಾರೆ. ಒಂದೇ ತಪ್ಪಿತಕ್ಕೆ ಎರಡುಸಲ ಶಿಕ್ಷೆಯಾಗುವುದಿಲ್ಲ. ಯಾವ ವ್ಯವಹಾರದಲ್ಲಿಯೂ ಕಕ್ಷಿಪ್ರತಿಕಕ್ಷಿಗಳನ್ನು ಪ್ರತ್ಯಕ್ಷವಾಗಿ ನಿಲ್ಲಿಸಿಕೊಂಡು ಬಹಿರಂಗವಾಗಿ ನ್ಯಾಯಾಧಿಪತಿಗಳ ಮುಂದೆ ವಿಚಾರಣೆಯು ನಡೆಯಿಸಲ್ಪಡುತ್ತದೆ. ಯಾವನೂ ತನ್ನ ಸ್ವಂತವ್ಯವಹಾರದಲ್ಲಿ ತಾನೇ ನ್ಯಾಯಾಧಿಪತಿಯಾಗಕೂಡದೆಂದಾಗಿದೆ. ನಮ್ಮ ಶ್ರೀಮನ್ಮಹಾರಾಜರವರು ತಮ್ಮ ಪ್ರಜೆಗಳನ್ನೆಲ್ಲಾ ಪುತ್ರನಿರ್ವಿಶೇಷವಾಗಿ ರಕ್ಷಿಸುತ್ತಿದಾರೆ. ಇಂಥ ಅಪಾರವಾದ ಸೌಕರ್ಯಗಳುಳ್ಳ ಧರ್ಮಪ್ರಭುಗಳ ರಾಜ್ಯಭಾರದಲ್ಲಿ ನ್ಯಾಯವಾಗಿ ನೆಮ್ಮದಿಯಿಂದಿರುವುದಕ್ಕೆ ನಮಗೇ ಕಷ್ಟ?

ಜನಗಳಿಗೆ ಉಪನ್ಯಾಸಗಳ ಮೂಲಕವಾಗಿ ಬುದ್ಧಿಹೇಳುವುದು, ಪ್ರತಿನಿಧಿಗಳನ್ನು ಚುನಾಯಿಸುವುದು, ಸಭೆಗಳಾಗಿ ಸೇರುವುದು, ಸರ್ಕಾರದ ಪಕ್ಷದಲ್ಲಿ ಸಾಕ್ಷಿಯಾಗಿ ಅಥವಾ ಪಂಚಾಯಿತರಾಗಿ ಸೇರಿ ಕೆಲಸಮಾಡುವುದು ಇತರರಿಗೆ ಅನ್ಯಾಯವಾಗುತಿದ್ದುದು ಗೋಚರವಾದರೆ ಸರ್ಕಾರಕ್ಕೆ ತಿಳಿಯಿಸುವುದು, ಇತರರ ಸ್ವತ್ತು ಸಿಕ್ಕಿದಾಗ ಮಾಲೀಕರು ಯಾರೆಂಬುದು ತಿಳಿಯದಿದ್ದರೆ ಅದನ್ನುಸರ್ಕಾರಕ್ಕೆ ಒಪ್ಪಿಸುವುದು, ಸಂಬಳವನ್ನು ಪಡೆಯದೆ ಸರ್ಕಾರದ ಅಪ್ಪಣೆಯಂತೆ ಬೆಂಚ್‌ಮೆಜಿಸ್ಟ್ರೇಟ್, ಸ್ಕೂಲುಗಳ ಅಟೆಂಡೆನ್ಸ್ ಆಫೀಸರು, ಸ್ಕೂಲ್ಕಮಿಟಿಯ ಮೆಂಬರು ಸೆಕ್ರೆಟರಿ ಗ್ರಾಮಾಭಿವೃದ್ಧಿಯ ಕಮಿಟಿ ಮೆಂಬರು ಇಂಥ ಕೆಲಸಗಳನ್ನು ಕೈಗೊಂಡು ಪಾರಮಾರ್ಥಿಕತೆಯಿಂದ ನಡೆಯಿಸುವುದು, ಇಂಥವನ್ನು ನಡೆಯಿಸಲು ಶಕ್ತಿಯು ಅಥವಾ ಅವಕಾಶವು ಇಲ್ಲದಿದ್ದಲ್ಲಿ ದ್ರವ್ಯದಿಂದ ಅಥವಾ ಇತರ ವಿಧಗಳಿಂದಲಾದರೂ ಲೋಕೋಪಕಾರಮಾಡುವುದು, ಇವೆಲ್ಲಾ ನಾಗರಿಕರಾದ ಪ್ರಜೆಗಳ ಕರ್ತವ್ಯಗಳು.

ಇವನ್ನು ಸರಿಯಾಗಿ ನಡೆಯಿಸಿದರೆ ಉಪಕಾರಿಗಳಿಗೂ ಉಪಕೃತರಿಗೂ ಸರ್ಕಾರಕ್ಕೂ ಸಂತೋಷವಾಗುವುದು. ಇದರಿಂದ ಒಟ್ಟು ರಾಜ್ಯಕ್ಕೂ ಇತೋಪ್ಯತಿಶಯವಾದ ಶ್ರೇಯಸ್ಸುಂಟಾಗುವುದು.

(೩೮) ದೇಶಾಭಿಮಾನ.

ತಮ್ಮತಮ್ಮ ದೇಶವನ್ನು ಪ್ರೀತಿಸುವುದು ಮನುಷ್ಯಮಾತ್ರದಲ್ಲೆಲ್ಲಾ ನೆಲೆಗೊಂಡಿರುವ ಸ್ವಭಾವವಾಗಿದೆ. ಪ್ರತಿಯೊಬ್ಬರೂ ತಮ್ಮ ದೇಶವನ್ನು ಮಾತೃಭೂಮಿ ಅಥವಾ ಪಿತೃಭೂಮಿಯೆಂದು ಗೌರವಿಸುತ್ತಾರೆ. ಜರ್ಮನ್ ಜನರು ತಮ್ಮ ದೇಶವನ್ನು ಪಿತೃಭೂಮಿಯೆಂದು ನಂಬಿದ್ದಾರೆ. ಪ್ರತಿಯೊಬ್ಬರೂ ಲೋಕದಲ್ಲೆಲ್ಲಾ ತಮ್ಮ ದೇಶವೇ ಉತ್ಕೃಷ್ಟವಾದುದೆಂದು ಹೊಗಳಿಕೊಳ್ಳುವರು. ಆಫ್ರಿಕದ ಮರುಭೂಮಿಯ ನಿವಾಸಿಯು ತನ್ನ ಮರಳುಕಾಡಿನ ರಾಜ್ಯವನ್ನು ದೇವರೇ ಸ್ವಂತವಾಗಿ ಮಾಡಿದ್ದಾನೆಂದೂ ಇತರ ರಾಜ್ಯಗಳನ್ನು ಅನ್ಯ ಕೈಕೆಳಗಿನವರಿಂದ ಸೃಷ್ಟಿಮಾಡಿಸಿರುವನೆಂದೂ ಹೇಳಿಕೊಳ್ಳುತ್ತಾನೆ, ಮಾಲ್ಟಾದ್ವೀಪದವರು ತಮ್ಮ ದೇಶವನ್ನು ಪ್ರಪಂಚದ ಕುಸುಮವೆಂಬ ಹೆಸರಿನಿಂದ ಹೊಗಳಿಕೊಳ್ಳುತ್ತಾ ಈ ಸಂಗತಿಯನ್ನು ಒಂದು ಕಲ್ಲಿನಮೇಲೆ ಕೆತ್ತಿರುವರು. ಊಷರ ಕ್ಷೇತ್ರಸಮೃದ್ಧವಾದ ನಾರ್ವೆ ದೇಶದಲ್ಲಿ ವಾಸಮಾಡತಕ್ಕವರು ಕೂಡ ಕೇವಲ ಅಭಿಮಾನದಿಂದ ತಮ್ಮ ನಾಣ್ಯಗಳ ಮೇಲೆ 'ಉತ್ಸಾಹ, ರಾಜಭಕ್ತಿ, ಶೌರ್ಯ, ಇಂಥ ಘನತೆಯನ್ನೆಲ್ಲಾ ನಾರ್ವೆಯು ಕಲ್ಲುಗುಡ್ಡಗಳಿಂದಲೇ ಲೋಕವು ಕಲಿತುಕೊಳ್ಳಬೇಕು.' ಎಂದು ಮುದ್ರಿಸಿರುವರು. ಅತ್ಯಂತ ಅಸಹ್ಯಕರವಾದ ಶೀತವುಳ್ಳುದರಲ್ಲಿ ವಾಸಮಾಡತಕ್ಕ ಎಸ್ಕಿಮೋ ಜನಗಳು ಎಷ್ಟೋ ಮಟ್ಟಿಗೆ ನಾಗರಿಕತೆ, ಕೌಶಲ್ಯ ಮೊದಲಾದುವುಗಳಲ್ಲಿ ಸುಪ್ರಸಿದ್ಧವಾದ ರಾಜ್ಯಗಳನ್ನು ಕೂಡ ಹೀಯಾಳಿಸುತ್ತಲೂ ತಿಮಿಂಗಿಲದ ಕೊಬ್ಬಿನ ಎಣ್ಣೆ ಮೀನುಗಳ ಆಹಾರ, ಮಂಜಿನಗಡ್ಡೆಗಳಿಂದ ಕಟ್ಟಿದ ಮನೆಗಳಲ್ಲಿ ವಾಸ ಮೊದಲಾದುವೇ ಸ್ವರ್ಗಭೋಗವೆಂದೂ ಶ್ಲಾಘಿಸಿಕೊಳ್ಳುತ್ತಿರುವರು. ಜಪಾನರು ಫ್ಯೂಸಿಯಾಮ ಶಿಖರವನ್ನು ಅತಿ ಸುಂದರವಾದ ಲೋಕಾಲಂಕಾರವೆಂದು ಗೌರವಿಸುವರು. ತಮ್ಮ ಯಾವ ಚಿತ್ರಪಟದಲ್ಲಿಯೂ ಇದನ್ನು ಬರೆಯದಿದ್ದರೆ ಅವರಿಗೆ ಮುಂದಕ್ಕೆ ಕೈಯೇ ಓಡದು.

ಮನುಷ್ಯನು ಯಾವ ಪರದೇಶದಲ್ಲಿದ್ದರೂ ತನ್ನ ದೇಶದ ಕುರುಹುಗಳನ್ನು ಎಂದಿಗೂ ಮರೆಯನು. ಉದಾ—ಏಷ್ಯಾಖಂಡದ ಯಾವುದೋ ಒಂದು ದ್ವೀಪದ ನಿವಾಸಿಯು ಪ್ಯಾರಿಸ್ ಪಟ್ಟಣಕ್ಕೆ ಹೋಗಿ ಅಲ್ಲಿ ವಿಚಿತ್ರ ವಸ್ತುಪ್ರದರ್ಶನಶಾಲೆಯಲ್ಲಿ ಎಲ್ಲವನ್ನೂ ನೋಡುತ್ತ ಬಂದಾಗ ಸಸ್ಯವರ್ಗಗಳ ನಡುವೆ ಒಂದು ಆಲದಗಿಡವನ್ನು ಕಂಡು ಪರಮಾನಂದದಿಂದ ಕಣ್ಣೀರಿಟ್ಟನು. ಆತನು ಆ ಕಾಲದಲ್ಲಿ ಮನೋವೇಗದಿಂದ ಸ್ವರಾಜ್ಯವನ್ನು ಸೇರಿ ಅಲ್ಲಿಯ ಸಂಗತಿಗಳನ್ನೆಲ್ಲಾ ಜ್ಞಾನದೃಷ್ಟಿಯಿಂದ ನೋಡಿದನೆನ್ನಬಹುದು.

ರಾಜ್ಯದ ಮೇಲ್ಮೆಯು ಅದರ ವಿಸ್ತಾರದಂತೆ ತಿಳಿಯಲ್ಪಡತಕ್ಕುದಲ್ಲವೆಂತಲೂ ಅಲ್ಲಿಯ ನಿವಾಸಿಗಳ ಸ್ವಭಾವದಂತೆ ನಿರ್ಧರಿಸಲ್ಪಡತಕ್ಕುದೆಂತಲೂ ಪ್ರಾಜ್ಞರು ಹೇಳುವರು. ನಮ್ಮ ದೇಶದಿಂದ ಹೊರಕ್ಕೆ ಎಲ್ಲಿಯಾದರೂ ಹೋಗಿ ಬಹಳಕಾಲ ನಿಂತರೆ ಆಗ್ಗೆ ನಮಗೆ ಸ್ವದೇಶದ ವಿಷಯಗಳೆಲ್ಲಾ ಹೊಸದಾಗಿ ತೋರುವುವು. ಎಂದಾದರೊಂದುದಿನ ಸ್ವದೇಶದ ಮೇಲೆ ಮನಸ್ಸುಬಿದ್ದರೆ ಆಗ ಅವುಗಳೆಲ್ಲಾ ಒಂದೊಂದಾಗಿ ನೆನಪಿಗೆ ಬರುವುವು. ಆಗ ಆ ಪರಸ್ಥಳದಲ್ಲಿ ಯಾರಾದರೊಬ್ಬ ಸ್ವದೇಶೀಯನನ್ನು ಕಂಡರೂ ಎಷ್ಟೋ ಸಂತೋಷದಿಂದ ಅವನನ್ನು ಆದರಿಸುವೆವು. ಕಾರಣವೇನು ? ಸ್ವದೇಶೀಯರೆಂಬ ಅಭಿಮಾನವಲ್ಲವೆ ? ಹೀಗೆಯೇ ಯಾರು ತಮ್ಮ ಸ್ವಂತದೇಶವನ್ನು ಬಿಟ್ಟು ಹೊರಗೆ ಎಲ್ಲಿಗೆ ಹೋದರೂ ಅವರಿಗೆ ಸ್ವದೇಶದ ಮೇಲೆ ಅಭಿಮಾನವು ತಪ್ಪುವುದಿಲ್ಲ.

ದೇಶಾಭಿಮಾನವಿದ್ದರೆ ಹೇಗಾದರೂ ತಮ್ಮ ರಾಜ್ಯವನ್ನೂ ಅದಕ್ಕೆ ಸಂಬಂಧಪಟ್ಟವುಗಳನ್ನೂ ಕಾಪಾಡಿಕೊಳ್ಳಬೇಕೆಂಬುದರಲ್ಲಿ ಗಮನವಿರುವುದರಿಂದ ಅಂಥವರು ಎಂಥ ಕಷ್ಟಗಳಲ್ಲಿಯೂ ಎದೆಗುಂದುವುದಿಲ್ಲ. ವಸ್ತುತಃ ನೋಡಿದರೆ ನಮ್ಮಲ್ಲಿ ರೈತರೇ ನಿಜವಾದ ದೇಶಾಭಿಮಾನಿಗಳು. ಹೇಗೆಂದರೆ—ಯಾವ ಸಂದರ್ಭದಲ್ಲಿಯೂ ಅವರು ತಮ್ಮ ಮಾತೃಭೂಮಿಯನ್ನಗಲದೆ ಅದರ ಉತ್ತಮ ಸ್ಥಿತಿಗೋಸ್ಕರ ಸರ್ವದಾ ಪ್ರಯತ್ನಪಡುತ್ತಲೇ ಇರುವರು. ಒಬ್ಬ ಮನುಷ್ಯನು ತನ್ನ ಇಬ್ಬರು ಮಕ್ಕಳೂ ಯುದ್ಧದಲ್ಲಿ ನೊಂದು ಗಾಯಪಟ್ಟು ನರಳುತ್ತಿರುವುದನ್ನು ನೋಡುತ್ತ ನಿಂತಿದ್ದಾಗ ಯಾರೋ ಬಂದು—ಅಯ್ಯಾ, ನಿನ್ನ ಮಕ್ಕಳಿಗೆ 'ಇಂಥ ಗಂಡವು ಪ್ರಾಪ್ತವಾದುದಕ್ಕಾಗಿ ನಿನಗೆ ತುಂಬ

ವ್ಯಸನವಾಗುತ್ತಿದೆಯಲ್ಲವೇ? ಎಂದು ಕೇಳಿದುದಕ್ಕೆ ಆತನು—ಇಲ್ಲ, ನನಗೆ ಇನ್ನೂ ಇಪ್ಪತ್ತು ಜನ ಮಕ್ಕಳಿದ್ದರೂ ಅವರನ್ನೆಲ್ಲಾ ದೇಶಸೇವೆಗೋಸ್ಕರ ಸಂತೋಷವಾಗಿ ಒಪ್ಪಿಸುತ್ತಿದ್ದೆನು, ಎಂದನಂತೆ.

ದೇಶಾಭಿಮಾನವೆಂದರೆ ಆ ರಾಜ್ಯದ ಬಾವುಟವನ್ನು ನೋಡಿ ಸುಮ್ಮನೆ ಹಿಗ್ಗುವುದು. ಅಥವಾ ಆ ವಿಷಯವಾಗಿ ಹಾಡುಗಳನ್ನು ಹೇಳುವುದು ಇಷ್ಟರಲ್ಲಿಯೇ ಪರ್ಯವಸಿತವಾಗತಕ್ಕುದಲ್ಲ. ಇದು ನಾನಾಮುಖಗಳಲ್ಲಿಯೂ ಪ್ರಕಟಗೊಳ್ಳುವುದಕ್ಕೆ ಅವಕಾಶವುಂಟು. ಹಾಗೆ ಮೇಲಾದ ಯಾವುದೊಂದು ರೂಪದಲ್ಲಿಯೂ ಪ್ರಕಟಪಡಿಸದೆ ಬರೀ ಬಾಯುಮಾತಿನಿಂದ ಮಾತ್ರ ಹೇಳುತ್ತಿರುವುದು ಕಾಪಟ್ಯವೆನಿಸುವುದು. ನಮ್ಮ ರಾಜ್ಯದಲ್ಲಿ ಎಷ್ಟೋಜನ ಹಳೆಯವರಿದ್ದು ಲೋಕೋಪಕಾರ ಮಾಡಿರುವುದರಿಂದ ಅವರು ಗತಿಸಿ ಬಹಳ ಕಾಲವಾದರೂ ಈಗಲೂ ಎಲ್ಲರೂ ಅವರನ್ನು ಕೊಂಡಾಡುತ್ತಿರುವರು. ನಮ್ಮ ಹಿಂದಿನವರು ನಮಗೋಸ್ಕರ ಎಷ್ಟು ಕಷ್ಟಪಟ್ಟು ಎಂಥೆಂಥ ಅನುಕೂಲತೆಗಳನ್ನು ಕಲ್ಪಿಸಿರುವರು! ಕೆರೆಗಳು, ರಸ್ತೆಗಳು, ಮನೆ ಬಾಗಿಲುಗಳು, ದೇವಾಲಯಗಳು, ಆಸ್ಪತ್ರೆಗಳು, ಉತ್ತಮವಾದ ಗ್ರಂಥಗಳು ಇತ್ಯಾದಿಗಳನ್ನೆಲ್ಲಾ ಅವರು ಮಾಡಿಟ್ಟಿರದಿದ್ದರೆ ನಮಗೆಷ್ಟು ಕಷ್ಟವಾಗುತ್ತಿದ್ದಿತು! ದೇಶಾಭಿಮಾನವೆಂದರೆ ಸುಮ್ಮನೆ ನಮ್ಮದೇಶ, ನಮ್ಮಜನ ಎಂದು ಅಹಂಕಾರ ಪಡುವುದಿಲ್ಲ; ನಮ್ಮಪೂರ್ವಿಕರು ನಮ್ಮ ರಾಜ್ಯದಲ್ಲಿ ಎಂಥೆಂಥ ಮೇಲಾದ ಕೆಲಸಗಳನ್ನು ಎಷ್ಟೆಷ್ಟು ಕಷ್ಟಪಟ್ಟು ಮಾಡಿರುವರೆಂಬುದನ್ನು ಯೋಚಿಸಿ ನಾವೂ ಅವರಂತೆಯೇ ನಮ್ಮ ದೇಶದ ಹಿತಕ್ಕಾಗಿ ಕೈಲಾದ ಮಟ್ಟಿಗೂ ಸಹಾಯಮಾಡಬೇಕು. ಸಹಾಯಮಾಡುವುದೆಂದರೆ ಕೈಯಿಂದ ಏನಾದರೂ ದ್ರವ್ಯವನ್ನು ತೆತ್ತುಬಿಡುವುದೆಂದಲ್ಲ. ಇದಕ್ಕಾಗಿ ಯಾರೂ ಏನೂ ತೊಂದರೆ ಪಡಬೇಕಾದುದೂ ಇಲ್ಲ. ಎಲ್ಲರೂ ತಮ್ಮತಮ್ಮ ಕೆಲಸಗಳನ್ನಾದರೂ ತಾವುತಾವು ಉತ್ಸಾಹದಿಂದಲೂ ಶ್ರದ್ಧೆಯಿಂದಲೂ ಪ್ರಾಮಾಣಿಕತೆಯಿಂದಲೂ ಮಾಡುತ್ತಬಂದರಾಯಿತು. ಯಾವ ರಾಜ್ಯದಲ್ಲಿ ಯಾರು ಕಷ್ಟಪಟ್ಟು ಕೆಲಸಮಾಡುವರೋ ಅವರೆ ಆ ರಾಜ್ಯಕ್ಕೆ ಪ್ರಾಣನಾಡಿಗಳು ಎನ್ನಬಹುದು.

ತಮ್ಮ ದೇಶವು ವೃದ್ಧಿಗೆ ಬರಬೇಕೆಂದು ಬಯಸತಕ್ಕವರು ಇತರ ದೇಶಗಳಿಗೆ ಕೇಡನ್ನು ಹಾರಯಿಸಬಾರದು. ಏಕೆಂದರೆ—ಲೋಕದಲ್ಲೆಲ್ಲಾ ಕೊಳ್ಳುವುದು ಕೊಡುವುದು ಎಂಬ ಎರಡು ಕೆಲಸಗಳೇನೋ ನಡದೇ ತೀರ ಬೇಕಷ್ಟೆ. ಇತರ ರಾಜ್ಯಗಳೂ ಸುಖವಾಗಿದ್ದರೆ ಈ ಕೆಲಸಕ್ಕೆ ಅನುಕೂಲ. ಅದಿಲ್ಲದಿದ್ದರೆ ವ್ಯಾಪಾರವು ಸರಿಯಾಗಿ ನಡೆಯದೆ ಅನಾನುಕೂಲತೆಯೂ ಅನಾಗರಿಕತೆಯೂ ಉಂಟಾಗಲು ಅವಕಾಶವಾಗುವುದು. ಈಗ ಯೂರೊಪ್ ಖಂಡದಲ್ಲಿ ಜರ್ಮನಿಗೂ ಇತರ ರಾಜ್ಯಗಳಿಗೂ ನಡೆಯುತ್ತಿರುವ ಯುದ್ಧಗಳಿಂದ ಒಟ್ಟು ಪ್ರಪಂಚದ ಸಮಸ್ತ ರಾಜ್ಯಗಳ ಜನಗಳಿಗೂ ಎಷ್ಟು ತೊಂದರೆಯಾಗಿದೆಯೆಂಬುದೇ ಇದಕ್ಕೆ ಸಾಕಾದ ದೃಷ್ಟಾಂತವಾಗಿರುವುದು. ಸ್ವದೇಶಕ್ಕೆ ವೃದ್ಧಿಯೂ ಯಶಸ್ಸೂ ಉಂಟಾಗುವಂತೆ ಯತ್ನಿಸಬೇಕು. ಮತ್ತು ಹತ್ತು ಜನಗಳಿಗೆ ಉಪಕಾರವಾಗುವ ಕೆಲಸದಲ್ಲಿ ಸ್ವಸುಖವನ್ನು ಕೂಡ ಪರಿತ್ಯಜಿಸಲೇ ಬೇಕು,

ತನ್ನ ದೇಶದಲ್ಲಿರುವ ದುರಾಚಾರಗಳನ್ನು ತೊಲಗಿಸತಕ್ಕದ್ದು ಪ್ರತಿಯೊಬ್ಬ ದೇಶಾಭಿಮಾನಿಗೂ ಕರ್ತವ್ಯವು. ಸೋಮಾರಿತನ, ತಾವೇ ಶ್ರೇಷ್ಠರೆಂದು ಹೇಳಿಕೊಳ್ಳುವುದು, ತಿರುಪವು ಗೌರವಾವಹವೆಂದೂ ಕೆಲಸ ಮಾಡುವುದು ಹೀನಾಯವೆಂದೂ ಭಾವಿಸುವುದು, ಕಾಪಟ್ಯ ಇಂಥ ಕೆಟ್ಟ ಪದ್ಧತಿಗಳನ್ನೆಲ್ಲಾ ತಪ್ಪಿಸುತ್ತ ಬರಬೇಕು. ತಾವು ಮಾತ್ರವಲ್ಲದೆ ಮುಂದೆ ತಮ್ಮ ಮಕ್ಕಳೂ ಸ್ವತಂತ್ರರಾಗಿ ಬಾಳಬೇಕೆಂಬುದು, ತಕ್ಕಪಟ್ಟಿಗಾದರೂ ಧೈರ್ಯ, ಇತರರಿಗೆ ತೊಂದರೆಕೊಟ್ಟು ಜೀವಿಸುವುದಕ್ಕೆ ನಾಚುವುದು. ಹತ್ತುಜನಗಳಗೋಸ್ಕರ ತಮ್ಮಿಂದ ಆಗುವಷ್ಟು ಸಹಾಯಮಾಡುವುದು, ಇಂಥ ಸುಗುಣಗಳನ್ನು ಬಾಲ್ಯದಿಂದಲೂ ಮಕ್ಕಳಿಗೆ ಕಲಿಸುತ್ತ ಬರತಕ್ಕವರೇ ನಿಜವಾದ ದೇಶಾಭಿಮಾನಿಗಳು.

ದೇಶಾಭಿಮಾನದ ವಿಷಯದಲ್ಲಿ ಪಾಶ್ಚಾತ್ಯರು, ತತ್ರಾಪಿ ಇಂಗ್ಲಿಷರು ಉತ್ತಮವಾದ ಮೇಲ್ಪಂಕ್ತಿಯಾಗಿದ್ದಾರೆ. ಅವರ ಸ್ವಂತ ದೇಶವಾದ ಇಂಗ್ಲೆಂಡ್ ನಮ್ಮ ಇಂಡಿಯಾಕ್ಕೆ ಬಂದಿರುವ ಆ ಜನಗಳಿಗೆ ಅನೇಕ ಸಹಸ್ರಮೈಲಿಗಳ ದೂರದಲ್ಲಿದೆ. ಅದು ಎಷ್ಟೋ ಸಣ್ಣರಾಜ್ಯ. ಮತ್ತು ಅದು ಒಟ್ಟು ಪ್ರಪಂಚದಲ್ಲಿ ಯಾವುದೋ ಒಂದು ಅಭುಕ್ತಮೂಲೆಯಲ್ಲಿದೆ. ಆದರೂ

ಅವರು ಇದನ್ನು ಎಷ್ಟು ಗೌರವಿಸುತ್ತಾರೆ! ನಮ್ಮ ಇಂಡಿಯಾದೇಶದಂಥ ಉತ್ತಮವಾದ ಅನೇಕ ರಾಜ್ಯಗಳನ್ನು ಗೆದ್ದುಕೊಂಡಿದ್ದರೂ ಅವರು ತಮ್ಮ ಪೂರ್ವದ ಸ್ಥಳವನ್ನೇನೂ ಎಂದಿಗೂ ಬಿಡುವುದಿಲ್ಲ. ಅವರು ಭೂಗೋಳದ ಮೇಲೆಲ್ಲಾ ಆಡಳಿತ ಮಾಡುತ್ತಿದ್ದರೂ ಇಂಗ್ಲೆಂಡೇ ತಮ್ಮ ದೇಶವೆಂದು ಕರೆದುಕೊಳ್ಳುತ್ತಾರೆ. ಎಲ್ಲಿಗೆ ಹೋದರೂ ತಮ್ಮ ಭಾಷೆಯನ್ನೇ ಆಡುತ್ತ ತಮ್ಮ ಉಡುಪನ್ನೇ ಧರಿಸುತ್ತ ತಮ್ಮ ಮತವನ್ನೇ ಅವಲಂಬಿಸಿಕೊಂಡು ತಮ್ಮ ಪದ್ಧತಿಗಳನ್ನೇ ಆಚರಿಸುತ್ತ ಇದ್ದಾರೆ. ಮತ್ತು ತಾವು ಜಯಿಸಿದ ರಾಜ್ಯಗಳಲೆಲ್ಲಾ ತಮ್ಮ ಭಾಷೆಯನ್ನೇ ಹರಡುತ್ತಲೂ ಇತರ ಭಾಷೆಗಳ ಸಾರವನ್ನೆಲ್ಲಾ ತಮ್ಮ ಭಾಷೆಗೆ ಹೀರಿಕೊಳ್ಳುತ್ತಲೂ ಇದ್ದಾರೆ. ಅವರ ದೇಶಾಭಿಮಾನವನ್ನು ನೋಡಿದಿರಾ! ಇದನ್ನು ಪಡೆದಿರುವುದರಿಂದ ಅವರಲ್ಲಿ ಐಕಮತ್ಯವಿರುವುದು. ಈ ಐಕಮತ್ಯವೂ ಸಾಹಸವೂ ಇರುವುದರಿಂದಲೇ ಭೂಗೋಳದಲ್ಲಿ ಮೂರನೆಯ ಒಂದುಪಾಲಿಗಿಂತಲೂ ಅಧಿಕವಾದ ರಾಜ್ಯಗಳು ಅವರ ಅಧೀನದಲ್ಲಿ ಸುಖವಾಗಿರುವುವು.

ಪಾಶ್ಚಾತ್ಯರಲ್ಲನೇಕರು ದೇಶಾಂತರಗಳಲ್ಲಿ ವಾಸಮಾಡುತ್ತಿರುವುದರಿಂದ ಅವರಲ್ಲಿ ದೇಶಾಭಿಮಾನವು ಹೆಚ್ಚಾಗಿರುವುದೆಂದು ಕೆಲವರು ಹೇಳುವರು. ವಾಷಿಂಗ್ಟನ್, ನೆಪೋಲಿಯನ್, ರಾಜಪುತ್ರರು, ಮರಾಟೆಯವರು, ರೆಗುಲಸ್, ಇತ್ಯಾದಿ ಶೂರರೂ, ಕಾಳಿದಾಸ, ಷೇಕ್ಸ್‌ಪಿಯರ್ ಮೊದಲಾದ ಕವಿಗಳೂ ನಿಜವಾದ ದೇಶಾಭಿಮಾನಿಗಳು.

ಕೆಲವರು ತಾವು ದೇಶಾಭಿಮಾನಿಗಳೆಂದು ಹೊಗಳಿಸಿಕೊಂಡು ಕೀರ್ತಿಯನ್ನು ಪಡೆಯುವುದಕ್ಕೆ ಅಥವಾ ಸರ್ಕಾರದಿಂದ ಬಿರುದುಗಳನ್ನು ಹೊಂದುವುದಕ್ಕೆ ಹೀಗೆ ಮಾಡುವುದಾದರೊಂದು ಬಗೆಯ ಸ್ವಾರ್ಥಪರತೆಯ ದುರುದ್ದೇಶದಿಂದ ನಾನಾವಿಧವಾದ ಉಪನ್ಯಾಸಗಳನ್ನು ಮಾಡುತ್ತ ದೇಶಾಭಿಮಾನವೇ ಅವತಾರಗೊಂಡು ಬಂದಿರುವುದೋ ಎಂಬಂತೆ ಜನಗಳನ್ನು ಮರುಳು ಮಾಡುವರು. ಇಂಥವರು ಅಧಮರು. ಇನ್ನು ಕೆಲವರು ಹೊರಗೆ ಈ ರೀತಿಯಾಗಿ ನಟಿಸುವುದುಮಾತ್ರವಲ್ಲದೆ ಒಳಗೇ ಪಿತೂರಿ ಮಾಡುತ್ತ ಸ್ವರಾಜ್ಯಕ್ಕೇ ಕೇಡೆಣಿಸುವರು. ಇಂಥವರು ರಾಜ್ಯಕ್ಕೆ ಶತ್ರುಗಳಿಗಿಂತಲೂ ಹೆಚ್ಚು ಕೆಡಕರು.

ಸ್ವದೇಶದ ವಿಷಯದಲ್ಲಿ ಮಾತ್ರವಲ್ಲದೆ ಪರದೇಶಗಳಲ್ಲಿಯೂ ಬೆಂಕಿಯ ಅಥವಾ ನೀರಿನ ಅನಾಹುತ, ಕ್ಷಾಮ, ಭೂಕಂಪ, ಬಿರುಗಾಳಿ, ಯುದ್ಧ ಮೊದಲಾದವುಗಳಿಂದ ಏನಾದರೂ ಕಷ್ಟನಷ್ಟಗಳು ಸಂಭವಿಸಿದುದನ್ನು ತಿಳಿದರೂ ನಮ್ಮಿಂದ ಸಾಧ್ಯವಾಗುವಷ್ಟು ಸಹಾಯವನ್ನಾದರೂ ಮಾಡಿ ನಮ್ಮ ಅನುತಾಪವನ್ನು ತೋರಿಸಬೇಕು. ರೈಲುರಸ್ತೆಗಳು ಬಂಡಿಯಮಾರ್ಗಗಳು, ವರ್ತಮಾನಪತ್ರಿಕೆಗಳು, ಅಂಚೆ, ಇಂಥ ಸೌಕರ್ಯಗಳು ಹೆಚ್ಚುತ್ತ ಬಂದಂತೆಲ್ಲಾ ಜನಗಳು ಪ್ರತ್ಯಕ್ಷವಾಗಿ ಅಥವಾ ಬರೆವಣಿಗೆಯ ಮೂಲಕವಾಗಿ ಪರಸ್ಪರ ಅಭಿಪ್ರಾಯಗಳನ್ನು ಗ್ರಹಿಸಿಕೊಂಡು ಒಬ್ಬರ ಕಷ್ಟಸುಖಗಳನ್ನು ಮತ್ತೊಬ್ಬರು ತಿಳಿದು ಆಯಾ ಕಾಲದೇಶಗಳಿಗನುಗುಣವಾಗಿ ನಡೆದು ದೇಶಾಭಿಮಾನವನ್ನು ತೋರ್ಪಡಿಸುವುದಕ್ಕೆ ಬಹಳ ಅನುಕೂಲ. ಎಲ್ಲರೂ ಸ್ವಲ್ಪಸ್ವಲ್ಪ ಕಷ್ಟಪಟ್ಟರೂ ಒಟ್ಟು ಹೆಚ್ಚು ಫಲವನ್ನು ಅನುಭವಿಸುವುದಕ್ಕೆ ದೇಶಾಭಿಮಾನವು ತುಂಬ ಸಹಾಯಕ.

ಉದಾ—ಯಾವುದೋ ಒಂದು ದೊಡ್ಡ ಸಹಾಯವಾಗಬೇಕೆಂದು ಅರ್ಜಿಯನ್ನು ಬರೆದು ಸರ್ಕಾರಕ್ಕೆ ಕಳುಹಿಸಬೇಕಾಗಿರುವಲ್ಲಿ ಆ ಅರ್ಜಿಗೆ ರುಜು ಹಾಕುವಷ್ಟು ಮಟ್ಟಿನ ಅಲ್ಪಾಯಾಸವನ್ನು ಮಾತ್ರ ಎಲ್ಲರೂ ವಹಿಸುವುದು ಹೊರತು ಮತ್ತೆ ಯಾವ ವಿಧದಲ್ಲಿಯೂ ಯಾರೂ ಏನೂ ಕಷ್ಟಪಡಬೇಕಾಗಿರುವುದಿಲ್ಲವೆಂದು ಭಾವಿಸೋಣ. ಆದರೂ ಅದರಿಂದ ಹೆಚ್ಚಾದ ಮತ್ತು ಉತ್ತಮವಾದ ಫಲವಾಗುವ ಸಂಭವವೇನೋ ಉಂಟು. ಯಾವ ನಿಜವಾದ ದೇಶಾಭಿಮಾನಿಗಳೋ ಅವರೇ ನಿಜವಾದ ದೇಶೋದ್ಧಾರಕರು ಅವರೇ ಸ್ವರಾಜ್ಯಮಾತೃವಿಗೆ ಔರಸಪುತ್ರರು. ಅಂಥವರನ್ನು ಪಡೆದಿರುವ ದೇಶವೇ ಪುಣ್ಯಭೂಮಿಯು.

